ಮಿಂಚಿನ ಬಳ್ಳಿಯ ೭ನೆಯ ವರುಷದ ೩ನೆಯ ಕುಡಿ

# ವಿಚಾರ - ಮಂಜರಿ



ಪ್ರೊ. ದ. ರಾ. ಬೇಂದ್ರೆ ಎಂ. ಎ.

ಚಾಲುಕ್ಯ ವಿಕ್ರಮ ವರುಷ ೮೬೯

ಫೆಬ್ರುವರಿ ೧೯೪೫



~~ಸಾದಾ ಪ್ರತಿ ೨-೦-೦~~
ಸುಂದರ ಪ್ರತಿ ೨-೮-೦

೭ನೆಯ ವರುಷದ ೩ನೆಯ ಕುಡಿ

# ಜಾಗ್ರತ ಚೀನ

ಚೀನದ ಪ್ರಬಲ ಸಂಘಟನೆ, ಸ್ವಾತಂತ್ರ್ಯದ ಹೋರಾಟ,
ಚೀಯಾಂಗರ ವ್ಯಕ್ತಿತ್ವಗಳನ್ನು ತಿಳಿಯಲು
ಇದನ್ನು ಓದಬೇಕು.

'ಸಂಜಯ' ಬರೆದುದು

(ಸಂಯುಕ್ತ ಕರ್ನಾಟಕ)





ಪ್ರಕಾಶಕರು :
ಬಿ. ಜಿ. ಅವಧಾನಿ
ಮಿಂಚಿನ ಬಳ್ಳಿಯ ಚಾವಡಿ
ಧಾರವಾಡ

ಮುದ್ರಕರು :
ಆರ್. ಜಿ. ಹುಕ್ಕೇರಿ
ವಸಂತ ಪ್ರೆಸ್ ಧಾರವಾಡ

# ಸಂಪಾದಕರ ಅರಿಕೆ

ಮಿಂಚಿನ ಬಳ್ಳಿಯ ಪ್ರಕಟನೆಗಳು ಮುದ್ರಣಾಲಯಗಳಲ್ಲಿ ಕೆಲಸಗಾರರ ಅಭಾವವಿರುವದರಿಂದ ಸಕಾಲಕ್ಕೆ ಹೊರಡಲು ಅನುಕೂಲವಿಲ್ಲದಾಗಿದೆ. ಹೀಗಾಗಿ ನಿಯಮಿತ ವೇಳೆಗೆ ಪ್ರಕಟನೆಗಳು ಹೊರಡದ್ದರಿಂದ ವಾಚಕರಲ್ಲಿ ಕ್ಷಮೆಯನ್ನು ಬೇಡುತ್ತೇನೆ. ಈ ಮಸಕು ಮಸಕಾದ ಕಾಗದವನ್ನು ಉಪಯೋಗಿಸದೆ ವಿಧಿಯಿಲ್ಲದಾಗಿದೆ. ಬಿಳಿ ಕಾಗದ ದೊರೆತರೆ ನಮ್ಮ ಪ್ರಕಟನೆ ಆ ಕಾಗದದಲ್ಲಿಯೇ ಮುದ್ರಿಸುತ್ತೇವೆ. ಅಲ್ಲಿಯ ವರೆಗೆ ಸಹಾನುಭೂತಿಪರರಾದ ನಮ್ಮ ವಾಚಕರು ಅಂತಃಕರಣದಿಂದ ಈ ತೊಂದರೆಯನ್ನು ಸಹಿಸಬೇಕಾಗಿ ಬಿನ್ನಹ. ೭ನೆಯ ವರುಷದಲ್ಲಿ ಮೂರು ಪುಸ್ತಕಗಳನ್ನು ಕೊಡುವದಾಗಿ ನಿವೇದಿಸಿದ್ದೆವು. ಅದರಂತೆ ಈ ವರ್ಷದ ೨-೩ ನೆಯ ಪುಸ್ತಕಗಳು ಅಚ್ಚಿನಲ್ಲಿದ್ದವು. ಜಾಗ್ರತ ಚೀನವೇ ಬೇಗ ಮುದ್ರಿತವಾಗಬಹುದೆಂಬ ನಂಬಿಕೆಯಿಂದ ಅದನ್ನೇ ಎರಡನೆಯದನ್ನಾಗಿ ಕೊಡಬೇಕೆಂದು ನಾವು ಪ್ರಕಟಿಸಿದ್ದೆವು. ಆದರೆ ಅದರ ಮುದ್ರಣ ಪೂರ್ತಿಯಾಗದ್ದರಿಂದ ಅದನ್ನು ೩ನೆಯ ಪುಸ್ತಕವಾಗಿ ಕೊಡಲಿದ್ದೇವೆ. ಈಗ ವಿಚಾರ ಮಂಜರಿಯನ್ನು ೨ನೆಯ ಕುಡಿಯನ್ನಾಗಿ ಸಲ್ಲಿಸಿದ್ದೇವೆ.

ಈ 'ವಿಚಾರ ಮಂಜರಿಯನ್ನು' ಬರೆದುಕೊಟ್ಟ ವರಕವಿಗಳೆಂದು ಖ್ಯಾತಿವಂತರಾದ ಪ್ರೊ. ದ. ರಾ. ಬೇಂದ್ರೆಯವರು ಕನ್ನಡ ನಾಡುನುಡಿಗಳ ಉನ್ನತಿಗಾಗಿ, ಈ ಕಾಲು ಶತಮಾನ ತಪವನ್ನಾಚರಿಸುತ್ತಿರುವರು. ಅವರಿಂದ ಪ್ರೇರಿತರಾದ ಅನೇಕ ಕನ್ನಡ ತರುಣರು ಇಂದು ನಾಡುನುಡಿಗಳಿಗಾಗಿ ಹೆಣಗುತ್ತಿದ್ದಾರೆ. ಅವರ ಸ್ಫೂರ್ತಿದಾಯಕ, ಸ್ಪಷ್ಟ, ಮಾರ್ಗದರ್ಶಕ ವಿಚಾರಗಳು ಕನ್ನಡಿಗರಿಗೆ ಯಾವಾಗಲೂ ಜೀವಂತ ಝರಿಗಳು. ತರುಣ ಕನ್ನಡಿಗರು ಬೇಂದ್ರೆಯವರ ವಿಚಾರದಿಂದ ಪ್ರೋತ್ಸಾಹಿತರಾಗಿ, ಮುಂದರಿಯಬೇಕೆಂದೇ ಈ ಹೊತ್ತಿಗೆಯು ಹೊರಬೀಳಲು ಕಾರಣ.

ಈ ಅಮೌಲ್ಯವಾದ ವಿಚಾರ ಮಂಜರಿಯನ್ನು ನಮ್ಮ ಬಳ್ಳಿಯಲ್ಲಿ ಪ್ರಕಟಿಸಲು ಅನುಮತಿಯನ್ನಿತ್ತದ್ದಕ್ಕಾಗಿ ನಾವು ಅವರಿಗೆ ಎಂದಿಗೂ ಕೃತಜ್ಞರಾಗಿದ್ದೇವೆ. ಹಾಗೂ ಮುನ್ನುಡಿ ಬರೆದು ಕೊಟ್ಟ ಶ್ರೀ. ನರೇಗಲ್ಲ ಪ್ರಲ್ಹಾದರಾವ ಎಂ. ಎ. ಬಿ. ಟಿ. ಇವರಿಗೂ ಉಪಕೃತರಾಗಿದ್ದೇವೆ.

---

# ವಿಚಾರ ಮಂಜರಿಯ ಪರಿವಿಡಿ.



---

# ಮುನ್ನುಡಿ

ಗುರುವರ್ಯ ಶ್ರೀ. ಬೇಂದ್ರೆಯವರು ತಮ್ಮ 'ವಿಚಾರಮಂಜರಿ'ಗೆ ಮುನ್ನುಡಿ ಬರೆಯಲು ನನಗೆ ಹೇಳಿದಾಗ ಹೆದರಿಕೆಯಾಯಿತು. ಅವರ ಮಾತನ್ನು ಮೀರಲಾರದೆ ಆ ಮಾತಿಗೆ ಒಪ್ಪಿಕೊಂಡೆ. ಹಿರಿಯರ ಪುಸ್ತಕಗಳಿಗೆ ಕಿರಿಯರು ಮುನ್ನುಡಿ ಬರೆವ ಹೊಸ ಪರಿಪಾಠವು ಇಂದಿನ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಅವರ ಪ್ರೇರಣೆಯಿಂದಲೆ ಉಂಟಾದುದು. ನಲ್ಲನ ಹೆಸರನ್ನು ನಾಲ್ಕು ಜನರೆದುರು ಹೇಳಹೊರಟ ನವವಧುವು ಸಹಜವಾಗಿ ನಾಚುವಂತೆ ನನ್ನ ಬಾಳುವೆಗೆ ಬೆಳಕನ್ನಿತ್ತ ಗುರುವಿನ ವಿಷಯ ಸಾರ್ವಜನಿಕವಾಗಿ ಮಾತನಾಡಲು ನನಗೆ ಸಂಕೋಚವಾಗುತ್ತಿದೆ.

ಇಂದಿಗೆ ೨೫ ವರ್ಷಗಳ ಹಿಂದೆ ಗುರುವರ್ಯ ಬೇಂದ್ರೆಯವರು ಧಾರವಾಡದಲ್ಲಿ ತಮ್ಮ ವಿದ್ಯಾರ್ಥಿಗಳಲ್ಲಿ ಅನೇಕ ಎಳೆಯರನ್ನು ಗೆಳೆಯರನ್ನಾಗಿ ಮಾಡಿಕೊಂಡು ಅವರಿಗೆ ವಿಶೇಷ ಪಾಠವೆಂದು ಬೇಕನ್, ಇಮರ್ಸನ್, ರವೀಂದ್ರ, ಗಾಂಧೀ, ಅರವಿಂದರೇ ಮೊದಲಾದವರ ಚಿಕ್ಕ ದೊಡ್ಡ ಪ್ರಬಂಧಗಳನ್ನು ವಿಶೇಷ ಪ್ರೀತಿಯಿಂದ ಓದಿ ಹೇಳುತ್ತಿರುವುದು ಇಂದಿಗೂ ನೆನಪಾಗಿ ಮತ್ತೆ ರೋಮಾಂಚನವೆನಿಸಿ ಇಮ್ಮಡಿ ಆನಂದವಾಗುತ್ತದೆ. ಅವರ ಓದಿನ ಸೊಗಸೇ ಒಂದು ವಿಲಕ್ಷಣಪ್ರಭಾವವುಳ್ಳದು. ಇಂಗ್ಲಿಷಿನಲ್ಲಿಯ ಸತ್ತ್ವಯುತ ಮಾತುಗಳನ್ನು ಅಷ್ಟೇ ಶಕ್ತಿಯುತವಾಗಿ ಅಂದಚೆಂದಗಳೊಡನೆ ಆಗಿಂದಾಗ ಕನ್ನಡಿಸಿ ಹೇಳುತ್ತ ನಮ್ಮ ಎಳೆ ಎದೆಗಳನ್ನು, ಹಿರಿಯರಾದ ಶ್ರೀ. ಮಾಸ್ತಿಯವರು ಹೇಳುವಂತೆ, ಗಾರುಡಿಗನಂತೆ ತಮ್ಮತ್ತ ಎಳೆದರು. ಅವರ ಆ ಎಳೆತ ಸೆಳೆತವಾಗಿ ನಮ್ಮ ಎದೆಗಳು ಆಳವಾದವು, ಅಗಲವಾದವು. ಹೊಸದೊಂದು ದೃಷ್ಟಿಯುಂಟಾಗಿ ನವೀನ ಸೃಷ್ಟಿಯ ದರ್ಶನವು ನಮಗಾಗಿ, ಬಾಳುವೆಗೆ ಬೆಳಕು ದೊರೆಯಿತು. ಇಂಥ ದಾರ್ಶನಿಕ ಶಕ್ತಿಯಿಂದ ಪ್ರಭಾವಶಾಲಿಯಾದ ೩೩ ಪ್ರಬಂಧಗಳನ್ನು 'ನಾಡುನುಡಿ' 'ಧರ್ಮ' 'ವಿಚಾರ' 'ವ್ಯಕ್ತಿ' ವಿಮರ್ಶೆ' ಎಂಬುದಾಗಿ ೫ ವಿಭಾಗಗಳಲ್ಲಿ ಸಂಗಡಿಸಲಾಗಿದೆ.

ಶ್ರೀ. ಬೇಂದ್ರೆಯವರ ವಿಷಯವಾಗಿ 'ಅವರ ಸ್ಫೂರ್ತಿದಾಯಕ, ಸ್ಪಷ್ಟ, ಮಾರ್ಗದರ್ಶಕ ವಿಚಾರಗಳು ಕನ್ನಡಿಗರಿಗೆ ಯಾವಾಗಲೂ ಜೀವಂತ ಝರಿಗಳು. ತರುಣ ಕನ್ನಡಿಗರು ಬೇಂದ್ರೆಯವರ ವಿಚಾರದಿಂದ ಪ್ರೋತ್ಸಾಹಿತರಾಗಿ ಮುಂದರಿಯಬೇಕೆಂದು' ಮಿಂಚಿನ ಬಳ್ಳಿಯ ಮಾನ್ಯ ಸಂಪಾದಕರು ಹೇಳಿದುದು ಯಥಾಯೋಗ್ಯವೇ ಆಗಿದೆ.

ಶ್ರೀ. ಬೇಂದ್ರೆಯವರು ಅನೇಕರು ತಿಳಿದಂತೆ ಕೇವಲ ಕವಿಗಳಲ್ಲ. ನಮ್ಮ ನಾಡಿನ–ಅದೇಕೆ ಸಮಸ್ತ ಪ್ರಪಂಚದ–ಮೂಲಭೂತ ಸಮಸ್ಯೆಗಳನ್ನೆಲ್ಲ ಆಳವಾಗಿ ಅಭ್ಯಸಿಸಿದ ಸ್ವತಂತ್ರ ವಿಚಾರವಂತ ಪ್ರತಿಭಾಶಾಲಿ ಪ್ರಮುಖರಲ್ಲಿ ಒಬ್ಬರು. ವಿಶ್ವಜೀವನದ ವಿವಿಧತೆಯನ್ನು ಅವರು ಕಂಡಿದ್ದಾರೆ. ವಿವಿಧತೆಯಲ್ಲಿ ಸಮತೆಯನ್ನೂ ಅನೇಕತ್ವದಲ್ಲಿ ಏಕತ್ವವನ್ನೂ ಅವರು ಮರೆತವರಲ್ಲ. ಸಮತೆಯಲ್ಲಿಯೂ ಸಂಯೋಗವನ್ನು ಅವರು ಬಯಸುವವರು. ಇದನ್ನೆಲ್ಲ ಕಂಡುಹಿಡಿಯಲು ಅವಶ್ಯವಿದ್ದ ತತ್ತ್ವದರ್ಶಕ ದೃಷ್ಟಿಯು ಅವರ ವ್ಯಕ್ತಿತ್ವದ ಒಂದು ಹಿರಿಗುರುತಾಗಿದೆ. ಇಂಥ ದೃಷ್ಟಿಯಿಂದ ತಾವು ಕಂಡ ಮಾತುಗಳನ್ನು ತಮ್ಮದೇ ಆದೊಂದು ಹೃದ್ಯವಾದ ಗದ್ಯಶೈಲಿಯುಳ್ಳ ಈ ಪ್ರಬಂಧಗಳಲ್ಲಿ ವ್ಯಕ್ತಗೊಳಿಸಿದ್ದಾರೆ. ತಾವು ಬಗೆದು ಭಾವಿಸಿದ ಯಾವ ಮಾತನ್ನೂ ಶ್ರೀ. ಬೇಂದ್ರೆಯವರು ಶುದ್ಧ ಚಿನಿವಾರನಂತೆ ತೂಕ ಹಾಕಿ ತೂಗಿ ತೂಗಿ ಮಾತನಾಡುವವರು. ಒರೆಗೆ ಹಚ್ಚಿ ಕೊರೆದು ಕೊರೆದು ಸರಿತೋರಿದ್ದನ್ನು ಸರಿಯಾಗಿ ಸೂತ್ರರೂಪದಲ್ಲಿ ಶಕ್ಯವಿದ್ದಷ್ಟು ಕಿರಿದರಲ್ಲಿ ಹೇಳುವವರು. ಅರ್ಥವನ್ನು ತುಂಬಿ ತುಂಬಿ ಹೇಳುವ ಸೊಗಸು ಅವರದೇ ಸರಿ. ಕಿರಿದರೊಳು ಹಿರಿ ಅರ್ಥವನ್ನಿಡುವ ಅರ್ಥಗಾಂಭೀರ್ಯವು ಅವರ ಗುಣವೂ ಆಗಿದೆ, ದೋಷವೂ ಆಗಿದೆ.

ಈ ಕೆಳಗಿನ ಮಾತುಗಳನ್ನು ಇಲ್ಲಿ ಉದಹರಿಸಬಹುದು :—

'ಕನ್ನಡವಿಲ್ಲದೆ ಕನ್ನಡಿಗರಿಲ್ಲ, ಕನ್ನಡಿಗರಿಲ್ಲದೆ ಕರ್ನಾಟಕವಿಲ್ಲ' (೨೪, ೨೨)
'ಒಳ್ಳೆಯ ಮನಸ್ಸಿನಿಂದ ಹೊಂದುಗೂಡಿರುವುದೆ ಧರ್ಮ' (೨೪, ೨೭)
'ಹುಟ್ಟಿನ ಹೊಟ್ಟೆಯಲ್ಲಿ ಸಾವಿನ ಸಾಮಗ್ರಿಯುಂಟು' (೩೧, ೨೦)
'ಮತವು ಪ್ರಕೃತಿಯು, ಧರ್ಮವು ಸಂಸ್ಕೃತಿಯು' (೮೧, ೨೦)

ಅಂತೆಯೆ ಶ್ರೀ. ಮುಗಳಿಯವರು ಶ್ರೀ. ಬೇಂದ್ರೆಯವರ ಬಗ್ಗೆ '....ಅವರ ವಾಕ್ಯಗಳಲ್ಲಿ ವಿಪುಲಾರ್ಥವು ಹೆದ್ದಟ್ಟಾಗಿ ಹೆಣೆದುಕೊಂಡು ಬರುತ್ತಿದೆ. ಅಂತೇ ಓದುಗರ ಸಂಸ್ಕಾರವು ಹೆಚ್ಚಿದಂತೆ ಇಂಥ ಬರವಣಿಗೆಯು ಸಸಾರ ವಾಗುತ್ತದೆ.' ಎಂದು ಇವರ ಇನ್ನೊಂದು ಪ್ರಬಂಧಸಂಗ್ರಹದ ಮುನ್ನುಡಿ ಯಲ್ಲಿ ಹೇಳುತ್ತಾರೆ. ಆದರೆ ಆ ಪ್ರಬಂಧಗಳು ಕೇವಲ ಸಾಹಿತ್ಯಪರ ವಿಮರ್ಶಾತ್ಮಕ ಪ್ರಬಂಧಗಳು. ಈ ಪ್ರಬಂಧಗಳು ಮುಖ್ಯವಾಗಿ ಸಮಾಜದ ಸಂಸಾರದ ನಾಡುನುಡಿಗಳ ನಿತ್ಯ ನೂತನ ಜೀವನದ ಸಾಮಾನ್ಯ ಪ್ರಶ್ನೆ ಗಳನ್ನು ಪರಿಶೀಲಿಸಿ ನಿರ್ಧಾರವಾದ ಅಭಿಪ್ರಾಯಗಳನ್ನು ಸಾಧಾರವಾಗಿ ತರ್ಕಬದ್ಧ ಶೈಲಿಯಲ್ಲಿ ವಾದಿಸಿ ಪ್ರತಿಪಾದಿಸಿದ್ದುಂಟು. ಆದುದರಿಂದ ಶ್ರೀ. ಬೇಂದ್ರೆಯವರ ಈ 'ವಿಚಾರಮಂಜರಿ' ಯನ್ನು ಓದಿದರೆ ಸಾಮಾನ್ಯ ಓದುಗರ ಸಂಸ್ಕಾರವು ಹೆಚ್ಚಿ ಸಾರಯುತವಾದ ಯಾವ ಬರವಣಿಗೆ ಯನ್ನೂ ತಿಳಿದುಕೊಳ್ಳಲು ಅವರಿಗೆ ಸಸಾರವಾಗುವದು. ಜಗತ್ತಿಂಬ ಪಟ್ಟಣಕ್ಕೆ ಕನ್ನಡಿಗರೂ ಪಟ್ಟಣಿಗರೂ ಹೇಗೆ, ವೇಗವಾಗಿ ಸಾಗಿದ ಈ ಜಗತ್ತಿನಲ್ಲಿ ಕನ್ನಡಿಗರು ಮಾಡುವ ಕರ್ತವ್ಯವಾವುದು, ಯಾವುದಕ್ಕೆ ನಾವು ಧರ್ಮವೆಂದು ಕರೆಯಬೇಕು, ಇಂದಿನ ಯುಗದಲ್ಲಿ ಅಧರ್ಮಾಚರಣೆ ಯಾವುದು, ಯಾವ ಯಾವ ಹೊಸ ವಿಚಾರಗಳನ್ನು ಅಳವಡಿಸಿಕೊಳ್ಳ ಬೇಕು, ಯಾವ ಜೀರ್ಣ ವಿಚಾರಗಳನ್ನು ತ್ಯಜಿಸಬೇಕು, ಇಂದಿನ ಧರ್ಮ- ಪುರುಷರಾರು, ಹೊಸ ಮಾನವಧರ್ಮವೆಂದರೇನು, ಧರ್ಮದ ಪರ್ಯಾಯ ನಾಮವೇ ಸ್ವಾತಂತ್ರ್ಯವೆಂಬುದು ಹೇಗೆ, ಅನ್ನದ ಮಹಿಮೆಯೇನು ನಯಶಾಸ್ತ್ರ ಹಾಗೂ ಅಹಿಂಸೆಗಳ ರಹಸ್ಯವೇನು, ಕನ್ನಡಿಗರಿಗಾಗಿ ದುಡಿದ ಹಿರಿಯರ ಕೃತಿಗೆ ನಾವು ಉಪಕೃತರಾದುದು ಎಂತು. ನಮ್ಮ ಜೀವನ ಯುಗಕ್ಕೆ ತಕ್ಕಂತೆ ಪಲ್ಲಟಿಸುವದು ಹೇಗೆ, ನಮ್ಮ ಸಾಹಿತ್ಯಜೀವನವು ಬೆಳಕಾಗುವ ದಾರಿ ಯಾವುದು ಎಂಬ ಅನೇಕ ಸಮಸ್ಯೆಗಳನ್ನು ಶ್ರೀ. ಬೇಂದ್ರೆ ಯವರು ಮೌಲಿಕವಾಗಿ ಉಜ್ವಲವಾಗಿ ಈ ಗ್ರಂಥದಲ್ಲಿ ಪರ್ಯಾಲೋಚಿಸಿದ್ದಾರೆ. ಸಂಸ್ಕೃತಿ ಹಾಗೂ ಧರ್ಮಗಳ ಬಗೆಗೆ ಅವರು ಹೇಳಿದ ಮನನೀಯ ವಿಚಾರ ಗಳನ್ನು ವಿಶೇಷವಾಗಿ ಕನ್ನಡಿಗರು ಅಳವಡಿಸಿಕೊಂಡು ಸ್ವತಂತ್ರ ವಿಚಾರ ಶಕ್ತಿಯುಳ್ಳವರಾಗಿ ತಮ್ಮ ಸಮಸ್ಯೆಗಳನ್ನು ತಾವೇ ಬಗೆಹರಿಸಿಕೊಳ್ಳುವ

ಅಭ್ಯುದಯದ ಪುರುಷಾರ್ಥದ ಮಾರ್ಗವನ್ನು, ನಮ್ಮ ನಾಡವರು ತುಳಿ ದಾರೆಂದು ಭರವಸೆ ಇದೆ. ಪೂಜ್ಯ ಸಾಕ್ರೇಟಿಸ್ ಹಾಗೂ ಇಮರ್ಸನ್‌ರ ಸಂವಾದ, ಪ್ರಬಂಧಗಳನ್ನು ಓದಿದ ಕಾಲಕ್ಕೆ ಆದ ಸಂತೋಷವು ಈ ಪ್ರಬಂಧ ಗಳನ್ನು ಓದುವಾಗ ನನಗಾಗಿದೆಯೆಂದು ಎದೆಬಿಚ್ಚಿ ಹೇಳುತ್ತೇನೆ.

(i) ಈ ಗ್ರಂಥದ ೧ನೆಯ ಭಾಗದಲ್ಲಿ ಬರುವ ೫ ಪ್ರಬಂಧಗಳು, ೫ನೆಯ ಭಾಗದಲ್ಲಿ ಬರುವ ೧, ೩ ಹಾಗು ೫ನೆಯ ಪ್ರಬಂಧಗಳು ಶ್ರೀ. ಬೇಂದ್ರೆಯವರು ಕಳೆದ ೨೫ ವರ್ಷಗಳಲ್ಲಿ ಕನ್ನಡ ನಾಡಿನ ಬೇರೆ ಬೇರೆ ಊರುಗಳಲ್ಲಿ ವಿವಿಧ ಸಂದರ್ಭಗಳಲ್ಲಿ ಮಾಡಿದ ಭಾಷಣಗಳಾಗಿವೆ. ಅಂತೆಯೇ ಅವುಗಳಲ್ಲಿ ತತ್ಕಾಲೀನ ಪರಿಸರ–ಪರಿಸ್ಥಿತಿಗಳ ಪ್ರಭಾವದ ಮುದ್ರೆಯುಳ್ಳ ಕೆಲವು ಮಾತುಗಳು ಬಂದಿವೆ. ೪ನೆಯ ಭಾಗದಲ್ಲಿಯ 'ಅರವಿಂದರು' ಮತ್ತು ೫ನೆಯ ವಿಭಾಗದಲ್ಲಿಯ 'ಕವಿಯ ಅನುಭವ' ಇವೆರಡು ಶ್ರೀ. ಬೇಂದ್ರೆಯವರ ಉಪನ್ಯಾಸಗಳ ವರದಿ ಆದರಲ್ಲಿ ಸೂತ್ರ ತಪ್ಪಿ ಬರುವ ಕೆಲ ಮಾತುಗಳು, ತಪ್ಪು ವಿಧಾನಗಳು ವರದಿಗೆ ಸೇರಿದವುಗಳು ಎಂದು ತೋರುತ್ತದೆ. (ii) ೩ನೆಯ ವಿಭಾಗದಲ್ಲಿ ಬರುವ ಸ್ವಪ್ನವಿಜ್ಞಾನ ವೆಂಬ ಪ್ರಬಂಧವು ಗೆಳೆಯರಾದ ಶ್ರೀ. ರಂ. ಶ್ರೀ. ಮುಗಳಿ, ಹಾಗೂ ಶ್ರೀ. ಗೋ. ಭೀ. ಜೋಶಿಯವರ ಸಂಯುಕ್ತ ಕೃತಿಯಾದ 'ಪಾವನಪಾವಕ' ಎಂಬ ನವೀನ ಸಾಹಿತ್ಯ ಪ್ರಕಾರವಾದ ಸ್ವಪ್ನನಾಟಕಗಳ ಸಂಗ್ರಹ ಗ್ರಂಥಕ್ಕೆ ಶ್ರೀ. ಬೇಂದ್ರೆಯವರು ಬರೆದ ಮುನ್ನುಡಿಯಾಗಿದೆ. ೫ನೆಯ ವಿಭಾಗದಲ್ಲಿ ಬರುವ 'ಇಂಗ್ಲೀಷ ಗೀತಗಳು' ಎಂಬ ಪ್ರಬಂಧವು ಆ ಗ್ರಂಥ ಹೊರಟ ಬಳಿಕ ೧೪ ವರ್ಷಗಳ ಮೇಲೆ ಬರೆದ ಗ್ರಂಥವಿಮರ್ಶೆಯನ್ನೊಳಗೊಂಡ ಪ್ರಬಂಧ ವಾಗಿದ್ದು ಈ ಮೊದಲೇ, ಹಿರಿಯರಾದ 'ಶ್ರೀ'ಯವರಿಗೆ ಅರ್ಪಿಸಿದ 'ಸಂಭಾವನೆ'ಯಲ್ಲಿ ಅಚ್ಚಾಯಿತು. ೨ನೆಯ ವಿಭಾಗದಲ್ಲಿಯ 'ನಯಶಾಸ್ತ್ರ' ವೆಂಬ ಲೇಖನವಂತೂ ೧೯೨೧ ರಲ್ಲಿ ಜಯಕರ್ನಾಟಕ ಪತ್ರಿಕೆಯ ೧ನೆಯ ವರುಷದ ಒಂದು ಸಂಚಿಕೆಯಲ್ಲಿಯೇ ಅಚ್ಚಾಗಿತ್ತು. ಇದೇ ವಿಭಾಗದಲ್ಲಿಯ 'ನಿಜವಾದ ಧಾರ್ಮಿಕನು' ಎಂಬುದು ಪುರಾತನ ಸಾಧು ಸಂತರ ವಚನ ಸಾರ; ಅನುವಾದ ಮಾತ್ರ. (iii) ಉಳಿದ ಪ್ರಬಂಧಗಳೆಲ್ಲಾ ಸಾಮಾನ್ಯ ವಾಗಿ ಪತ್ರಿಕೆಗಳಿಗೆ ಕಾಲಕಾಲಕ್ಕೆ ಅವರು ಬರೆದ ಲೇಖನಗಳಾಗಿವೆ. ಈ

೨೫ ವರ್ಷಗಳಲ್ಲಿ, ಶ್ರೀ. ಬೇಂದ್ರೆಯವರು ಮುಖ್ಯವಾಗಿ ಸ್ವಧರ್ಮ, ಜಯ-ಕರ್ನಾಟಕ, ಜೀವನ ಎಂಬ ಮೂರು ಮಾಸಪತ್ರಿಕೆಗಳ ಸಂಚಾಲಕರಾಗಿಯೋ ಸಂಪಾದಕರಾಗಿಯೋ ಅವುಗಳೊಡನೆ ಸಜೀವ ಸಂಬಂಧವುಳ್ಳವರಾಗಿ ಬರೆದ ಪ್ರಬಂಧಗಳೇ ಆ ಲೇಖನಗಳು. (iv) ೪ನೆಯ ವಿಭಾಗದಲ್ಲಿಯ ವ್ಯಕ್ತಿ-ನಿಷ್ಠವಾದ ಸ್ವಭಾವಚಿತ್ರಗಳು. ಮೇಲ್ಕಾಣಿಸಿದ ಪತ್ರಿಕೆಗಳಲ್ಲಿ ೧೫ ವರುಷಗಳ ಹಿಂದೆಯೇ ಅಚ್ಚಾಗಿದ್ದವು. ೫ನೆಯ ಹಾಗು ೬ನೆಯ ಪ್ರಬಂಧಗಳು 'ಕನ್ನಡ ಕಿಡಿಗಳು' ಎಂಬ ಗ್ರಂಥದಲ್ಲಿ ಈ ಮೊದಲೆ ಅಚ್ಚಾಗಿವೆ. ವ್ಯಕ್ತಿಚಿತ್ರಗಳನ್ನು, ಕುಶಲ ಚಿತ್ರಕಾರನಂತೆ ಶ್ರೀ. ಬೇಂದ್ರೆಯವರು ರೂಪಿಸಿದ್ದಾರೆ. ಇತ್ತೀಚೆ, ಗೆಳೆಯರಾದ ಶ್ರೀ. ಸಿದ್ದವ್ವನಹಳ್ಳಿ ಕೃಷ್ಣಶರ್ಮರು ಈ ಸಾಹಿತ್ಯಪ್ರಕಾರವನ್ನು ವಿಪುಲವಾಗಿ ಬೆಳಸಿದ್ದುಂಟು. ಆದರೆ ಈ ಸಾಹಿತ್ಯ-ಪ್ರಕಾರವನ್ನು ಆಗ ಪ್ರಚುರ ಪಡಿಸಲು ಪ್ರಯತ್ನಿಸಿದವರು ಶ್ರೀ. ಬೇಂದ್ರೆಯವರು. ಪರಾಂತಃಕರಣಪ್ರವೇಶಿಗಳಾದ ಶ್ರೀ. ದತ್ತರಾಯರು ಆಯಾ ವ್ಯಕ್ತಿಗಳ ಆತ್ಮವನ್ನು ಒಳಹೊಕ್ಕು ಮಾತನಾಡಿದ ಆತ್ಮೀಯ ಮಾತುಗಳನ್ನು ನಾವಿಲ್ಲಿ ಕಾಣುತ್ತೇವೆ. (v) ೩ನೆಯ ವಿಭಾಗದಲ್ಲಿ ಬರುವ ೨ರಿಂದ ೬ರ ವರೆಗಿನ ಪ್ರಬಂಧಗಳ ಪ್ರಕಾರವೇ ಬೇರೆ. ಅವು ಅನುಭಾವದ ಒಡನುಡಿಗಳಾಗಿ ಶರಣರ ವಚನಗಳನ್ನೂ ದಾಸರ ಉಗಾಭೋಗಗಳನ್ನೂ ಸ್ಮರಣೆಗೆ ತಂದುಕೊಡುತ್ತವೆ. ನನಗೆ ತಿಳಿದಮಟ್ಟಿಗೆ ಈ ವಚನಗಳನ್ನು ಶ್ರೀ. ಬೇಂದ್ರೆಯವರು ೧೯೨೧ ಕ್ಕಿಂತ ಮೊದಲೇ ಬರೆದುದಾಗಿ ೧೯೨೫ ರಿಂದ ೧೯೨೬ ರ ವರೆಗೆ ನಡೆದ ಸ್ವಧರ್ಮ ಪತ್ರಿಕೆಯಲ್ಲಿ ಅವು ಮೊದಲು ಬೆಳಕು ಕಂಡವು. ತಮ್ಮ ಶಾಲೆಯ ವಿದ್ಯಾರ್ಥಿಗಳಿಗೆ ವಿಚಾರಪರ ಪ್ರಬಂಧಗಳನ್ನು ಬರೆಯುವ ಪಾಠ ಹೇಳುವಾಗ ವಿಚಾರಾಂಶಗಳನ್ನು ಮೊದಲು ಹೇಳಿ ಅವರಿಗೆ ಬರೆಯ ಹಚ್ಚಿ, ಅವರೊಡನೆ ಅಲ್ಲಿಯೇ ವರ್ಗದಲ್ಲಿ ತಾವೂ ವಿದ್ಯಾರ್ಥಿಗಳಂತೆ ಅದೇ ಕಾಲಕ್ಕೆ ಬರೆದ ನಿಬಂಧಗಳು ಇವು. ಹೀಗೆ ಈ ಪ್ರಬಂಧಗಳಲ್ಲಿ ಭಾಷಣ, ವ್ಯಕ್ತಿಚಿತ್ರ, ಗ್ರಂಥಪರಿಚಯ, ನಿಬಂಧ ಎಂಬ ವಿವಿಧ ಸಾಹಿತ್ಯ ಪ್ರಕಾರಗಳನ್ನು ಇಲ್ಲಿ ಕಾಣಬಹುದು.

ಹೀಗೆ ಶ್ರೀ. ಬೇಂದ್ರೆಯವರು ಕಳೆದ ತಪದ್ವಯದ ಅವಧಿಯಲ್ಲಿ ಅಲ್ಲಲ್ಲಿ ಚಲ್ಲಿಬಿಟ್ಟ ಪ್ರಬಂಧಗಳನ್ನೆಲ್ಲಾ ಒತ್ತಟ್ಟಿಗೆ ಸಂಗ್ರಹಿಸಿ "ಮಿಂಚಿನ ಬಳ್ಳಿ"

ಯವರು ಒಂದು ಮಂಜರಿಯನ್ನಾಗಿ ಪ್ರಕಟಿಸಿದುದು ನಮ್ಮೆಲ್ಲರ ಭಾಗ್ಯವೇ ಸರಿ. ಅಂಬಿಕಾತನಯದತ್ತರ ಕವನಗಳನ್ನು ಮೆಚ್ಚಿದ ಕನ್ನಡಿಗರು ಶ್ರೀ. ದತ್ತರಾಯರ "ವಿಚಾರ ಮಂಜರಿ"ಯನ್ನೂ ಸಂತೋಷದಿಂದ ಸ್ವಾಗತಿಸುವರೆಂಬುದರಲ್ಲಿ ಸಂಶಯವಿಲ್ಲ. ಕಿರಿದಾದ ಒಂದು ಮುನ್ನುಡಿಯನ್ನು ಬರೆಯಲು ಸಂಪಾದಕರು ಸೂಚಿಸಿದ್ದರಿಂದ ಇಷ್ಟಕ್ಕೇ ನಿಲ್ಲಬೇಕಾಗಿದೆ.

ಪ್ರೂಫುಗಳನ್ನು ಲಕ್ಷ್ಯಪೂರ್ವಕವಾಗಿ ನೋಡಿಕೊಂಡಿದ್ದರೆ ಮುದ್ರಣ ದೋಷಗಳು ಕಡಿಮೆ ಉಳಿಯಬಹುದಾಗಿತ್ತು. ಪ್ರೂಫ ನೋಡುವವರ ದುರ್ಲಕ್ಷ್ಯದ ಮೂಲಕ ಮುದ್ರಣದೋಷಗಳು ಸಾಕಷ್ಟು ಉಳಿದಿರುವುದರಿಂದ ಕೊನೆಗೆ ಒಪ್ಪೋಲೆಯನ್ನು ಕೊಟ್ಟಿದ್ದಾರೆ. ಅದರಂತೆ ಮೊದಲು ತಿದ್ದಿಕೊಂಡು ಓದಬೇಕು. ಅಂದರೆ ಮುದ್ರಣದೋಷದಿಂದ ಉಂಟಾದ ಅರ್ಥವನ್ನು ಗ್ರಹಿಸಲು ಅನುವಾಗುವದು. ಹೀಗಾಗಿಯೂ, ಇನ್ನೂ ತಪ್ಪುಗಳು ಉಳಿದಿರಲು ಸಾಕು. ಅದಕಾರಣ ಪ್ರಕಾಶಕರು ಒಂದೂ ಅಚ್ಚಿನ ದೋಷಗಳು ಉಳಿಯದಂತೆ ಗ್ರಂಥ ಪ್ರಕಟಿಸುವದು ಒಳ್ಳೆಯದೆಂದು ಸೂಚಿಸಿದರಲಾರೆ.

ಹುಬ್ಬಳ್ಳಿ

ಕನ್ನಡಿಗರ ಅಡಿಯಾಳು,
ಪ್ರಲ್ಹಾದ ಬಂಡೇರಾವ ನರೇಗಲ್ಲ

# ಅ ರ್ಪ ಣ

ಕನ್ನಡದ ಊಳಿಗದವರಾಗಿ
ತನು-ಮನ-ಧನವ ಸವೆಸುತ್ತಿರುವ
ಗೆಳೆಯರು
ಶ್ರೀ. ಬಿಂದುಮಾಧವ ಬುರ್ಲಿ,
ಶ್ರೀ. ಶ್ರೀನಿವಾಸರಾವ ಮಂಗಳವೇಡೆ
ಅವರಿಗೆ.

—ದ. ರಾ. ಬೇಂದ್ರೆ

# ಲೇಖಕರ ಮಾತು

'ವಿಚಾರ ಮಂಜರಿ' ಈ ಮೊದಲೇ ಬೆಳಕು ಕಾಣಬೇಕಾಗಿತ್ತು ಬೇರೊಂದೆಡೆಗೆ. 'ಮಿಂಚಿನ ಬಳ್ಳಿ'ಯಲ್ಲಿ ಅದು ಪ್ರಕಟವಾಗುತ್ತಲಿರುವದು ನನಗೆ ವಿಶೇಷ ಸಂತೋಷ. ಇದನ್ನು ಸಜ್ಜುಗೊಳಿಸಲು ಅನುವಾದ ನನ್ನ ದಿವಂಗತ ಕುಮಾರ ರಾಮಚಂದ್ರ, ಮತ್ತು ಗೆಳೆಯರಾದ ಶ್ರೀ. ಚುಳಕಿ, ನರೇಗಲ್ಲ, ನಾಯಿಕ, ಜೋಶಿ ಮೊದಲಾದವರಿಗೆ ನನ್ನ ಕೃತಜ್ಞತೆಗಳು.

ಈ ಲೇಖನಗಳನ್ನು ಮೊದಲು ಪ್ರಕಟಿಸಿದವರಿಗೂ ನನ್ನ ವಂದನೆಗಳು. ಈ ಸಂಗ್ರಹದಲ್ಲಿ ಈ ಮೊದಲು ಎಲ್ಲಿಯೂ ಪ್ರಕಟವಾಗದ ಕೆಲ ಪ್ರಬಂಧಗಳಿವೆ. ಈ ಬಗೆಯ ಪ್ರಬಂಧಗಳು ಒಂದೂ ಅಚ್ಚಿನ ತಪ್ಪಿಲ್ಲದೆ ಪ್ರಕಟವಾಗುವದು ಒಳಿತು. ಆದರೆ ಈ ದೋಷಕ್ಕೆ, ಲೋಪಕ್ಕೆ ನಾನೂ ಕಾರಣನೇ. ವಾಚಕರು ಕ್ಷಮಿಸಬೇಕು, ತಿದ್ದಬೇಕು, ತಿಳಿಸಬೇಕು.

ಸೊಲ್ಲಾಪುರ

ದ. ರಾ. ಬೇಂದ್ರೆ

# ವಿಚಾರ ಮಂಜರಿ



## ನಾಡು-ನುಡಿ



### ೧. ನಾಡಿಗೂ ನುಡಿಗೂ ಸಂಬಂಧ

ಮನುಷ್ಯನಿಗೆ ಹೇಗೆ ದೇಹ, ಪ್ರಾಣ, ಮನಸ್ಸು, ಜ್ಞಾನ ಇದೆಯೋ ಹಾಗೆಯೇ ನಾಡಿಗೂ ಇದೆ. ನದಿ ಪರ್ವತಗಳಿಂದಲೂ ಸಸ್ಯಾದಿ ಸಂಪತ್ತಿನಿಂದಲೂ ಕೂಡಿದ ಭೂಪ್ರದೇಶವು ಅದರ ದೇಹ. ಅಲ್ಲಿಯ ವಿವಿಧ ಪ್ರಾಣಿಗಳೇ ಅದರ ಪ್ರಾಣ. ಸಾಹಿತ್ಯಕಲಾಕೌಶಲ್ಯವೇ ಅದರ ಮನಸ್ಸು. ಧರ್ಮದರ್ಶನಗಳೇ ಅದರ ಜ್ಞಾನ. ನಾಡೇ ಒಂದು ದೇಹವೆಂದರೆ ಅಲ್ಲಿಯ ನುಡಿಯು ಅದರ ನಾಲಗೆಯೆನ್ನಬಹುದು. ನಾಲಗೆಯು ಮನವನ್ನು ತಿಳಿಸುವಂತೆ ಅಲ್ಲಿಯ ಮಾತು ಅದರ ವಾಙ್ಮಯದ ಸ್ಥಿತಿಗತಿಯನ್ನು ಸೂಚಿಸುವುದು. ಮಾತು ಕಳೆದುಕೊಂಡವರ ವಾಙ್ಮಯವು ಮೂಕರ ಸನ್ನೆಯಂತೆ ಗತವೈಭವದ ಕುರುಹು ಮಾತ್ರ. ಆಹಾರ ನಿದ್ರಾ ಭಯ ಮೈಥುನಾದಿ ವ್ಯವಹಾರದ ಮಟ್ಟಿಗೆ ಮಾತು ಉಳಿಸಿಕೊಂಡವರು ಮನುಷ್ಯರಂತೆ ನಟಿಸುವ ಪಶುಗಳು. ಅವರಿಗೆ ವಾಙ್ಮಯವು ಮನಸ್ಸಿನಂತೆ ಸಲ್ಲದ ತೊಡಕು. ವಾಙ್ಮಯದ ಸಂಸ್ಕಾರ ತಪ್ಪಿಸಿಕೊಂಡವರು ಮನದ ನೆಲೆಯಿಲ್ಲದೆ ಅಲೆದಾಡುವ ಹುಚ್ಚರು, ಮೂರ್ಖರು, ಹುಂಬರು. ತಾವು ಆಡಿದುದೇ ಸಾಹಿತ್ಯವೆಂದು ತಿಳಿಯುವ ಪಂಡಿತರ ಮಾತನ್ನು ಪಾಮರರ ಎದುರು ನಾನೆತ್ತುವುದಿಲ್ಲ.

ಹೋಲಿಕೆ ಕೂಡಿದಷ್ಟಕ್ಕೆ ಹೇಳಿದುದು ಸತ್ಯವಾಯಿತೇ? ಎಂದು ಕೇಳಬಹುದು. 'ಮಾತು ಜಾತಿಯನ್ನು ಹೇಳಿತು' ಎಂಬ ಗಾದೆಯನ್ನು ತಾವು ಕೇಳಿರಬಹುದು. ಊಟ-ಉಡಿಗೆ, ಓದು-ವಾದಗಳನ್ನೆ ಚರ್ಚಿಸುವ ಭಟ್ಟರಿಗೂ. ಮಾತಿಗೊಮ್ಮೆ ಬಯ್ದು ಮುಚ್ಚು ಮರೆಯಿಲ್ಲದ ಬಿಚ್ಚು ಮಾತುಗಳನ್ನಾಡುವ ಹುಂಬನಿಗೂ ಮಾತಿನಂತೆ ಜಾತಿಯಲ್ಲಿಯೂ ಬಿಡುವುದು. ಕನ್ನಡರದೊಂದು ಜಾತಿ-ತೆಲುಗ ತಮಿಳ ಹೇಗೋ ಹಾಗೆ. ಈ ಮಾತನ್ನು ನಿಜಗುಣ ಶಿವಯೋಗಿಗಳೂ, ಚೆನ್ನಬಸವಣ್ಣನವರೂ ಹೇಳಿದ್ದಾರೆ. ಹೊಯ್ಸಳ ಬಲ್ಲಾಳರಿಗೂ ವಿಜಯನಗರರಾಯರಿಗೂ ತಮ್ಮ ಆಡಳಿತದಲ್ಲಿ ಇದರ ಅರಿವಿತ್ತು. ನೃಪತುಂಗನು ಕನ್ನಡ ನುಡಿಯ ಕನ್ನಡ ನಾಡನ್ನು ಬಣ್ಣಿಸಿದ್ದಾನೆ. ಬ್ರಾಹ್ಮಣರಲ್ಲಿಯೂ ಕ್ಷತ್ರಿಯರಲ್ಲಿಯೂ ಕನ್ನಡ ಕರ್ಣಾಟಕವೆಂಬ ಪ್ರಭೇದವಿತ್ತು. ಛಪ್ಪನ್ನ ದೇಶಗ ಛಪ್ಪನ್ನ ಭಾಷೆಗಳಾದುದೇ ಹೀಗೆ. ನಾಡು ಕನ್ನಡ, ನುಡಿ ಕನ್ನಡ, ಜನ ಕನ್ನಡ. ನಾಡು-ಜನ ನುಡಿಯ ಸಂಬಂಧವನ್ನು ಇತಿಹಸವು ಒಪ್ಪಿಕೊಂಡಿದೆ.

## ನಾಡಿನ ನುಡಿಯೆ ಗತಿ

ಯಾರು ಎಲ್ಲಿ ಹುಟ್ಟಿರುವರೋ ಬೆಳೆದಿರುವರೋ ಅಲ್ಲಿಯ ಗಾಳಿ ಅನ್ನ ನೀರು ಅವರ ದೇಹಕ್ಕೆ ಹಿತವೆಂದು ಸಾಮಾನ್ಯವಾಗಿ ಹೇಳುವರು. ಇತಿಹಾಸ, ಸಾಹಿತ್ಯಶಾಸ್ತ್ರ ಇವು ನುಡಿಗೆ ಗಾಳಿ ಅನ್ನ ನೀರು ಇದ್ದಂತೆ. ಅವುಗಳ ಸಂಸ್ಕಾರ ಸಾಲದ ಮಾತು ಕಾಡು ಜನರ ಕಿಲಿಬಿಲಿ ಇದ್ದಂತೆ. ಅಲ್ಲಲ್ಲಿಯ ವಾಙ್ಮಯದಲ್ಲಿ ಅಲ್ಲಲ್ಲಿಯ ನುಡಿಯ ಪ್ರಾಣಕ್ಕೆ ಪೋಷಣೆಯಿದೆ. ಜನದ ಮಾತಿರಲಿ. ದನಗಳು, ಸಾಕು ಪ್ರಾಣಿಗಳು ನಾಡಿನ ನುಡಿಯನ್ನರಿತೆ ತಮ್ಮ ವ್ಯವಹಾರ ಮಾಡುವವು. ಮರಾಟರ, ಮಹಮ್ಮದೀಯರ, ಆಂಗ್ಲರ ಆಳಿಕೆ ಕನ್ನಡ ನಾಡಿನಲ್ಲಾಗಿದ್ದರೂ ಕನ್ನಡ ನಾಡಿನ ನಾಯಿ, ಎತ್ತು, ಕುದುರೆ, ಪಾರಿವಾಳಗಳಿಗೆ ಕನ್ನಡ ಸಂಜ್ಞೆಗಳೆ ತಿಳಿಯುವವು. ಯಾರು ಬಲ್ಲರು, ಕನ್ನಡ ನಾಡಿನ ಗಿಡಗಳಿಗೆ ಕನ್ನಡವಲ್ಲದೆ ಬೇರೆ ಮಾತು ತಿಳಿಯುತ್ತಿರಲಿಕ್ಕೂ ಇಲ್ಲ! ನಾಡಿನ ನಾಡಿಯೂ ಕೂಡ ನುಡಿಯ ನೆತ್ತರಿನೊಡನೆ ಕುಣಿಯುತ್ತಿರಬೇಕು! ವೀರ ಕಂಪಣರಾಯನ ಅರಸಿ ಗಂಗಾಮಹಾದೇವಿಗೆ ಪಂಜರದೊಳಗಿನ ಗಿಳಿಗಳೂ ಪಾರಸಿಕ

ಮಾತುಗಳನ್ನು ಕಲಿಯುತ್ತಿರುವವಲ್ಲ ಎಂದು ಆದ ನಿರವಧಿ ಖೇದವು ಆ ಕವಿಯಿತ್ರಿಯ್ನ ದರ್ಶನದ ಮೇಲ್ಮೆಗೆ ಸಾಕ್ಷಿಯಾಗಿದೆ. ಮನುಷ್ಯನಿಗೇನೋ ಹತ್ತು ಮಾತು ಕಲಿಯುವ ಶಕ್ತಿಯೂ ಹಂಬಲವೂ ಇದೆ; ಅವನು ಧನ ದಂತಲ್ಲ. ಆದರೆ ನೆಲೆಗೆ ಒಂದು ಮಾತಿಲ್ಲದೆ ಹತ್ತಕ್ಕೆ ಹಾರಿದರೆ ಬಡವಿಲ್ಲದ ಮಡಿಕೆ ಕೊಡ ನೀರು ಕುಡಿಯ ಹೋದಂತೆ.

ಈ ದೃಷ್ಟಾಂತಗಳ ಮಾತು ಹಾಗಿರಲಿ, ಸಾಮಾಜಿಕ ಕಲ್ಯಾಣವನ್ನು ಕಣ್ಣಿದಿರಿಟ್ಟ ನಾವು-ಹೊಲ ಮಾಡುತ್ತ ಒಕ್ಕಲಾಗಿ ನಿಂತ ಭೂಮಿತಾಯಿಯ ಚೊಚ್ಚಿಲ ಮಕ್ಕಳ—ಹೊಲೆಯರೆಂದೆನಿಸಿಕೊಂಡೂ ನೆಲಹಿಡಿದು ನೋಂಕಾಯು ತ್ತಿರುವ ಆದಿಕರ್ಣಾಟಕರ ಬಿಕ್ಕೆ ಬೇಡಿಯಾದರೂ ತಲೆ ತಲಾಂತರಗಳನ್ನು ಹುಟ್ಟಿದ ನಾಡಿನಲ್ಲಿಯೇ ಕಳೆಯುವ ಬಡವರ-ಇಂದಿನ ಕೀರ್ತಿಯನ್ನು ಮುಂದಿ ನವರು ಬೆಳೆಸುವರೆಂಬ ನಂಬುಗೆಯಿಂದ ದೇಹವಿಟ್ಟ ಧರ್ಮವೀರರ-ಮಡಿದ ರಣವೀರರ-ತೀರಿದ ವಾಙ್ಮಯವೀರರ-ಋಣ ತೀರಿಸಬೇಕಾದರೆ, ಹಿತ ಸಾಧಿಸ ಬೇಕಾದರೆ ನಾಡಿನ ನುಡಿಯನ್ನೆ ಆಶ್ರಯಿಸಬೇಕಾಗಿದೆ. ಆದಿಲ್ಲದೆ ಗತಿಯಿಲ್ಲ.

ನಮ್ಮ ನಾಡಿನಲ್ಲಿ ವಿವಿಧ ಜಾತಿಯ, ಧರ್ಮದ, ಕುಲದ, ಬಗೆಯ, ಮಾತಿನ, ರೀತಿಯ ಜನರಿರುವರು. ಅವರನ್ನು ದಿನದಿನವೂ ಒಂದುಗೂಡಿಸಲು ಕನ್ನಡವು ಒಂದೇ ಹಾದಿ. ಹಿಂದಿನ ವಿಪುಲ ವೈಭವದ ಸಂಸ್ಕೃತಿಗೆ ಅದೊಂದೆ ಸಾಧನ. ಚಿಕ್ಕ ದೇವರಾಯನ ಚರಿತವನ್ನೂ, ಚಾಲುಕ್ಯ ವಿಕ್ರಮನ ಸಾಹಸ ವನ್ನೂ, ಹೊಯ್ಸಳ ಬಲ್ಲಾಳರ ಪ್ರತಾಪವನ್ನೂ, ರಾಷ್ಟ್ರಕೂಟ ಕನ್ನಾರರ ದಿಗ್ವಿಜಯವನ್ನೂ, ವಚನಕಾರರ ಉಪನಿಷತ್ತುಗಳನ್ನೂ, ದಾಸರ ಕೀರ್ತನೆ ಗಳನ್ನೂ, ಜೈನರ ಪುರಾಣಗಳನ್ನೂ, ಕನ್ನಡದ ಬಾಯಿಂದಲ್ಲದೆ ಯಾವ ಮುಖಾಂತರವಾಗಿ ಕೇಳಬಹುದು? ಹಿರಿಯರ ಸೊತ್ತಿಲ್ಲದ ಅಗತಿಕರಂತೆ ಕನ್ನಡಿಗರಲೆದಾಡುವುದು ಕನ್ನಡದ ನೆಲೆಯನ್ನು ಬಿಡುವುದರಿಂದಲ್ಲದೆ ಬೇರೆ ಯಾತರಿಂದಲೂ ಅಲ್ಲ.

ಭಾರತ ಸಾಮ್ರಾಜ್ಯವು ಕಳೆದು ಹೋದರೂ ಹೋಗಲಿ, ತಮ್ಮ ಪ್ರಿಯ ಶೆಕ್ಸಪಿಯರನು ಕೊನೆತನಕ ಉಳಿಯಲಿ ಎಂದು ಹೆಮ್ಮೆಯಿಂದ ಆಶಿಸುವ ಆಂಗ್ಲ ಜನಾಂಗದ ಉನ್ನತಿಯ ರಹಸ್ಯವು ಈ ಮಾತಿನಲ್ಲೂ ಉದಯೋನ್ಮುಖ

ಮರಾಠ ಜನಾಂಗಕ್ಕೆ ಅನುವು ಕೊಡುತ್ತಿದ್ದ ದೇವಗಿರಿಯ ಸೇವುಣ ಯಾದವರ ಸಾಮ್ರಾಜ್ಯವು ಮುಳುಗಿ ಹೋದರೂ ಮರಾಠರು ತಮ್ಮ ಜ್ಞಾನೇಶ್ವರಿಯ ಉಪಾಸನೆಯನ್ನು ಬಿಡಲಿಲ್ಲ. ತೆಲುಗರು ತಮ್ಮ ಸಾಹಿತ್ಯದ ಅಷ್ಟದಿಗ್ಗಜಗಳ ವೈಭವವು ತಪ್ಪಿದೆಂದುಕೊಂಡು ಕೊನೆದಾಡುವರು. ತಮಿಳರ ವಿಪುಲ ಜನಾಂಗವು ತಮಿಳು ವೇದಗಳಿಂದ ಧಾರಣೆಹೊಂದಿದೆ. ಆರ್ಯರು ದ್ರಾವಿಡ ಜನಾಂಗಗಳ ಮೇಲೆ ಕೈಮಾಡಿದುದು ತಮ್ಮ ವೇದ ಪುರಾಣ ಇತಿಹಾಸಗಳಿಂದ. ಮಾತು ಮನದ ಸಂಪತ್ತಿ, ಕೃತಿಗೆ ಸ್ಫೂರ್ತಿ. ತಮ್ಮ ವಾಗ್ದಾರಿದ್ರ್ಯವು ಇನ್ನೊಬ್ಬರ ನುಡಿಗೆ ಅರಸು, ಸರಸ ಎಂಬ ಬಿರುದು ಬೀರಲು ಹೊರಡುವದು. ಕನ್ನಡ ನುಡಿಗೆ ಆ ದುರ್ಭಾಗ್ಯವು ಬರುವ ಕಾರಣವಿಲ್ಲ. ಆದರೆ . . . .

## ವಾಙ್ಮಯೋಪಾಸನೆ ಇಲ್ಲ

ಆದರೆ ಏನು ? ಕನ್ನಡಿಗರಲ್ಲಿ ವಾಙ್ಮಯೋಪಾಸನೆಯು ತಪ್ಪಿಹೋಗಿದೆ. ಕನ್ನಡವಾಡದ ಪರಭಾಷೆಯವರಲ್ಲಿ ಅದಾವ ಕನ್ನಡಗ್ರಂಥವು ಹೆಸರುಗೊಂಡಿದೆ ? ತುಳಸೀದಾಸ ರಾಮಾಯಣವು ದಿಗಂತವನ್ನು ವ್ಯಾಪಿಸಲಿದೆ. ಜ್ಞಾನೇಶ್ವರ, ತುಕಾರಾಮ, ರಾಮದಾಸರ ಹೆಸರು ಆಂಗ್ಲಭಾಷೆಯಲ್ಲಿಯೂ ಹಬ್ಬಲಿದೆ. ತಿರುವಲ್ಲುರನ ಕೀರ್ತಿಯು ತಮಿಳರ ಕೀರ್ತಿಯನ್ನು ಸಾರುತ್ತಲಿದೆ. ಚೆನ್ನಬಸವ ಹಾಗು ಬಸವ ಪುರಾಣಗಳು ಇಂಗ್ಲಿಷಿನಲ್ಲಿ ಭಾಷಾಂತರಗೊಂಡು ಅರುವತ್ತು ವರ್ಷ ಮಿಕ್ಕಿದವೆಂಬುದೇನೋ ನಿಜ. ಹರಿಕಥಾಮೃತಸಾರವೂ ಮಹಾರಾಷ್ಟ್ರ ರೂಪಾಂತರ ಹೊಂದಿದೆ. ಆದರೆ ಮೇಲೆ ಹೇಳಿದ ಗ್ರಂಥಗಳ ಅಥವಾ ಗ್ರಂಥಕಾರರ ಕೀರ್ತಿಯು ಸಾವಿರ ಪಾಲಿಗಾದರೂ ಇವರ ಹೆಸರು ಬಂದಿರುವದೇ ? ಯಾವ ಗ್ರಂಥಗಳನ್ನು ಕುರಿತು ಅದರ ಭಾಷೆಯ ಜನಾಂಗದಲ್ಲಿ ಸಜೀವ, ಸಜ್ಞಾನ, ಸಕ್ರಿಯಾ ವಿಶ್ವಾಸಗಳಿಲ್ಲವೋ ಅದು ಬೇರೆಯವರಲ್ಲಿ ಪ್ರೀತಿಯನ್ನು ಹೇಗೆ ಹುಟ್ಟಿಸೀತು ? ಆದರವನ್ನು ಏಕೆ ಹೊಂದಬೇಕು ?

ಕನ್ನಡಿಗರಿಗೆ ಕನ್ನಡವಮಾತು ವೇದವಾದ ಕಾಲವೊಂದಿತ್ತು. ಅದು ಅವರ ಉನ್ನತಿಯ ಕಾಲ. ಪಂಪ–ಪೊನ್ನ-ರನ್ನರ ಕೃತಿಗಳು ಪುರಾಣ ತಿಲಕಗಳಾಗಿದ್ದವು. ಅವುಗಳ ಸಾವಿರಾರು ಪ್ರತಿಗಳನ್ನು ಬರೆಯಿಸುವುದು,

ಹಂಚುವುದು ಪುಣ್ಯದಾಯಕ ಕರ್ಮವೆಂದು ತಿಳುವಳಿಕೆಯಿತ್ತು. ಆ ವಿಶ್ವಾಸದ ಅವಶೇಷವು ಇಂದಿಗೂ ಜೈನರಲ್ಲಿದೆ. ಆದರೆ ಅದು ಅವಶೇಷವು ಮಾತ್ರ. ಹಾಗಿರದೆ ಅದು ಸಜೀವವಾಗಿದ್ದರೆ ಅನೇಕಾನೇಕ ಜೈನ ಪ್ರತಿಗಳು ಗೆದ್ದಲಿಗಳಿಗೆ ಆಹಾರವಾಗಿ ಬಿದ್ದುಕೊಂಡಿರುತ್ತಿದ್ದಿಲ್ಲ. ತುಂಬಲೂ ರಾಚಾರ್ಯನ ಚೂಡಾಮಣಿಗಾಗಿ ಪ್ರಯತ್ನ ನಡೆಯುತ್ತಿತ್ತು. ಬಂಗಾಲಿಗಳಿಗೋ ಮರಾಠಿಗರಿಗೋ ಈ ಮಾತು ಆಗಿದ್ದರೆ ಅವರು ಅದನ್ನು ಪಾತಾಳದ ಶೇಷನ ಬಾಯಿಂದಲಾದರೂ ಹಿರಿದು ತರಲು ಹವಣಿಸುತ್ತಿದ್ದರು. ಬಸವೇಶ್ವರನ ವಚನ, ಶೂನ್ಯಸಂಪಾದನೆ, ಕರಣ ಹಸುಗೆ, ಮಂತ್ರಗೋಪ್ಯ, ಷಟಚಕ್ರಗಳನ್ನಾದರೂ ದೀಕ್ಷೆಹೊಂದಿದ ಜಂಗಮನು ಬಲ್ಲವನಾಗಬೇಕು ಎಂದು ಒಮ್ಮೊನೊಮ್ಮೆ ನಿಯಮ ಹಾಗು ಅಪೇಕ್ಷೆಯಿತ್ತು. ಈಗ ಅದರ ಹೆಸರುಗಳನ್ನು ಬಲ್ಲ ಹಾಗು ಒಮ್ಮೆಯಾದರೂ ಅವುಗಳ ಎಲ್ಲ ಓಲೆಗಳನ್ನು ಕೈಮುಟ್ಟಿ ನೋಡಿದ ಜಂಗಮರೆಷ್ಟು ಮಂದಿ? ವ್ಯಾಸಮಾರ್ಗವಿದ್ದಾಗ್ಯೂ ದಾಸಮಾರ್ಗವನ್ನು ಪ್ರಬಲತೆಗೆ ತಂದು ಲಕ್ಷಗಟ್ಟಲೆ ಕೀರ್ತನೆಗಳನ್ನು ಕನ್ನಡದಲ್ಲಿ ಹಾಡಿಹೋದ ದಾಸರ ಋಣ ತೀರಿಸುವುದು ಹೇಗೆ? ಅವರ ಲಕ್ಷ್ಯಕ್ಕೆ ನಮ್ಮ ಅಲಕ್ಷ್ಯವೆ? ದಾಸರ ಹಾಡುಗಳನ್ನು ಅವರ ಮನೆತನದವರು ಮುಚ್ಚಿಟ್ಟು ಪೂಜೆ ಮಾಡುತ್ತಾರೆ. ಅವು ದೊರಕಲಾರವು ಎನ್ನಬಹುದು. ಗೂಢಭಾಷೆಯಲ್ಲಿ ಬೇರೆ ಪಂಥದವರು ಬರೆದ ಮಹಾನುಭಾವ ವಾಙ್ಮಯವನ್ನೇ ಮರಾಠರು ಬಯಲಿಗೆ ತರಲಿಲ್ಲವೆ? ವೈಷ್ಣವರಿಗೆ ವೈಷ್ಣವ ವಾಙ್ಮಯವನ್ನು ಬೆಳಕಿಗೆ ತರವುದು ಬಿಗಿಯೇ? ಆದರೆ ದ್ವೈತದ ದಿವ್ಯಜ್ಞಾನವನ್ನು ಮುದ್ರಾಂಕಿತರಲ್ಲದವರಲ್ಲಿ ಮುದ್ರಿಸಿ ಹಂಚುವದು ಪಾಪವೋ ಪುಣ್ಯವೋ ಎಂಬ ಸಮಸ್ಯೆಯೇ ಇನ್ನೂ ಕೆಲವರಿಗೆ ಬಗೆಹರಿದಿಲ್ಲ. ಜಾಗರದ ತೂಕಡಿಕೆಯಲ್ಲಿ ಕೀರ್ತನೆಗಳಿಗೆ ತಲೆದೂಗಿ ತಲೆಬಾಗುವವರನ್ನು ಕಾಣುವದೇನೂ ಅಪರೂಪವಲ್ಲ. ಆದರೆ ತುಕಾರಾಮನ ಅಭಂಗಗಳ, ರಾಮದಾಸನ ಶ್ಲೋಕಗಳ, ಮೀರಾಬಾಯಿಯ ಹಾಡುಗಳ, ಕಬೀರನ ದೋಹೆಗಳ, ತ್ಯಾಗರಾಜನ ಕೃತಿಗಳ, ಗಗನಭೇದಕ, ವಿಶ್ವವ್ಯಾಪಕ, ಹೃದಯ ಸಂಮೋಹಕ, ಸಂಶಯವಿಚ್ಛೇದಕ, ಜೀವತಲ್ಲೀನಕ ಶಕ್ತಿಯು ರಾಗರಸವಾದ ಕನ್ನಡ ಕೀರ್ತನೆಗಳು ಕನ್ನಡ ಕಂಠದಿಂದ ಬಂದರೆ ಇವುಗಳಲ್ಲಿಯೂ

ಹುಟ್ಟಲಾರದೆ? ಆದರೆ ನಮ್ಮ ಹಾಡುಗಾರರ ಬಿಂಕ ದೊಡ್ಡದು, ನಮ್ಮ ಮಡಿವಂತಿಕೆ ಮಿತಿ ಮೀರಿದುದು, ನಮ್ಮ ರಸಿಕತೆಗೆ ತಳವಿಲ್ಲ, ಬುಡವಿಲ್ಲ. ಶ್ರೀವೈಷ್ಣವ ಮತವನ್ನು ಸ್ವೀಕರಿಸಿದಷ್ಟಕ್ಕೆ ತಾವು ತಮಿಳರಾಗಿ ಬಿಟ್ಟೆರು ಎಂದು ತಿಳಿಯುವ ಕನ್ನಡಿಗರೂ ಮೈಸೂರಲ್ಲಿ ಅಲ್ಲಲ್ಲುಂಟೆಂದು ನನ್ನೊಬ್ಬ ಮಿತ್ರರ ಬಾಯಿಂದ ಕೇಳಿದ್ದೇನೆ. ತಿರುಮಲಾರ್ಯರು ಕನ್ನಡವನ್ನು ಹಿಗ್ಗಿಸಿದರು. ಆದರೆ ಅವರ ಬಾಯುಳ್ಳ ಬಿಸ್ನಹವು ಕಿವಿಯಿಲ್ಲದೆ ಮೌನಸಮಾಧಿಯಲ್ಲಿದೆ. ಗೀತಗೋಪಾಲನ ಗೀತಗಳು ಪ್ರಚಾರಕ್ಕೇಕೆ ಬರಬಾರದು?

## ಕನ್ನಡ ಮಹಾವೃಕ್ಷ

ನಮ್ಮ ಇತಿಹಾಸ, ಪರಾಕ್ರಮ, ವೈಭವ, ತ್ಯಾಗ, ದರ್ಪ, ಹೆಮ್ಮೆ; ನಮ್ಮ ಧರ್ಮಸಂಶಯ, ವಿಶ್ವಾಸ, ಪ್ರೀತಿ, ಭಕ್ತಿ, ಹರ್ಷ, ದಾಸ್ಯ; ನಮ್ಮ ಜೀವನ ಆಸೆ, ಸೇರಿಕೆ, ಹೇಸಿಕೆ, ರಸಿಕತೆ, ಮೋಹ, ಬೆಡಗು–ಎಲ್ಲವೂ ಕನ್ನಡದಲ್ಲಿದೆ. ಬೇರು, ಬುಡ, ಬೊಡ್ಡೆ, ತೊಂಗಲು, ತಳಿರುಗಳಿಂದ ಮಹಾವೃಕ್ಷವಾಗಿ ಕನ್ನಡ ಸಾಹಿತ್ಯವು ಹರುಹಿ ನಿಂತಿದೆ. ಕನ್ನಡವಕ್ಕಿಗಳು ಚಿಕ್ಕೆಗಳ ಮಿಟುಕಿನೊಡನೆ ರೆಕ್ಕೆಗಳ ತಾಳ ಹಾಕುತ್ತ ಮುಗಿಲಿನ ಬೀದಿಯುಗುಂಟ ಹಾದಿಯಲ್ಲಿ ಹೆಜ್ಜೆ ಗುರುತು ಬಿಡದೆ ಹಾರಾಡಿರಬಹುದು. ಆದರೆ ಗೂಡಿಗೊಂದು ಗಿಡ ಬೇಕು. ಆಹಾರ, ವಿಹಾರ, ವಿಷಾದ, ವಿಶ್ರಾಂತಿಗೆ ನಿರಾವಲಂಬದಲ್ಲಿ ನೆಲೆಗೊಂಡು ಕನ್ನಡ ಸಾಹಿತ್ಯಶಾಖೆಯಲ್ಲಿ ಕುಳಿತು ನಾವು ಕೂಗಬಹುದು. ಕೂಜಿಸಬಹುದು. ಮತಪಂಥಗಳ ಭೇದವಿಲ್ಲದೆ ಕಂಡ ಕಂಡವೆಲ್ಲ ಒಂದೆಂಬ ಭಾವನೆಯು ಇಂದು ತಲೆಯೆತ್ತುತ್ತಿದೆ. ಅದು ಶುಭ ಚಿನ್ಹ.

ಆದರೆ ಒಣಹೆಮ್ಮೆಯ ತೋರಿಕೆಯಿಂದ ಏನೂ ಸಾಧ್ಯವಾಗದು. ಧಾರವಾಡ, ಬೆಳಗಾವಿ, ವಿಜಾಪುರ, ಪ್ರಾಂತ್ಯಗಳು ಅಂದರೆ ತುಂಗೆಯ ಉತ್ತರದ ಸೀಮೆಯು ಕ್ರಮೇಣ ಕನ್ನಡವನ್ನು ಕಳೆದುಕೊಂಡ ಇತಿಹಾಸವು ದೇವಗಿರಿಯ ಕೊನೆಯ ಸೇವುಣರಿಂದ ಪ್ರಾರಂಭವಾಗುವದು. ಕರ್ನಾಟಕದ ವಿಠ್ಠಲನನ್ನು ಮಹಾರಾಷ್ಟ್ರರು ಭಕ್ತಿಯಿಂದ ಕೊಂಡುಕೊಳ್ಳುವರು. ದತ್ತಾತ್ರೇಯನ ಗುರುಭಕ್ತಿಯೊಡನೆ ಮರಾಠಿ ಗುರುಚರಿತ್ರದ ಪಾರಾಯಣವೂ ಕನ್ನಡದಲ್ಲಿ ವಿಗ್ವಿಜಯ ಸಾಗಿಸುವದು. ಬಾಮನಿ, ಆದಿಲಶಾಹಿರಾಜ್ಯಗಳ ನೀತಿತಂತ್ರ

ದಲ್ಲಿ ಕನ್ನಡವು ಮರಾಠಿಯ ಕಾಲ್ತುಳಿತಕ್ಕೆ ಸಿಕ್ಕಾಗುವುದು. ಮೈಸೂರು ಕರ್ನಾಟಕಕ್ಕೆ ತುಂಗೆಯ ಉತ್ತರ ಕನ್ನಡದ ಅರಿವು ಮರೆವಾಗುವುದು. ಘಂಡ ಪಾಳೆಗಾರಿಕೆಯು ನಮ್ಮ ಮೂರು ಜಿಲ್ಲೆಗಳ ಜೀವನ ಸರ್ವಸ್ವವಾಗುವುದು. ವೀರಶೈವ ಸಮಾಜಕ್ಕೆ ಸಂಸ್ಕಾರ ಕಡಿಮೆಯಾಗುತ್ತ ಬರುವುದು. ಬ್ರಾಹ್ಮಣರು ಪೇಶ್ವೆಯವರ ಪಕ್ಕದಲ್ಲಿ ಆಶ್ರಯ ಹುಡುಕುವರು. ಅದದ್ದರಲ್ಲಿ ನ್ಯಾಯವೂ ಇಲ್ಲ. ಅನ್ಯಾಯವೂ ಇಲ್ಲ. ಎಲ್ಲವೂ ಐತಿಹಾಸಿಕ ಸ್ವಭಾವ.

## ಮುಂದೇನು ?

ಈಗ ನಾವು ಎಚ್ಚತ್ತು ಎಲ್ಲರಿಗೂ ಸರಿ ಮೇಲಾಗಬೇಕಾದುದೂ ಸ್ವಭಾವವೇ ? ಹಾಗಾದರೆ ಮುಂದೇನು ? ಊರೂರಿಗೆ ದಾಸಕೂಟಗಳಾಗಬೇಕು. ಆದರೆ ಬರೀ ವೈಷ್ಣವರವಲ್ಲ. ಅನುಭವದ ಮಂಟಪಗಳು ಉದಯಿಸಬೇಕು. ಆದರೆ ಕೇವಲ ವೀರಶೈವರವಲ್ಲ. ಸಾಹಿತ್ಯಗೋಷ್ಠಿಗಳು ನೆರೆಯಬೇಕು. ಆದರೆ ಸಂಶೋಧಕರಿಗಲ್ಲ. ಶೂನ್ಯಸಂಪಾದನೆ, ಹರಿಕಥಾಮೃತಸಾರ, ಅನುಭವಾಮೃತ, ಭರತೇಶವೈಭವ, ಚಿಕ್ಕ ದೇವರಾಜ ಬಿನ್ನಪ, ಗೀತಗೋಪಾಲಗಳ ಶ್ರವಣ ಮನನನಿಧಿಧ್ಯಾಸವು ದೊಡ್ಡ ಪಟ್ಟಣಗಳಲ್ಲಿ ದಿನಾಲು ಬೇಕು. ವಚನ, ಸಂವಾದ, ಸಂಪಾದನೆ, ಕೈವಲ್ಯಗಳ ಅಭ್ಯಾಸ ನಡೆಯಬೇಕು. ಕೀರ್ತನೆ, ಸುಳಾದಿ, ಉಗಾಭೋಗಗಳು, ತಮ್ಮ ರಾಗದೊಡನೆ ರಸವನ್ನು ಬೀರಬೇಕು. ಪಂಪಭಾರತ, ಕುಮಾರವ್ಯಾಸ ಭಾರತ, ಶಿವಗಣದ ರಗಳೆ, ಕಂಠೀರವ ವಿಜಯ, ಹರಿಶ್ಚಂದ್ರ ಕಾವ್ಯ, ನಾಗಚಂದ್ರ ರಾಮಾಯಣ, ಜೈಮಿನಿ ಭಾರತ, ವೃಷಭೇಂದ್ರ ವಿಜಯ, ಶಾಸನ ಪದ್ಯಮಂಜರಿ, ಜನಪದ ಸಾಹಿತ್ಯ, ಚಿಕ್ಕದೇವರಾಜವಿಜಯಗಳ ಪಠನವಾಗಬೇಕು. ಇವೆಲ್ಲ ಜೀವನ ರಸಾಯನಗಳು. ಈ ಗ್ರಂಥಗಳು ಬೇರೆ ಭಾಷೆಗಳೊಳಗಿನ ಇದೇ ಜಾತಿಯ ಯಾವ ಗ್ರಂಥಗಳಿಗಿಂತಲೂ ಕಡಿಮೆಯಿಲ್ಲ. ಇದನ್ನು ಜನರು ಅನುಭವದಿಂದಲೇ ಕಾಣಬೇಕು.

## ೨. ಕನ್ನಡಿಗರ ಆದ್ಯಕರ್ತವ್ಯ

ಜಗತ್ತಿನ ಒಂದು ಸಂಕ್ರಾಂತಿ ಕಾಲದಲ್ಲಿ ಹೊಸಮನ್ವಂತರದ ಆರಂಭದಲ್ಲಿ, ನವಯುಗಾರಂಭದ ಹೊತ್ತಿನಲ್ಲಿ ರಕ್ತಪ್ರಳಯ, ಜಲಪ್ರಳಯ, ಅಗ್ನಿಪ್ರಳಯ ನಡೆದಿರುವವು. ರಶಿಯಾದಂಥ ಪ್ರಚಂಡ ರಾಜ್ಯವು ರಾಜರ ಕೈಯೊಳಗಿಂದ ಪಾರಾಗಿ ಪ್ರಜರ ಕೈಸೇರಿ (Bolshevism) ಬೊಲ್ಶೈವಿಝಂ ಎಂಬ ಹೊಸ ತತ್ವವನ್ನೂ ಸಂಕಟಪರಂಪರೆಗಳನ್ನೂ ಸಹಿಸಿ ಕೂಡ ಆಚರಿಸಿ ತೋರಿಸುತ್ತಿರುವದು. ಇಂಗ್ಲಂಡವು ಮದಾಂಧತೆಯಿಂದ ವಿಕಲವಾಗುತ್ತಿರುವದು. ಫ್ರಾನ್ಸವು ದರ್ಪದಿಂದ ಮೇಲೇರುತ್ತಿರುವದು. ಜರ್ಮನಿಯು ತನ್ನ ಕರ್ಮಫಲವನ್ನನುಭೋಗಿಸುತ್ತಿರುವದು. ಇಟಲಿಯು ಗರ್ವದ ಉಬ್ಬಾಳುತನದಿಂದ ಸಟಿಸೆಟೆದು ಜನರನ್ನು ಹಾಯುತ್ತಿರುವದು. ಜಪಾನವು ಒಂದು ದಿನದಲ್ಲಿ ೧ ಲಕ್ಷ ಜನರನ್ನು ಕಳಕೊಂಡಿದ್ದರೂ ಸ್ಥಿತಪ್ರಜ್ಞನ ಧೈರ್ಯದಿಂದ ಸಾವರಿಸಿಕೊಳ್ಳುತ್ತಿರುವದು. ಚೀನವು ತನ್ನ ಭವಿತವ್ಯವನ್ನು ಗೊತ್ತುಮಾಡಿಕೊಳ್ಳಲು ಅಂತಃಕಲಹದಲ್ಲಿ ತೊಡಗಿರುವದು. ತುರ್ಕಸ್ಥಾನವು ಪಾಶ್ಚಿಮಾತ್ಯರ ಬಿಂಕದ ಮೂಗು ಜಜ್ಜಿ ಅವರ ಎದೆಯಮೇಲೆ ತನ್ನ ಸ್ವತಂತ್ರತೆಯ ಧ್ವಜವನ್ನು ಊರಿರುವದು. ಐರ್ಲಂಡ, ಇಜಿಪ್ತ, ಪೋಲಂಡಗಳು ಸ್ವತಂತ್ರತೆಯ ಬೆಲೆಯನ್ನು ರಕ್ತದಿಂದಳೆದು ಕೊಟ್ಟು ಅದನ್ನು ದೊರಕಿಸುವ ಉದ್ಯೋಗದಲ್ಲಿ ತೊಡಗಿರುವವು. ಅಫಗಾನಿಸ್ತಾನ, ಪರ್ಸಿಯಾ, ಅರೇಬಿಯಾ ಎಚ್ಚತ್ತಿರುವವು. ಪಾಶ್ಚಿಮಾತ್ಯರು ತಮ್ಮ ಕಪಟಾಚರಣೆಯ ಮೇಲೆ ಇದೂವರೆಗೆ ಹೊಚ್ಚಿಕೊಂಡ ಮುಸುಕು ಹಾರಿಹೋಗಿ ಅವರ ಅಕರಾಳ ವಿಕರಾಳ ಸ್ವರೂಪವು ಬೈಲಿಗೆ ಬೀಳುತ್ತಿರುವದು. ಅಮೇರಿಕಾ ದೇಶವು ಸಜ್ಜನರಂತೆ ತಟಸ್ಥತೆಯಿಂದ ಸತ್ಯಾಸತ್ಯ ಪರೀಕ್ಷೆಯನ್ನು ನಡೆಸಿರುವದು. ಯುರೋಪದಲ್ಲಿ ಪ್ರಳಯಕಾಲವು ಸಮೀಪಿಸಿತೆಂದು ಅಲ್ಲಿಯ ವಿದ್ವಾಂಸರು ಅರೆಬೆದರಿ ಸಾಯುತ್ತಿರುವರು.

ಹಿಂದುಸ್ತಾನದಿಂದಲೇ ಜಗತ್ತಿನ ಉದ್ಧಾರವೆಂದು ಕೆಲವರು ಅನುಮಾನದಿಂದಲೂ, ಕೆಲವರು ನಿರಾಶೆಯಿಂದಲೂ, ಕೆಲವರು ಶ್ರದ್ಧೆಯಿಂದಲೂ ಆಡುತ್ತಿರುವರು. ಹಿಂದುಸ್ಥಾನವು ಬ್ರಾಹ್ಮಣ ಬ್ರಾಹ್ಮಣೇತರ ತೊಡಕು,

ಹಿಂದೂ ಮುಸಲ್ಮಾನರ ತೊಡಕು, ಪೌರ್ವಾತ್ಯ ಪಾಶ್ಚಿಮಾತ್ಯ ಸಂಸ್ಕೃತಿಗಳ ತೊಡಕು, ಭಾಷೆಗಳ ತೊಡಕು, ಶಿಕ್ಷಿತಾಶಿಕ್ಷಿತರ ತೊಡಕು, ಸ್ಪೃಶ್ಯಾಸ್ಪೃಶ್ಯರ ತೊಡಕು, ಹಿಂಸಾಹಿಂಸೆಗಳ ತೊಡಕು, ಮತಮತಗಳ ತೊಡಕು ಮೊದ ಲಾದ ಅನೇಕ ತೊಡಕುಗಳನ್ನು ಅಪೂರ್ವಶಕ್ತಿಯಿಂದ ಬಿಡಿಸಿ ಜಗತ್ತಿನ ಸಂಶಯ ಸಮೂಹದ ಪರಿಹಾರವನ್ನೇ ಮಾಡುವದರಲ್ಲಿ ತೊಡಗಿರುವದು. ಥಿಯೂಸಫಿಯ ಜನರು 'ಜಗದ್ಗುರುವು' ಶೀಘ್ರವೇ ಬರುವನೆಂದು ಸಾರುತ್ತಿರುವರು. ಶ್ರೀಮದ್ಬಸವಾದಿಗಳು ಅವತಾರವಾಗಿರುವರೆಂದು ವೀರ ಶೈವರು ಹೇಳುವರು. ಕ್ರಿಶ್ಚನರು, ಪಂಜಾಬದ 'ಸಾಧುಸಿಂಹರೇ' ಪ್ರತಿ ಕ್ರೈಸ್ತರಾಗಿ ಬಂದಿರುವರೆಂದು ಅನ್ನುವರು. ಕೆಲವರು ಮಹಾತ್ಮಾ ಗಾಂಧಿ ಯವರೇ ಆ ಅವತಾರವೆನ್ನುವರು; ಕವಿ ರವೀಂದ್ರರು ಅಪೂರ್ವವಾದ ವಿಶ್ವಭಾರತಿಯನ್ನು ಸ್ಥಾಪಿಸಿ ಜಗತ್ತಿನ ಪಂಡಿತರ ಕೂಟಕ್ಕೆ ಎಡೆಮಾಡಿ ಕೊಟ್ಟು ಹಳೇ ಆಶ್ರಮಗಳನ್ನು ನೆನಗಿಗೆ ತಂದುಕೊಟ್ಟಿರುವರು. ಜಗದೀಶ ಚಂದ್ರರು ಅಣುರೇಣು ತೃಣಕಾಷ್ಠದಲ್ಲಿ ತುಂಬಿರುವ ಜೀವವನ್ನು ಹುಡುಕಿ ತೋರಿಸಿರುವರು; ಅಮೇರಿಕೆಯ ಎಡಿಸನ್ (ಫೋನೋಗ್ರಾಫ್‌ದ ಜನಕ ರಾದ ಎಡಿಸನ್‌ರು) ಮರಣಾನಂತರ ಜೀವವು ಎಲ್ಲಿ ಹೋಗುವದೆಂಬದನ್ನು ಗೊತ್ತುಹಚ್ಚಲು ಹೊರಟಿರುವರು; ಇನ್ಸಟನ್‌ರೆಂಬವರು ಬಹ್ಮಾಂಡ ವನ್ನು ಅಳೆಯಲು ಗಣಿತಶಾಸ್ತ್ರದಲ್ಲಿಯೇ ಕ್ರಾಂತಿಯನ್ನು ಮಾಡಿದ್ದಾರೆ. ಮಹರ್ಷಿಗಳಾದ ಶ್ರೀ ಅರವಿಂದರು ಮಾನವರ ಮನೋಜೀವವನ್ನು ಮುಗಿಸಿ, ಇಳೆಯಲ್ಲಿ ದೇವಜಾತಿಯ ವಿಜ್ಞಾನಜೀವನವು ಸಾಗಲೆಂದು ಓಂ ದೇವಾಯ ಜನ್ಮನೇ, ಎಂದು ತಪವನ್ನೆಸಗುತ್ತಿರುವರು. ಮಹಾತ್ಮರು ಅಹಿಂಸೆಯಿಂದ ಜಗತ್ತನ್ನು ಗೆಲ್ಲುವ ಮಂತ್ರವನ್ನು ಜಗತ್ತಿಗೆ ಉಪದೇಶಿ ಸುತ್ತಿರುವರು. ಇವೇ ಮೊದಲಾದ ಸಂಗತಿಗಳೇ ಕಣ್ಣೆದುರಿಗೆ ಬಂದು ರವೀಂದ್ರನಾಥರು "ಇಂಥ ಕಾಲಕ್ಕೆ ಭರತಖಂಡದಲ್ಲಿ ನಾನು ಹುಟ್ಟಿದೆ ನಾನೇ ಧನ್ಯ ನಾನೇ ಧನ್ಯ" ಎಂದಂದು ಕೊಂಡಿರುವರು. ಸಂಪೂರ್ಣ ವಿಚಾರಮಾಡಿ ಸದ್ಯಸ್ಥಿತಿಯ ಅವಲೋಕನ ಮಾಡಿದ ಪ್ರತಿಒಬ್ಬ ಕನ್ನಡಿ ಗನ ಬಾಯಿಂದ ಈ ಉದ್ಗಾರಗಳು ಹೊರಡಲಿಕ್ಕೆ ಬೇಕು. ಅವನಿಗೆ ಆನಂದ ಬಾಷ್ಪಗಳು ಬರಲಿಕ್ಕೆ ಬೇಕು. ರೋಮಹರ್ಷಣವಾಗಲಿಕ್ಕೆ ಬೇಕು.

ಕನ್ನಡಿಗರು ಮೊದಲು ಈ ಜಗತ್ತೆಂಬ ಪಟ್ಟಣದ ಪಟ್ಟಣಿಗರು. ಆ ಮೇಲೆ ಕರ್ನಾಟಕದ ಕನ್ನಡಿಗರು, ಯಾವ ಕಾರ್ಯವನ್ನೂ ಮುಹೂರ್ತ ನೋಡಿ ಮಾಡಬೇಕಂತೆ. ನಾನು ಇದುವರೆಗೂ ವರ್ತಮಾನಕಾಲದ ವರ್ಣನೆ ಯನ್ನೇ ಮಾಡಿರುವೆನು. ಮುಹೂರ್ತದ ಲಕ್ಷಣವನ್ನೇ ಹೇಳಿದೆನು. ನಾವು ಕೂಪಮಂಡೂಕರಾಗಿರಬಾರದು. ವಿಶಾಲವಿಶ್ವದಲ್ಲಿ ಏನು ನಡೆದಿದೆ ಎಂಬದನ್ನು ನಾವು ತಿಳಿದುಕೊಳ್ಳಲುಬೇಕು. ಅಂದರೆ ಇಂಥ ಕಾಲಕ್ಕೆ ನಾವು ಕರ್ನಾಟಕದ ಕನ್ನಡಿಗರೆಂದು ಮುಂದೆ ಬಂದು ಧೈರ್ಯದಿಂದ ನಿಲ್ಲಬೇಕಾದರೆ ಎಂಥ ಅಪೂರ್ವ ಉದ್ಯೋಗವನ್ನು ಮಾಡಿ ತೋರಿಸ ಬೇಕೆಂಬದು ಹೊಳೆಯುವಂತಿದೆ. ಕಾಲಮಾಹಾತ್ಮ್ಯವನ್ನು ತಿಳಿದುಕೊಳ್ಳು ವದು ನಮ್ಮ ಆದ್ಯ ಕರ್ತವ್ಯ.

ಕಾಲಮಾಹಾತ್ಮ್ಯವನ್ನು ತಿಳಿದುಕೊಂಡ ಮೇಲೆ ಅಂತರ್ಮುಖವಾಗಿ ನಾವಾರೆಂಬದನ್ನು ತಿಳಿದುಕೊಳ್ಳುವದು ಆ ಮೇಲಿನ ನಮ್ಮ ಆದ್ಯಕರ್ತವ್ಯವು ಸ್ವಧರ್ಮವೂ ಸ್ವಭಾವವೂ ಮನದಟ್ಟಾಗಿ ತಿಳಿಯದಿದ್ದರೆ ನಾವು ಮಾಡುವ ದಾದರೂ ಏನು? ಕನ್ನಡಿಗರ ಸ್ವ-ದ ಧರ್ಮವಾವುದು. ಕನ್ನಡಿಗರ ಸ್ವ-ದ ಭಾವವಾವುದು.? ಯಾವ ಧರ್ಮಕ್ಕಾಗಿ ಕನ್ನಡಿಗನೆಂಬ ಕುಲ ಪುರುಷನು ಸಹಸ್ರಾವಧಿ ವರ್ಷಗಳಿಂದ ಕರ್ನಾಟಕವೆಂಬ ತನ್ನ ದೇಹದಲ್ಲಿ ತನ್ನ ಚಾರಿತ್ರ್ಯವನ್ನು ಸಾಗಿಸಿರುವನು? ಪ್ರತಿ ಮನುಷ್ಯನಿಗೆ ಒಂದು ಸ್ವ ಅಂದರೆ (ಆತ್ಮ) ಇದ್ದಂತೆ ಪ್ರತಿಕುಲಕ್ಕೂ ಒಂದು ಸ್ವ-ಇರಲಿಕ್ಕೆ ಬೇಕು. ಕನ್ನಡಿಗನೆಂಬದೊಂದು ಕುಲವೆಂದು ಶ್ರೀ ಚೆನ್ನಬಸವೇಶ್ವರರು ಕರಣ ಹಸಿಗೆಯಲ್ಲಿಯೂ, ಕನ್ನಡಿಗನೆಂಬದೊಂದು ಜಾತಿಯೆಂದು ಶ್ರೀನಿಜಗುಣರು ವಿವೇಕಚಿಂತಾಮಣಿಯಲ್ಲಿಯೂ ಹೇಳಿರುವರು. ಕನ್ನಡಿಗರೆಂಬ ವ್ಯಕ್ತಿ ಪುರುಷರಲ್ಲಿ, ಕನ್ನಡಿಗನೆಂಬ ಸಮಷ್ಟಿ ಪುರುಷನೊಬ್ಬನು ಇರುತ್ತಿರಲಿಕ್ಕೆ ಬೇಕು. ಕರ್ನಾಟಕವೇ ಅವನ ದೇಹ, ಇಂದಿನವರೆಗಿನ ಇತಿಹಾಸವೇ ಅವನ ಚರಿತ್ರೆ, ಇಲ್ಲಿಯ ಜನರೇ ಅವನ ಪ್ರಾಣಶಕ್ತಿ, ಇಲ್ಲಿಯ ಮತ-ಸಮೂಹವೇ ಅವನ ಸಾಧನಪ್ರಪಂಚ, ಇಲ್ಲಿಯ ವಾಙ್ಮಯವೇ ಅವನ ಬುದ್ಧಿ ಅಂತಃಕರಣಗಳ ನಿದರ್ಶಕ, ಇಲ್ಲಿಯ ಗುಡಿಗೋಪುರಗಳೂ ಮಹಾಲು ಮಂದಿರಗಳೂ, ಕೆರೆ ಕಟ್ಟೆಗಳೂ ಕರ್ಮಕೌಶಲದ ಪ್ರದರ್ಶಕ. ಅವನಿಗೆ

ಬಾಲ್ಯಯೌವನವಾರ್ಧಕ್ಯಗಳುಂಟು. ಆದರೆ, ನಮ್ಮಂತೆ ಮರಣವನ್ನು ಮೇಲಿಂದ ಮೇಲೆ ಅವನು ಬೆಟ್ಟಿಯಾಗುವವನಲ್ಲ. ಚಿರಂಜೀವಿ. ಅವನೊಬ ಕರ್ಮಯೋಗಿ, ಪುಲಕೇಶಿವಲ್ಲಭ ಮಹಾರಾಜ, ವೀರವಿಕ್ರಮ ನೃಪತುಂಗ ಬುಕ್ಕಭೂಪಾಲ, ಚಿಕ್ಕದೇವರಾಯ ಮೊದಲಾದ ಜ್ಞಾನಿಗಳಾದ ಕ್ಷತ್ರಿಯ ಪುಂಗವರು ಕನ್ನಡಿಗನೆಂಬ ಸಮಷ್ಟಿಜಾತಿಪುರುಷನ ಉಜ್ವಲ ಕರ್ಮಗಳು. ವಿದ್ಯಾರಣ್ಯರು, ನಿಜಗುಣರು, ಮಧ್ವಚಾರ್ಯರು, ಬಸವೇಶ್ವರರು, ಪುರಂದರದಾಸರು, ಅವನ ಬುದ್ಧಿಯ ಜ್ಯೋತಿಗಳು, ಪಂಪ, ರನ್ನ, ಕುಮಾರ ವ್ಯಾಸ, ಲಕ್ಷ್ಮೀಶ, ಹರಿಹರ, ರಾಘವಾಂಕರು ಅವನ ರಸತರಂಗಗಳು. ನೃಪತುಂಗನ ಪೂರ್ವಕಾಲವು ಅವನ ಬಾಲ್ಯವು, ಚಿಕ್ಕದೇವರಾಯನ ವರೆಗಿನ ಕಾಲವು ಅವನ ತಾರುಣ್ಯ, ಇತ್ತೀಚಿನದು ವಾರ್ಧಕ್ಯ. ಈಗ ಮತ್ತೆ ಹೊಸತನ ಉಂಟಾಗಿದೆ. ಈ ಬಗೆಯ ಈ ಕನ್ನಡ ಕುಲಪುರುಷನ ಜೀವಜ್ಯೋತಿಯ ಸಾಕ್ಷಾತ್ಕಾರ ಮಾಡಿಕೊಳ್ಳುವದೇ ನಮ್ಮ ಆದ್ಯಕರ್ತವ ವು.

ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ।
ಅವಿಭಕ್ತಂ ವಿಭಕ್ತೇಷು ತದ್ಜ್ಞಾನಂ ಸಾತ್ವಿಕಂ ಸ್ಮೃತಂ॥

ಅನೇಕವನ್ನು ಏಕದಲ್ಲಿ ಸಮನ್ವಯಿಸುತ್ತ ಹೋಗುವದೇ ಆತ್ಮೋನ್ನತಿಯ ಹಾದಿ. ಅಂತೆಯೇ ಎಲ್ಲರಂತೆಯೂ ನಮ್ಮದೂ ಎಲ್ಲ ಕಡೆಯಂತೆ ಇಲ್ಲಿಯೂ ಇದೇ ನಮ್ಮ ಆದ್ಯಕರ್ತವ್ಯ. ನಮ್ಮ ಇತಿಹಾಸದ ಬಗ್ಗೆ ಸಾಮಾನ್ಯವಾಗಿ ನಮಗೆಲ್ಲರಿಗಿರುವ ಜ್ಞಾನವು ತಾಮಸವಾಗಿದೆ. ಸುಂಟರಗಾಳಿಯಲ್ಲಿ ಹಾರಿಹೋಗುತ್ತಿರುವ ಹಣ್ಣೆಲೆಗಳಂತೆ ನಮ್ಮ ಇತಿಹಾಸದೊಳಗಿನ ಆ ಪ್ರಸಂಗವು ನಮ್ಮ ಕಣ್ಣೆದುರಿಗೆ ಬಂದು ಎಲ್ಲಿಯೋ ಮಾಯವಾಗುತ್ತದೆ. ಇತಿಹಾಸವು ನಮಗೆ, ಶೃಂಗಾರ ವೀರಕರುಣಾದ್ಭುತಾದಿ ನವರಸಗಳ ನವೋನವ ಅವತಾರ ಲೀಲಾಮೂರ್ತಿಯಂತೆ ಕಂಗೊಳಿಸುವದಿಲ್ಲ. ಶರೀರರಚನಾಶಾಸ್ತ್ರವನ್ನು ತಿಳುಹಿಸಲು ತಂದ ಎಲುಬಿನ ಪೆಟ್ಟಿಗೆಯಂತೆ ನಮ್ಮ ಇತಿಹಾಸವಾಗಿದೆ. ಕನ್ನಡ ಕುಲಪುರುಷನು ಕನಸಿನೊಳಗಿನ ಮಾನಿಸನಲ್ಲ, ನೀರೊಳಗಿನ ನೆರಳಲ್ಲ, ಚಿತ್ರದೊಳಗಿನ ಗೊಂಬೆಯಲ್ಲ ಕಲ್ಪನೆ ಬರೆದ ಚಿತ್ರವಲ್ಲ, ಪ್ರಸಂಗಗಳೆಂಬ ಎಲುಬಿನ ಹಂದರವಲ್ಲ. ಅವನು ನಮ್ಮೆಲ್ಲರ ವಿದ್ಯೆಗಳೊಳಗೆ ದೀಪವಾಗಿರುವ ಬೆಳಕು. ನಮ್ಮ ಕನ್ನಡ

ನಾಡಿನಲ್ಲಿ, ಜೈನ, ಲಿಂಗವಂತ, ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಮತಗಳು ಪರಸ್ಪರ ವೈಷಮ್ಯವನ್ನುಂಟು ಮಾಡಲಿಕ್ಕೆ ಹುಟ್ಟಿದವೆಂಬುದು ಮೂರ್ಖತನವು. ಪರಸ್ಪರ ಸಂಬಂಧವಿಲ್ಲದವುಗಳೆಂಬುದು ಅಜ್ಞಾನ. ಈ ಭಿನ್ನ ಮತಗಳ ಹಿಂದೆ, ಒಂದೇ ಒಂದು ಬುದ್ಧಿಯನ್ನು ಕಂಡುಹಿಡಿಯುವದೇ ಜ್ಞಾನ; ಸಾತ್ವಿಕ ಜ್ಞಾನ.

"ಅವಿಭಕ್ತಂ ವಿಭಕ್ತೇಷು ತಜ್ಜ್ಞಾನಂ ವಿದ್ಧಿ ಸಾತ್ವಿಕಂ" ಈ ಸಾತ್ವಿಕ ಜ್ಞಾನದ ಸೂತ್ರದಿಂದ ಎಲ್ಲ ಬೇರೆ ತೋರುವ ಮಾತುಗಳನ್ನು ಗುಂಪಿಸುವದು ನಮ್ಮ ಆದ್ಯಕರ್ತವ್ಯವು. ಆಮೇಲೆ ಆ ಬುದ್ಧಿಯಿಂದ ನಡೆಯುವದು ನಮ್ಮ ಆದ್ಯಕರ್ತವ್ಯವು.

ಕಾಲಮಾಹಾತ್ಮ್ಯವನ್ನು ಅರಿತುಕೊಳ್ಳಬೇಕೆಂಬುದಾಯಿತು. ಕನ್ನಡ ಕುಲಪುರುಷನ ಮನಸ್ಸನ್ನು ತಿಳಿದುಕೊಳ್ಳಬೇಕೆಂಬುದಾಯಿತು. ಅವನ ವಾಕ್ಯವನ್ನು ಸಂಪೂರ್ಣ ಸಿದ್ಧಪಡಿಸಿಕೊಳ್ಳಬೇಕೆಂಬುದು ಮೂರನೇ ಮಾತು. ಅಂದರೆ ಉಪನಿಷತ್ತಿನ ಶಾಂತಿಪಾಠದೊಡನೆ ಕನ್ನಡ ಕುಲಪುರುಷನಲ್ಲಿ ಲೀನನಾದ ಪ್ರತಿಯೊಬ್ಬ ಕನ್ನಡಿಗನು, "ವಾಙ್ಮೇ ಮನಸಿ ಪ್ರತಿಷ್ಠಿತಾ। ಮನೋ ಮೇ ವಾಚಿ ಪ್ರತಿಷ್ಠಿತಂ ॥ ಆವಿರಾವೀರ್ಮ ಏಧಿ" ಎಂದು ಹಾಡಬಹುದು.

ಕನ್ನಡ ಮಾತಿನಿಂದಲೇ ಕನ್ನಡಿಗನೆಂಬ ಮಾತು, ಕನ್ನಡವು ಹೆಚ್ಚಾದಂತೆ ಕನ್ನಡಿಗನಿಗೆ ಭೂಷಣ. ಕನ್ನಡಿಗನು ಹೆಚ್ಚಿನವನಾದಂತೆ ಕನ್ನಡಕ್ಕೆ ಗೌರವ. ಹೆಚ್ಚಿನ ಕನ್ನಡಿಗರ ಗೌರವದ ಕನ್ನಡದಿಂದ ನಿನದಿಸುವ ಕರ್ನಾಟಕವು ಧನ್ಯಭೂಮಿ! ಇಲ್ಲವಿದ್ದರೇನು? ಕನ್ನಡನಾಡು ನೆಲಮಣ್ಣು! ಕನ್ನಡಿಗ ಪಶುಪ್ರಾಣಿ! ಕನ್ನಡ ಶಬ್ದ ಗಾಳಿ!

ದೇವಾ ದೈವೀಂ ನರಾ ನಾರೀಂ ಶಬರಾಶ್ಚಾಪಿ ಶಾಬರೀಂ ।
ತೀರ್ಯಂಚೋಽಪಿಚತ್ಯೈರಶ್ಚೀಂ ಮೇನಿರೆ ಭಗವದ್ಗಿರಂ ॥

ನಮ್ಮ ಕನ್ನಡವು ಭಗವದ್ಗಿರವಾಗಬೇಕು, ಅಪೌರುಷೇಯ ವಾಣಿಯಾಗಬೇಕು, ವೇದಮಂತ್ರಗರ್ಭವನ್ನು ಧರಿಸಲು ತಕ್ಕ ಬಸಿರುಳ್ಳ ನುಡಿಯಾಗಬೇಕು. ಇದಕ್ಕಾಗಿ ಸಾಮಾನ್ಯ ಕನ್ನಡಿಗನು ಕೂಡ ಕನ್ನಡದ ಬಗ್ಗೆ ಈಗ ಧರಿಸಿರುವ ದುರ್ಲಕ್ಷವನ್ನು ದೂರ ಬಿಸಾಡಲಿಕ್ಕೆಬೇಕು. ಪಂಡಿ

ತರೂ, ಜ್ಞಾನಿಗಳೂ, ಕವಿಗಳೂ, ಬುದ್ಧಿವಂತರೂ ತಮ್ಮ ತಮ್ಮ ಪ್ರಾಣವನ್ನು ಇದರಲ್ಲಿ ಊದಿ ಅಭೂತಪೂರ್ವ ಸಾಮರ್ಥ್ಯವುಳ್ಳ ಪ್ರಾಣಿಯನ್ನಾಗಿ ಇದನ್ನು ಮಾಡಲು ಏಳಗಬೇಕು. ಅದ್ವಿತೀಯಗಳಾದ ವಚನಗಳು ಜಗತ್ತಿನಲ್ಲಿ ಪ್ರಕಟವಾದ ಮೇಲೂ, ದಾಸಕೂಟವು ಉಗಾಭೋಗಾದಿಗಳಿಗಾಗಿ ಕನ್ನಡವನ್ನು ಸ್ವೀಕರಿಸಿದ ಮೇಲೂ, ಕಾಲಿದಾಸನನ್ನೊಬ್ಬನನ್ನು ಬಿಟ್ಟು ಉಳಿದ ಯಾವ ಸಂಸ್ಕೃತ ಮಹಾಕವಿಯ ಮಹಾಕಾವ್ಯಗಳಿಗೆ ಹೋಲಿಸಿಕೊಳ್ಳಲು ಅರ್ಹವಾದ ಪಂಪ, ರನ್ನ, ನೇಮಿಚಂದ್ರ, ಹರಿಹರನ ಕೃತಿಗಳು ಕನ್ನಡದಲ್ಲಿಯೆ ಅವತರಿಸಿರಲೂ, ಜಗನ್ನಾಥರಾಯರಿಗೆ ಹರಿಕಥಾಮೃತಸಾರದಲ್ಲಿ "ಸಂಸ್ಕೃತವಿದಲ್ಲೆಂದು ಕುಹಕ ತಿರಸ್ಕರಿಸಲೇನಹುದೆಂದು" ನಿರ್ಭರ್ತ್ಸಿಸಿ ಕೇಳಬೇಕಾಯಿತು.

ಮಹಲಿಂಗ ರಂಗನಿಗೆ ಅನುಭವಾಮೃತದಲ್ಲಿ

ಸುಲಿದ ಬಾಳೆಯ ಹಣ್ಣಿನಂದದಿ।
ಕಳೆದ ಸಿಗುರಿನ ಕಬ್ಬಿನಂದದಿ।
ಅಳೆದ ಉಷ್ಣದ ಹಾಲಿನಂದದಿ ಸುಲಭವಾಗಿರ್ದ।
ಲಲಿತವಹ ಕನ್ನಡ ನುಡಿಯಲಿ।
ತಿಳಿದ ತನ್ನೊಳು ತನ್ನ ಮೋಕ್ಷವ।
ಗಳಿಸಿಕೊಂಡರೆ ಸಾಲದೆ ಸಂಸ್ಕೃತದಲ್ಲಿನ್ನೇನು?

ಎಂದು ಮುದ್ದು ಮಾತಿನಿಂದ ಕೇಳಬೇಕಾಯಿತು.

ಚಿದಾನಂದಾವಧೂತರಿಗೆ—ಜ್ಞಾನಸಿಂಧುವಿನಲ್ಲಿ

'ತನ್ನ ಭಾವವ ಪಾಮರರ್ಗೆಯು ತಿಳಿಸುವದೆ ಭಾಷೆ! ಎಂದು ಭಾಷೆಯ ಲಕ್ಷಣವನ್ನು ಕಟ್ಟಿ,

ಕನ್ನಡದ ನುಡಿಯಲ್ಲಿ ಹೇಳಿಹು।
ದಿನ್ನು ಹಾಗೀಗೆನಲು ಸಲ್ಲದು।
ತನ್ನ ಮುಂದೆಯೆ ಎಡೆಯ ಬಡಿಸಿಟ್ಟಂತೆ ಅನುಭೂತಿ।
ತನ್ನ ತಿಳಿಯಲು ತನ್ನ ಸರಿಯಲು।
ತನ್ನ ಕಾಣಲು ಕನ್ನಡಿಯೆ ಇದು।
ಮನ್ನಿಸಿಯೆ ಪುಣ್ಯಾತ್ಮರೋದುವದಿದನು ಮನವೊಲಿದು।

ಎಂದು ಯುಕ್ತಿಯಿಂದ ಹೇಳಬೇಕಾಯಿತು.

ಇನ್ನು ಇದು ಸಾಗದು. ಪ್ರತಿಯೊಂದು ವಿಧದಿಂದಲೂ ಇದನ್ನು ನಾವು ಬೆಳೆಸಲುಬೇಕು.

ಅಡಿಗೆಯ ಮನೆಯ ಮತ್ತು ಓಣಿಯ ಮಾತಿನಲ್ಲಿಯೇ ಎಲ್ಲ ಕಾರ್‍ಯವು ಅಡಕವಾಗಬೇಕೆಂದು ಕೆಲವು ವೈಗಳ್ಳ ಕನ್ನಡಿಗರು ಹೊಸ ಕನ್ನಡದ ಹೊಳೆಗೆ ತಮ್ಮ ಬಾಯಿಂದ ಒಡ್ಡನ್ನು ಹಾಕಲು ಬಯಸುವರು. ಆದರೆ ಹೊಳೆಯು ಹೊಂಡವಾಗದೆ, ತನ್ನ ಸೆಳವಿನಲ್ಲಿ ಈ ವೈಗಳ್ಳರನ್ನು ತನ್ನ ಸೆಳವಿನಲ್ಲಿ ಈ ವೈಗಳ್ಳರನ್ನು ಸೆಳೆದುಕೊಂಡು ಹೋಗಿ ಅವರಿಗೆ ವೈಮರವು ಉಂಟಾಗುವಂತೆ ಮಾಡಲಿಕ್ಕೆಬೇಕು ನಮ್ಮ ನುಡಿಯು, ಒಡವೆ ಒಡವೆಯ ಜೀವದ ನೆರಳನ್ನು ತೋರಿಸುವ ನೀರಾಗಬೇಕು. ನಮ್ಮ ನುಡಿಯು, ಜೀವ ಜೀವದ ಜೀವಾಳವನ್ನು ತೋರಿಸುವ ಕನ್ನಡಿ ಹರಳಾಗಬೇಕು. ಕನ್ನಡವನ್ನು ಕನ್ನಡಿಯಾಗಿ ಮಾಡಬೇಕು. ಸಚ್ಚಿದಾನಂದನ ಅಂಗುಷ್ಟದಿಂದ ಹರಿಯುವ ತರಂಗತರಂಗವನ್ನು ನಮಗೆ ಮುಟ್ಟುವಂತೆ ಮಾಡಲು ನಮ್ಮ ನುಡಿಯು ಸಮರ್ಥವಾಗಬೇಕು. ಚಿತ್ತದ ಚಿತ್ರಗಳನ್ನೂ, ಅಹಂಕಾರದ ಉದ್ಗಾರಗಳನ್ನೂ, ಬುದ್ಧಿಯ ಭೇದಗಳನ್ನೂ, ಅಂತಃಕರಣದ ಕಿರಣಗಳನ್ನೂ, ಮನಸ್ಸಿನ ಹೊಯ್ದಾಟಗಳನ್ನೂ ಪ್ರತಿಬಿಂಬಿಸಲು ನಮ್ಮ ಭಾಷೆಯು ಸಮರ್ಥವಾಗಲುಬೇಕು ನಮ್ಮ ನುಡಿಯು ಜಗತ್ತಿನ ತಿರುಳನ್ನೂ ಜಗದೀಶನ ಹುರುಳನ್ನೂ ತೋರಿಸುವ ಕನ್ನಡಿಯಾಗಬೇಕು. ಜಗತ್ತಿನ ಸೊಬಗನ್ನೂ ಜಗದೀಶನ ಸೊಗಸನ್ನೂ ಸವಿಸವಿದು ನಲಿಯುವ ನಾಲಿಗೆಯಾಗಬೇಕು. ಕುಲಪುರುಷನ ಮನಸಿನಿಂದಲೂ ಇಂಥ ಸಂಸ್ಕೃತ ಕನ್ನಡಿಯಂಥ ವಾಕ್ಕಿನಿಂದಲೂ ಸಿದ್ಧರಾಗಿ ನಾವು

"ಆವಿರಾವೀರ್ಮ ಏಧಿ"

ಎಂದು ಜಗದೀಶನನ್ನು ಕರೆಯಬಹುದು.

ಇದೆಲ್ಲ ಆಗಲಿಕ್ಕೆ ನಾವು ಮೊದಲು ಅಂದರೆ ಆದ್ಯಕರ್ತವ್ಯಗಳನ್ನು ಆರಂಭ ಮಾಡುವ ಆದಿಯಲ್ಲಿಯೂ, ಒಂದೆರಡು ಮಾತುಗಳನ್ನು ಹೇಳಬೇಕಾಗಿದೆ. ನಮ್ಮ ಈ ನಾಡು ದುರ್ಬಲ ದೈವವಾದಿಗಳಿಂದಲೂ ಬಾಳಲು ಬೇಡಾದ ಹೇಡಿಗಳಿಂದಲೂ ತುಂಬಿರುವದು. ಚುಂಡಿಕೆಗೆ ಬೆಂಕಿ ಹತ್ತಿದರೂ

ಅರಿಸಲಾರದ ವೈಗಳ್ಳರು ಎಲ್ಲಿ ನೋಡಿದಲ್ಲಿ ಕಾಣುತ್ತಿರುವರು. ನಾವು ವೈಮುರಿದು ಪುರುಷಾರ್ಥವನ್ನು ಮಾಡಲಿಕ್ಕೆ ಬೇಕು. ಹೇಡಿಗಳಂತೆ ಹಿಂದೆಗೆಯಬಾರದು. ಅದೇ ಪ್ರಕಾರ ನಮ್ಮ ನಾಡು ವಿಚಾರ ಮಾಡಲೊಲ್ಲದ ಅಂಧ ಶ್ರದ್ಧಾಲುಗಳಿಂದಲೂ ವಿಚಾರ ಮಾಡಲಾರದ ಮಂದಮತಿಗಳಿಂದಲೂ ಬುದ್ಧಿಹೀನರಿಂದಲೂ ತುಂಬಿಕೊಂಡಿರುವದು. ಇಂಥ ವೈಗಳ್ಳರಿರುವವರೆಗೆ ನಾಡಿಗೆ ಲೇಸಾಗದು. ಇವರು ಮನಮುರಿದು ವಿಚಾರಮಾಡಲಿಕ್ಕೆ ಬೇಕು. ನಾಸ್ತಿಕರ ಯುಕ್ತಿವಾದಕ್ಕೂ ಬಗ್ಗದ ಸ್ಥಿತಪ್ರಜ್ಞೆಯಿಂದ ಪಾಮರರಿಗೂ ಬೋಧವುಂಟಾಗುವಂಥ ವಿಚಾರಗಳನ್ನು ಮಾಡಲು ನಾವು ಹವಣಿಸಬೇಕು. ನಮ್ಮ ಧರ್ಮಗಳ ಬಗ್ಗೆ ಸಾಮಾನ್ಯವಾಗಿ ನಮ್ಮ ಜನರ ಜ್ಞಾನವು ಅಗಾಧವಾಗಿದೆ ಅದ್ವೈತವೆಂದರೆ, ಭಸ್ಮ ಹಚ್ಚಿಕೊಳ್ಳುವವರು, ಜಗತ್ತು ಸುಳ್ಳೆನ್ನುವವರೆಂದೂ, ದ್ವೈತರೆಂದರೆ ದೊಡ್ಡ ದೊಡ್ಡ ಮುದ್ರೆಗಳನ್ನು ಹಚ್ಚಿಕೊಳ್ಳುವವರಾಗಿಯೂ ಪ್ರತಿಯೊಂದರಲ್ಲಿ ಭೇದ ಎಣಿಸುವವರೆಂದೂ ಜೈನರೆಂದರೆ ರಾತ್ರಿಯುಣ್ಣದವರೂ, ಹಿಂಸೆ ಮಾಡಬಾರದೆನ್ನುವವರೆಂದೂ, ಲಿಂಗವಂತರೆಂದರೆ ತತ್ವಬಿತ್ವವನ್ನರಿಯದ ಬ್ರಾಹ್ಮಣರಿಗೆ ತಿರಸ್ಕಾರ ಮಾಡುವ ಶೂದ್ರರೆಂದೂ, ಮುಸಲ್ಮಾನರೆಂದರೆ ಹೆಂಡಖಂಡ ಸೇವಿಸುವವರೂ ಅಲ್ಲಾಹಬ್ಬವನ್ನು ಮಾಡುವವರೆಂದೂ ನಮ್ಮ ಜನರ ನಂಬಿಗೆ. ನಾವು ಮನಗಳ್ಳತನವನ್ನು ಬಿಟ್ಟು ವಿಚಾರ ಮಾಡಲಿಕ್ಕೆಬೇಕು. ವೈಗಳ್ಳತನವನ್ನು ತೊರೆದು ದುಡಿಯಲಿಕ್ಕೆಬೇಕು. ಅಂದರೇ ನಮ್ಮ ಕುಲಪುರುಷನ ಮನಸು ತಿಳಿದೀತು, ನಮ್ಮ ನುಡಿ ಬೆಳೆದೀತು. ಕಾಲಕ್ಕೆ ತಕ್ಕಂತೆಯೇ ರಾಷ್ಟ್ರಗಳ ಪ್ರಭಾವಳಿಯಲ್ಲಿ ನಮ್ಮ ನಾಡೂ ಹೊಳೆದೀತು.

---

## ೩. ಇಂದಿನ ಕನ್ನಡ ಸಂಸ್ಕೃತಿಯ ಸ್ವರೂಪ

ರಾಷ್ಟ್ರಗಳ ಹೊಸ ಇತಿಹಾಸದಲ್ಲಿ 'ಸಂಸ್ಕೃತಿ' ಯೆಂಬುದು ರಣಗರ್ಜನೆಯಾಗಿದೆ; ಜಗಳಾಟಕ್ಕೆ ನೆವವಾಗಿದೆ. ಧರ್ಮ, ಜಾತಿ, ಮತ, ರಾಜ, ಗುರು ವೊದಲಾದವರ ಹೆಸರಿನಲ್ಲಿ ರಕ್ತ ಹರಿಯಿಸಿದ ಜಗಳಗಂಟಿ ಮಾನವಪ್ರಾಣಿಯು ಇಂದು ಹುಡಿದಾಟಕ್ಕೆ ಹೊಸ ಕಾರಣ ಹುಡುಕಿ

ಕೊಂಡಿದೆ. ಜರ್ಮನಿಯ 'ಕಲ್ಚರ' ವಿಚಾರವು, ಪೌರ್ವಾತ್ಯ ಪಾಶ್ಚಿಮಾತ್ಯ ದೇಶಗಳ ಸ್ಪರ್ಧೆಯು, ಭರತಖಂಡದೊಳಗಿನ ಹಿಂದೂ ಮಹಮ್ಮದೀಯರ ಎಳೆದಾಟ ಜಗ್ಗಾಟವು— ಇವೆಲ್ಲವು 'ಸಂಸ್ಕೃತಿ'ಯ ಹೆಸರಿನಲ್ಲಿ ಹೆಸರಾಗಿವೆ. ಅದರ ಸೋಂಕುರೋಗವು ಕನ್ನಡದ ಸಂಸ್ಕೃತಿಗೂ ಆಗೀಗ ತಗಲದೆ ಹೋಗುವದಿಲ್ಲ. ಆದಕಾರಣ, ಅದರ ಸ್ವರೂಪದ ಬಗ್ಗೆ ಸ್ಪಷ್ಟ ಕಲ್ಪನೆಯಿರುವದು ಅಗತ್ಯವಾಗಿದೆ.

ನಾವು ಇಂದು ಹೇಳುವ ಕನ್ನಡ ಸಂಸ್ಕೃತಿಯು, ಭಾಷಾಬಾಂಧವ್ಯಕ್ಕೆ ಪೂಜ್ಯತೆಯನ್ನು ಕೊಟ್ಟುದರಿಂದ ಬಂದಿದೆ. ಜಾತಿ, ಮತ, ಧರ್ಮ, ಪಂಥ, ಕುಲಗಳಿಂದ ಭಿನ್ನರಾದವರನ್ನೂ ಮಾನವನ ಸೋದರ ಸಂಬಂಧವನ್ನು ಒಪ್ಪಿಕೊಳ್ಳುವಂತೆ ಮಾಡಿಸುವದೆ, ಅದರ ಪ್ರಾಣ. ಕರ್ನಾಟಕ ಏಕೀಕರಣವೆ ಅದರ ದೇಹ. ಇಂದಿನ ಕನ್ನಡ ಸಾಹಿತ್ಯವು ಈ ಸಂಸ್ಕೃತಿಯ ಉಸಿರು. ಕನ್ನಡ ದೇಶದೊಳಗಿರುವ ಯಾವ ಜನವೂ ಒಂದು ಮನೆಯವರಂತಿರುವದನ್ನು ಕಲಿಸಲು ಈ ಸಂಸ್ಕೃತಿಯು ರೂಪುಗೊಳ್ಳುವದು. ಇದನ್ನು ಆಚರಣೆಯಲ್ಲಿ ತರುವವರೆ ಕನ್ನಡತಾಯಿಮಕ್ಕಳು—ಮುಂದಾಳುಗಳು, ಕನ್ನಡ ಶರಣರು. 'ಭಕ್ತರಲ್ಲಿ ಕುಲವನರಸಿದಡೆ ತಲೆದಂಡ' ವೆಂದು ಶಿವಶರಣರು ಹೇಳಿದಂತೆ, ಕನ್ನಡಭಕ್ತರಲ್ಲಿ—ಬಿಳಿಯ ಕರಿಯ, ಆರ್ಯ ದ್ರಾವಿಡ, ಮಾತೃಭಾಷೆಯಿಂಥವ ಅಂಥವ, ಶೈವ ವೈಷ್ಣವ, ಹಿಂದೂ ಮ್ಲೇಂಛ, ಹಿಂದುಳಿದವ ಮುಂದಾದವ -ಎಂದು ಮುಂತಾಗಿ ಬೇಧವೆಣಿಸುವದು ಅಪರಾಧವಾದೀತು. ಇದೇ ಹೊಸ ಕನ್ನಡ ಸಂಸ್ಕೃತಿಯ ಒಕ್ಕಟ್ಟಿನ ಗುಟ್ಟು, ಈ ಒಕ್ಕಟ್ಟಿಗೆ ಒಪ್ಪಿಗೆಯಿಲ್ಲದೆ ಒಳಗಂಟಿನ ಪಂಗಡಗಳನ್ನು ಕಟ್ಟುವವರೆ ಈ ಸಂಸ್ಕೃತಿಗೆ ಬಹಿಷ್ಕೃತರು.

ಈ ಸಂಸ್ಕೃತಿಯು ನಿರ್ಜೀವ ಪಡಿಯಚ್ಚಲ್ಲ; ಸಜೀವ ಸೃಷ್ಟಿ. ಹಳೆಯ ಮೇಲ್ಪಂಕ್ತಿ ತೀಡುವದಲ್ಲ; ಹೊಸ ಶೈಲಿ ಹುಟ್ಟಿಸುವದು. ಒಡಕು ಹುಟ್ಟಿಸುವ ಹದವಲ್ಲ; ಒಮ್ಮುಖ ಮಾಡುವ ವಿಧಿವಿಧಾನ. ಈ ದೃಷ್ಟಿಯನ್ನಿಟ್ಟು ಕೊಂಡರೆ ಮಾತ್ರ ಕರ್ನಾಟಕವು ಕನ್ನಡದ ಮನೆಯಾಗುವದು; ಹೊಸ ಕನ್ನಡಿಗರ ಏಳಿಗೆಗೆ ಉನ್ನತವಾಗಿ ಬೆಳೆಯುವದು. ಬಣ್ಣ ನೋಡಿ, ಹೀಳಿಗೆ ಎಣಿಸಿ, ಮೂಗು ಮೋರೆ ಅಳತೆ ಮಾಡಿ ಕನ್ನಡ ಕುಲವನ್ನು ಗುರುತಿಸು

ವದು ಯಾವ ಲೆಕ್ಕಕ್ಕೂ ಸರಿಹೋಗದು. ಕರ್ನಾಟಕದ ಭೂಸಂಪತ್ತಿಯನ್ನೇ ಬಂಡವಲು ಮಾಡಿ, ಕರ್ನಾಟಕ ಬುದ್ಧಿಬಲಗಳನ್ನೇ ಪ್ರಯೋಗಿಸಿ, ಕನ್ನಡ ಸಾಹಿತ್ಯವನ್ನೇ ಸೌಹಾರ್ದದ ಪ್ರತಿಬಿಂಬ ಮಾಡಿ ಕನ್ನಡಿಗರು ಯಾರನ್ನೂ ತಲೆಮೆಟ್ಟಲಿಕ್ಕೂ ಇಲ್ಲ, ಯಾರಿಂದಲೂ ತಲೆ ಮೆಟ್ಟಿಸಿಕೊಳ್ಳಲಿಕ್ಕೂ ಇಲ್ಲ ಎಂಬ ಮಾನವ ಸಹಜ ಸ್ವಾಭಿಮಾನದಿಂದ ಪೌರುಷಕ್ಕೆ ಪ್ರವರ್ತಿಸುವದೆ ಈ ಕನ್ನಡ ಸಂಸ್ಕೃತಿಯ ತಳಹದಿಯು.

ಇದರಲ್ಲಿ ಸ್ವಾಭಾವಿಕವಾದ ತ್ಯಾಗವಿದೆ; ಸ್ವಾಭಾವಿಕವಾದ ಭೋಗವಿದೆ. ಮನೆ, ಮಠ, ಕುಲಗಳನ್ನು ಅಷ್ಟಕಷ್ಟೆ ಇಟ್ಟುಕೊಂಡು ದೇಶದ ಸಾರ್ವಜನಿಕ ಹಿತದ ಬುದ್ಧಿಯಿಂದ ನಡೆಯುವದರಲ್ಲಿ ತ್ಯಾಗವಿದ್ದೆ ಇದೆ. ಇಷ್ಟೂ ಮಾಡಲು ಹಿಂದೆ ಮುಂದೆ ನೋಡುವವರು ರಾಷ್ಟ್ರ, ಖಂಡ, ವಿಶ್ವ ಭಾವನೆಗಳಿಗೆ ಬೇಕಾದ ವಿಶಾಲ ಹೃದಯವಿಲ್ಲದವರು ಎಂದು ತಾನೆ ಕಂಡು ಬರುವದು. ಕನ್ನಡ ಸಂಸ್ಕೃತಿಯ ಬೀಜಕಲ್ಪನೆಯು ಎಲ್ಲ ಉದಾರ ಭಾವನೆಗಳ ಉಗಮವಾಗಿದೆ. ಮಾನವನ ಸೌಖ್ಯದ ಸಲುವಾಗಿಯೆ ಈ ಔದಾರ್ಯವು ಅವಶ್ಯವಾಗಿದೆ. ಪಂಡಿತರು ಪಾಮರರ ಭಾಷೆಯನ್ನು ಸ್ವೀಕರಿಸುವರು; ದೇಶೀಯ ಸಾಹಿತ್ಯೇತಿಹಾಸಗಳ ಬಗ್ಗೆ ಎಲ್ಲರೂ ಆತ್ಮೀಯ ಭಾವನೆಯಿಂದ ಅಭಿಮಾನಪಡುವರು; ಮುಂದಾದವರು ಹಿಂದುಳಿದವರ ಹಿತದ ಸೇವಕರಾಗುವರು. ಒಂದು ಕೈಯಿಂದ ಪ್ರತಿಕೂಲ ಮಾತನ್ನು ಬಿಡುವದು ಸರ್ವರಿಗನುಕೂಲವಾದುದನ್ನು ಇನ್ನೊಂದರಿಂದ ಹಿಡಿಯುವದು ಇದರ ಯುಕ್ತಿಯಾಗಿದೆ. ತ್ಯಾಗ-ಭೋಗವು ಕನ್ನಡ ಸಂಸ್ಕೃತಿಯ ನೈಸರ್ಗಿಕವಾದ ಶ್ವಾಸೋಚ್ಛ್ವಾಸವೇ ಆಗಿದೆ.

ಭಾಷಾಪ್ರಮುಖವಾದ ಈ ಕನ್ನಡ ಸಂಸ್ಕೃತಿಯು ಇತರ ಭಾಷಾ ಸಂಸ್ಕೃತಿಗಳಿಗೆ ಒಂದಿಷ್ಟೂ ವಿರೋಧಿಯಾಗಿಲ್ಲ. ತಿಳಿದು ನೋಡಿದರೆ ಇವೆಲ್ಲವುಗಳಿಗೂ ಒಂದೇ ಸೂತ್ರವಿದೆ. ಆದರೆ ಕರ್ನಾಟಕದಲ್ಲಿಯೆ ಅಡ್ಡ ಗೋಡೆಗಳನ್ನು ಹಾಕಿ, ಅಥವಾ ಸಂಖ್ಯಾಬಲ, ಬುದ್ಧಿಬಲಗಳ ಮದದಿಂದ ಒಕ್ಕಟ್ಟು ಬಿಕ್ಕಟ್ಟಾಗಿ ಮಾಡುವವರನ್ನು ಇದಿರಾಗಲು ಇದು ಟೊಂಕಕಟ್ಟಿದೆ ಎಂಬುದರಲ್ಲಿ ಯಾವ ಸಂಶಯವೂ ಇಲ್ಲ.

---

# ೪. ಭಾಷಾ ತಾರತಮ್ಯ

ಕರ್ನಾಟಕದಲ್ಲಿ ಕನ್ನಡ ಮಾತಿಗೆ ಎಷ್ಟು ಮಹತ್ವವಿರಬೇಕು-ಎಂಬುದೊಂದು ಇನ್ನೂ ತೊಡಕಿನ ಮಾತೇ ಆಗಿದೆ. ಜನರು ಬೇರೆ ಬೇರೆ ಗುಂಪಾಗುವದರಲ್ಲಿ ಒಂದು ತತ್ವವಿದೆ. ಅದು ಜಗಳದ ತತ್ವವಿರದೆ, ಜಾಣತನದ ತತ್ವವಾಗಿರುವಂತೆ ನೋಡಿಕೊಳ್ಳುವದು ಕಲಿತವರ ಕೆಲಸ. ಕಲಿತವರೇ ಕಡಿದಾಡಿದರೆ ಉಳಿದವರ ಗತಿಯೇನು? ಭಾಷೆಯನ್ನು ಯಾರೂ ಯಾರ ಉಪಕಾರಕ್ಕೆ ಕಲಿಯುವದಿಲ್ಲ; ಅದು ಧರ್ಮಕೃತ್ಯವೂ ಅಲ್ಲ; ಉಸಿರಾಟದಂತೆ ಅದು ಸ್ವಾಭಾವಿಕವೂ ಅಲ್ಲ. ಕೂಸು ಯಾರ ಸಂಪರ್ಕ, ಸಹವಾಸದಲ್ಲಿ ಬೆಳೆಯುವದೊ ಅವರ ಮಾತನ್ನು ಅದು ಸುಲಭವಾಗಿ ಸ್ವೀಕರಿಸುತ್ತದೆ. ದೊಡ್ಡವರು ವ್ಯವಹಾರದ ಅನುಕೂಲತೆಗಾಗಿ ಅನಿವಾರ್ಯವಾದದ್ದನ್ನು ತಕ್ಕಮಟ್ಟಿಗೆ ಕಲಿತೆ ಕಲಿಯುತ್ತಾರೆ. ಪಂಡಿತರು ಮನದ ಹಸಿವಿಗಾಗಿ ಜ್ಞಾನಾನಂದ ಕೊಡಬಹುದಾದ ಪ್ರಯತ್ನದಿಂದ ಸುಲಭ ಭಾಷೆಗಳ ಪರಿಚಯ ಅಭ್ಯಾಸಮಾಡಿಕೊಳ್ಳುತ್ತಾರೆ. ಬಲ್ಲವರು ಜನಪದದ ಸಾಮಾನ್ಯ ಭಾಷೆಯನ್ನೆ ಅನೇಕ ಭಾಷೆಗಳ ಸತ್ವಸಾರದಿಂದ ಪುಷ್ಟಿಗೊಳಿಸುತ್ತಾರೆ. ಅಧಿಕಾರ ಗರ್ವಿತರು ತಮ್ಮ ಭಾಷೆಯನ್ನು ಜನಸಾಮಾನ್ಯರ ಮೇಲೆ ಹೇರುತ್ತಾರೆ. ಸಂಘಟಿತ ಜನರ ವಲಸೆ ಬಂದ ಗುಂಪುಗಳು ಒಂದೆರಡು ಭಾಷೆಗಳೊಡನೆ ಕಣ್ಣುಮುಚ್ಚಾಣಿಕೆಯಾಡುತ್ತವೆ. ಬುದ್ಧಿಮಂದರು ಯಾವ ಭಾಷೆಯೇನು ಎಂಬ ದುರ್ಲಕ್ಷ್ಯದಲ್ಲಿರುತ್ತಾರೆ. ಅಲ್ಪ ಜೀವಿಗಳು ಪರದೇಶದ ಭಾಷೆಗೆ ಆಳಾಗುತ್ತಾರೆ.

ಇನ್ನು ಸಂಪರ್ಕ, ಸಹವಾಸ, ಆಕ್ರಮಣ, ಸೋಲು, ಒತ್ತಾಯದ ಪ್ರಕಾರ ಜನರ ಭಾಷೆಯು ಬೇರೆ ಭಾಷೆಗಳ ತಿಕ್ಕುಮುಕ್ಕಾಟದಲ್ಲಿ ಸಿಕ್ಕುವದು. ಆರ್ಯರ ಪ್ರಸಾರ ಪ್ರಚಾರದಿಂದ ಹಿಂದುಸ್ತಾನದ ಎಲ್ಲ ಭಾಷೆಗಳಲ್ಲಿಯೂ ಸಂಸ್ಕೃತದ ನೂಲು ನೂರೆಳೆಯಾಗಿ ನೇಯಲಾಗಿದೆ. ಮಹಮ್ಮದೀಯರ ಆಕ್ರಮಣದಿಂದ ಉರ್ದು ಹಿಂದುಸ್ಥಾನಿಯ ಜನ್ಮವಾಗಿ ಇಂದು ಅದು ರಾಷ್ಟ್ರಭಾಷೆಯ ಚುನಾವಣೆಯಲ್ಲಿ ಹಿರಿಹುದ್ದರಿಯಾಗಿ ನಿಂತಿದೆ. ಆಂಗ್ಲರ ಪ್ರಭುತ್ವದ ಒತ್ತಾಯದಲ್ಲಿ ಇಂಗ್ಲೀಷ ಭಾಷೆಯು ಬಂದು ಜಗತ್ಪ್ರಸಾರದ

ಪ್ರಭಾವದಿಂದ ಅದು ತಲೆಯ ಮೇಲಿಟ್ಟ ಕೈಯು ಸರಿಯುವ ಸಂಭವ ಕಾಣುವದಿಲ್ಲ. ಸಂಸ್ಕೃತವು ಜೀವವನ್ನೂ, ಹಿಂದುಸ್ಥಾನಿಯು ರಾಷ್ಟ್ರವನ್ನೂ, ಇಂಗ್ಲೀಷು ಜಗವನ್ನೂ ವ್ಯಾಪಿಸಿರಲಾಗಿ ಕನ್ನಡಕ್ಕೆ ಜನವೂ ದೇಶವೂ ಉಳಿದೀತೇ ಎನ್ನುವ ಸ್ಥಿತಿ ಇನ್ನೂ ಇದೆ. ಕನ್ನಡದ ನೆರೆಹೊರೆಯವರು ಈ ನಾಡಿನಲ್ಲಿಯೂ ತಮ್ಮ ಪ್ರತ್ಯೇಕ ಸಂಸಾರವನ್ನು ಸಂಸ್ಕೃತಿಯ ಹೆಸರಿನಲ್ಲಿ ಹೂಡುವ ಪ್ರಯತ್ನ; ಕನ್ನಡವು ವೀರಶೈವ, ವೈಷ್ಣವ ಮತಗಳಿಗೆ ಹುಟ್ಟುಜಾತಿಯಿಂದಲೆ ಬಂದ ಔರಸಸಂಪತ್ತೆಂಬ ಐತಿಹಾಸಿಕ ಅಹಂಕಾರದಿಂದ ತೋರುವ ಸಂಕೀರ್ಣ ಪ್ರಪಂಚ; ಜನಹಿತ ಧೋರಣೆ ಸಾಲದ ಕೆಲವು ಮುಖಂಡರು ಕನ್ನಡಕ್ಕೆ ತೋರಿಸುವ ಆದರದ ಅಭ್ಯಾಸ; 'ತಮ್ಮ ಮನೆಮಾತೇ ಬೇರೆ' ವ್ಯವಹಾರಕ್ಕೆ ಯಾವ ಭಾಷೆ ಬಂದಗೊಡವೆ ನಮಗೇನು ? ಎಂಬ ಔದಾಸೀನ್ಯದ ಔದಾರ್ಯದಿಂದ ಕನ್ನಡದ ಬಗ್ಗೆ ಕೆಲವು ಸಂಗಡದವರು ಪ್ರಚುರ ಪಡಿಸುವ ಚಂಚಲ ಭಕ್ತಿ; ಕರ್ನಾಟಕ ಏಕೀಕರಣದಿಂದ ಬರಬಹುವಾದ ಒಕ್ಕಟ್ಟನ್ನು ಬಿಕ್ಕಟ್ಟಾಗಿ ಮಾಡಲು ವ್ಯವಹಾರಕುಶಲರೆನಿಸಿಕೊಳ್ಳುವ ಕೆಲವರಲ್ಲಿಯೆ ಒಡಕು ಹುಟ್ಟಿಸುವ ಚಾತುರ್ಯ; ಆರ್ಯಾನಾರ್ಯರೆಂಬ ಪೌರಾಣಿಕ ಕಂತೆಯನ್ನು ಮುಂದೆ ಮಾಡಿ ಕನ್ನಡವು ಶೂದ್ರಭಾಷೆಯೆಂಬಂತೆ ವೇದಾಂತಿಗಳ ವೈರಾಗ್ಯದಿಂದ ನಟಿಸುವ ಕೆಲವರ ನಾಟಕ; ಕನ್ನಡವು ತಮ್ಮ ಜನಭಾಷೆ, ದೇಶಭಾಷೆಯೆಂದು ಒತ್ತಿ ಹೇಳಿದರೆ ಎಲ್ಲಿ ಸ್ವಾರ್ಥಪರತೆ ಬಂದೀತೋ ಎಂದು ಹೆದರಿ ಹೆಜ್ಜೆ ಹಾಕುವ ಮೈಸೂರಿನ ದುರ್ಬಲ ಔದಾರ್ಯ; ಜನಭಾಷೆಯನ್ನು ಆಳುಭಾಷೆಯಾಗಿ ಕಡೆಗಣಿಸಿ ನಡೆಯುವ ಕೆಲವು ಯಜಮಾನರ ಸ್ವಾಭಾವಿಕ ವೃತ್ತಿಗೆ ಬೆಂಬಲ ಕೊಡುವ ಅವರ ಭಾಷಾಸಂಗಡದವರ ಅವಿವೇಕದ ಸ್ವಾರ್ಥವೃತ್ತಿ; ಇವೇ ಮೊದಲಾದ ಅನೇಕ ಕಾರಣಗಳಿಂದ ಕನ್ನಡದ ಸ್ಥಾನಮಾನವು ಕರ್ನಾಟಕದಲ್ಲಿಯೇ ಅತಂತ್ರವಾಗಿ ಉಳಿದಿದೆ.

ಇಂದು ಪ್ರಜೆಗಳ ಯುಗ. ಅವರ ಜ್ಞಾನ ಮತ್ತು ಕೆಲಸಮಾಡುವ ಸಾಮರ್ಥ್ಯಕ್ಕೆ ತಕ್ಕ ಫಲವು ಅವರಿಗೆ ದೊರೆಯುವದು. ಇದನ್ನು ಸಾಧಿಸಲು ಇಚ್ಛಾಬಲವು ಬೇಕು. ಅದು ಶುದ್ಧವೂ ಸಿದ್ಧವೂ ಇದ್ದಷ್ಟು ಕೆಲಸ ತಾಳಿಕೆ ಬರುವದು. ಇದೆಲ್ಲಕ್ಕೂ ಗಂಡು ಹೆಣ್ಣು ಎಲ್ಲರಲ್ಲಿ ವಿದ್ಯಾಪ್ರಸಾರವಾಗಬೇಕು. ಹಳ್ಳಿ ಪಳ್ಳಿ, ಮನೆಮನೆಯಲ್ಲಿ ಜನದ ಮಾತೇ ಮನದ ಮಾತಾಗಬೇಕು.

ಭಾಷಾಸೌಲಭ್ಯದಿಂದಲೂ, ಹಿತಬುದ್ಧಿಯ ಉತ್ಕಟತೆಯಿಂದಲೂ ವಿಚಾರಗಳು ಆಕಾಶವಾಣಿಯ ಮಿಂಚಿನವೇಗದಿಂದ ದೇಶದಲ್ಲೆಲ್ಲ ಹರಡುವಾಗ ಜನರ ಐಕ್ಯಕ್ಕೆ ಜನಭಾಷೆಯು ಎಂಥ ಅಮೋಘವಾದ ಸಾಧನವೆಂಬುದು ಆಗ ತಿಳಿಯುವದು. ಕನ್ನಡವಿಲ್ಲದೆ ಕನ್ನಡಿಗರಿಲ್ಲ; ಕನ್ನಡಿಗರಿಲ್ಲದೆ ಕರ್ನಾಟಕವಿಲ್ಲ. ಕರ್ನಾಟಕದಲ್ಲಿ ಯಾರೇ ಬಂದು ನೆಲೆನಿಂತರೂ ಅವರು ಮಾನವ ಹಿತಬುದ್ಧಿಯಿಂದ ಜನಪದ ಭಾಷೆಯನ್ನೆ ಹೃದಯದ ಭಾಷೆ, ಜ್ಞಾನದ ಭಾಷೆ, ರಾಜಕಾರ್ಯವ್ಯವಹಾರದ ಭಾಷೆ, ಧರ್ಮದ ಭಾಷೆ ಮಾಡದಿದ್ದರೆ ಅಷ್ಟುಮಟ್ಟಿಗೆ ಜನರ ಹಿತದ ವಂಚನೆಯಾಗುವದನ್ನು ಮರೆಯಲಾಗದು.

ಪ್ರಾಚೀನ ಸಂಸ್ಕೃತಿಯನ್ನು ಸಂಗ್ರಹಿಸಲು ಸಂಸ್ಕೃತವು ತನ್ನಮಟ್ಟಿಗೆ ತಾನಿರಲಿ; ಕರ್ನಾಟಕದ ಹೊರಗಿನ ಬಳಕೆಗೆ ಹಿಂದುಸ್ತಾನದವರೊಡನೆಂದು ಹಿಂದುಸ್ತಾನಿ ಇರಲಿ; ಹಿಂದುಸ್ತಾನದ ಹೊರಗಿನ ಜಗತ್ತಿನ ಕೂಡ ವ್ಯವಹಾರಕ್ಕೆ ಇಂಗ್ಲೀಷ ಇದ್ದುಕೊಳ್ಳಲಿ. ಆದರೆ ಏನಾದರೂ ಅನಾನುಕೂಲತೆಯು ತುಂಟು ಆಪವಾದಗಳನ್ನೆ ಹೆಚ್ಚಿಗೆ ಮಾಡಿ, ಕರ್ನಾಟಕದ ಮಟ್ಟಿಗೆ ಕನ್ನಡವು ಅರಸು ಎಂಬ ನಿಯಮಕ್ಕೆ ಲೋಪ ಬರುವಂತೆ ಪುಂಡಸಾಳಿಯುಗಾರಿಕೆಯ ಬಂಡುಗಾರರನ್ನು ಬೆಳೆಯಿಸಿಕೊಡುವದು ಯಾವದೃಷ್ಟಿಯಿಂದಲೂ ಹಿತವಲ್ಲ. ಜನಸಾಮಾನ್ಯರಿನ್ನೂ ಅಶಿಕ್ಷಿತರಾಗಿದ್ದಾರೆ. ಮುಂದೆ ಮುಂದೆ ಬರುವವರು ತಮ್ಮ ತಾತ್ಕಾಲಿಕ ಅನಕೂಲತೆಯಂತೆ ಅಧಿಕಾರದ ಉಪಯೋಗ ಮಾಡುವರು. ಮಧ್ಯಮವರ್ಗದ ವಿಚಾರಿಗಳೇ ಭಾಷಾತಾರತಮ್ಯದಲ್ಲಾಗುವ ಅನ್ಯಾಯವನ್ನು ಬಯಲಿಗೆ ತಂದು ಸಕಾಲದಲ್ಲಿ ಅದನ್ನು ತಿದ್ದುಪಡೆಯಾಗುವಂತೆ ದಕ್ಷರಾಗಬೇಕು. ಇಲ್ಲದಿದ್ದರೆ ಕನ್ನಡದ ಹಡಬಂಡು ಸಂಸಾರಕ್ಕೆ ಬಣ್ಣವೇರುವ ಸಂಭವವಿಲ್ಲ.

---

## ೫. ಭಾಷೆಯ ಸಾಧನ ಮತ್ತು ಸಾಧ್ಯ

ನಿಜಗುಣ ಶಿವಯೋಗಿಗಳು ಭರತ ವರ್ಷದ ಜನರನ್ನು ತಮ್ಮ 'ವಿವೇಕ ಚಿಂತಾಮಣಿ'ಯಲ್ಲಿ "ಚಾತುರ್ವರ್ಣಿಕರುಂ, ಹದಿನೆಂಟು ಜಾತಿಗಳವರುಂ, ನೂರೊಂದು ಕುಲದವರುಂ, ನಾಪಿರದೆಂಟುನೂರು ಬಗೆಯವರುಂ, ತೊಂಭ

ತ್ತೆರಡು ವಿಭಿನ್ನವಾದಿಗಳಿಂ ಕೂಡಿದ ಆರುಮತದವರುಂ" ಎಂದೂ "ದೇಶ ಕ್ರಿಯಾ ಕಾಲ ವೈಪರೀತ್ಯ ಗುಣಧರ್ಮ ಸಾಂಕರ್ಯದಿಂ ಕೆಲವರು ಕುಬ್ಜವಾಮನರಂತೆ ಹ್ರಸ್ವಾಕಾರವಾಗಿಯುಂ, ಕೆಲವರು ಮಹಾಶ್ವದಂತುನ್ನತಾಕಾರವಾಗಿಯುಂ, ಕೆಲವರು ವಿಶೃಂಖಲರುಂ, ಬೇರೆ ಕೆಲವರು ದಯಾಳುಗಳುಂ. ಕೆಲರಾರಣ್ಯಕರುಂ, ಕೆಲವರು ನಾಗರಿಕರುಂ, ಕೆಲವರು ಪಶುತುಲ್ಯರುಂ, ಕೆಲವರು ಕಪ್ಪುಬಣ್ಣಗಳುಳ್ಳವರುಂ" ಎಂದೂ ವರ್ಣಿಸಿದಂತೆ ಕರ್ನಾಟ-ಕಾಂಧ್ರಾದಿ ಭಾಷಾವಿಭಕ್ತ ರಾಷ್ಟ್ರಗಳ ಗತಿಯೂ ಆಗಿದೆ ಎಂಬುದು ಸುಳ್ಳಲ್ಲ. ಇವುಗಳಲ್ಲಿ ವಾಂಶಿಕ ಐಕ್ಯವಿಲ್ಲ; ಮಿಶ್ರಣವಿದೆ. ಧಾರ್ಮಿಕ ಐಕ್ಯವಿಲ್ಲ; ಭಿನ್ನತೆ ಇದೆ. ಇಂಥ ಹಂಡಬಂಡ ಗುಂಪುಗಳನ್ನು ಏಕಸೂತ್ರತೆಗೆ ತರುವದೆಂತು?

ರಾಜಪ್ರಧಾನವಾದ ಯುಗದಲ್ಲಿ "ನಾಡೆಂಬ ದೇಹಕ್ಕೆ ರೂಢಿಪತಿಯೇ ಪ್ರಾಣ" ಎಂಬ ತಿಳುವಳಿಕೆಯಿಂದ ತಾವು ಆಳುವವನ ಅಂಗಗಳು ಮಾತ್ರ ಎಂದು ಜನರು ಇರಬಹುದಾಗಿತ್ತು. ಇಂದು, ಪ್ರಜೆಗಳಿಗೆ ಅವರ ವ್ಯಕ್ತಿತ್ವದ ಅರಿವನ್ನು ಮಾಡಿಕೊಡುತ್ತಿದ್ದೇವೆ. ಅರಸನಿಗಾಗಿ ಜನರಲ್ಲ, ಜನರಿಗಾಗಿ ಅರಸನು ಎಂದು ಹೇಳಿಕೊಡುತ್ತಿದ್ದೇವೆ. ಜನಶಕ್ತಿಯಿಂದಲೇ ಜಗತ್ತನ್ನು ಪೂರ್ಣತೆಗೆ ಒಯ್ಯಬೇಕೆಂದು ಇಂದಿನ ಯುಗವು ಆತುರಪಡುತ್ತಿದೆ. ಜಗತ್ತಿನ ಉಳಿದ ಭಾಗಗಳಂತೆಯೇ ಕರ್ನಾಟಕದಲ್ಲಿಯೂ ಈ ವಿಚಾರದ ಬೀಜಗಳು ಬಿತ್ತಲಾಗಿವೆ. ವೃತ್ತಪತ್ರಿಕೆಗಳು ದಿಗ್ದೇಶದ ವೃತ್ತಾಂತವನ್ನು ದೇಶೀಯ ಭಾಷೆಗಳಲ್ಲಿ ಬೀರುತ್ತಿರುವದು ಕೇವಲ ಹೊಟ್ಟೆಯಪಾಡಿಗಾಗಿಯೂ ಅಲ್ಲ, ಹೊತ್ತುಗಳೆಯುವ ರಂಜನೆಗಾಗಿಯೂ ಅಲ್ಲ. ಇಂದಿನ ಪತ್ರಗಳೊಳಗಿನ ಒಂದೊಂದು ಸುದ್ದಿಯೂ ರಾಷ್ಟ್ರಗಳ ವ್ಯಕ್ತಿತ್ವದೊಡನೆ ಪ್ರತಿಮಾನವನ ವ್ಯಕ್ತಿಮತವನ್ನು ಸಾರುತ್ತಿದೆ. ಆದರೆ ಆಗಬೇಕಾದ ಕಾರ್ಯವಿನ್ನೂ ಆಗಿಲ್ಲ. ಆಕಾಶದೆತ್ತರ ಕಳಸವನ್ನಿಡತಕ್ಕವರು, ಭೂಮಿಯಗಲದಷ್ಟಾದರೂ ಅಸ್ತಿವಾರವನ್ನು ಹಾಕಬೇಕು. ಪರಲೋಕಗಳಲ್ಲಿ ಬೀಡುಬಿಟ್ಟಿರುವ ಸ್ವರ್ಗನಂದನಾದಿಗಳನ್ನು ಭೂಮಿಗಿಳಿಸಲು ಹವಣಿಸುತ್ತಿರುವವರಂತೆ ಅಮೇರಿಕಾ, ರಶಿಯಾ ಮೊದಲಾದ ರಾಷ್ಟ್ರಗಳು ಹೆಣಗುತ್ತಿವೆ. ಪುರಾಣಗಳಲ್ಲಿ ತಮ್ಮ ನಗರ ಸಹಿತವಾಗಿ ಕೈಲಾಸ ವೈಕುಂಠಗಳಿಗೇರಿದ ರಾಜಭಕ್ತರ ಕಥೆಗಳನ್ನು ನಾವು ಕೇಳಿಲ್ಲವೇ? ಜರ್ಮನಿ, ಇಟಲಿ, ಜಪಾನುಗಳು ಇಂದು ತಮ್ಮ ಇಡೀ

ದೇಶಕ್ಕೆ ದೇಶವನ್ನೇ ಸ್ವರ್ಗದೆತ್ತರಕ್ಕೆ ಒಯ್ಯಲು ತವಕಪಡುತ್ತಿವೆ ಎಂಬು ವನ್ನು ನಾವು ದಿನಂಪ್ರತಿಯೂ ಓದುತ್ತೇವೆ. ಯೋಗಸಮಾಧಿಸ್ಥ ಖಂಡವೆಂದು ಹೆಸರುಗೊಂಡ ಏಶಿಯಾ ಖಂಡವು ಇಂದು ಎಚ್ಚತ್ತು ತನ್ನ ಅಭ್ಯುದಯದ ಪ್ರಪಂಚವನ್ನು ಮಣ್ಣು ನೆಲದ ಮೇಲೆ ಹೂಡಲಿದೆ. ಈ ಎಲ್ಲ ಮುಹಾಗತಿಯ ಉದ್ದೇಶ, ಪ್ರಯೋಜನ, ಸಾಧನ, ರೀತಿ, ಕ್ರಮಗಳ ಅರಿವು ಜನರಿಗಾಗಬೇಕಾದರೆ ದೇಶೀಯ ಭಾಷೆಗಳ ಬೆಳವಣಿಗೆಯಾಗದೆ ಬೇರೆ ಉಪಾಯವಿಲ್ಲ. ಯಾವ ದೇಶದಲ್ಲಿ ರಾಜಕೀಯ ಭಾಷೆಯು ಜನಭಾಷೆಗಿಂತ ಬೇರೆಯಾಯಿತೊ ಅಲ್ಲಿಯ ಜನರು ಆಳುವ ವರ್ಗಕ್ಕೆ ಆಳಾಗಲೇಬೇಕು. ಪ್ರಾಚೀನಕಾಲದಿಂದ ಜನಭಾಷೆಗಿಂತ ಸಂಸ್ಕೃತಿಯ ಭಾಷೆಯು ಬೇರೆಯಾಗುತ್ತ ಬಂದಿರುವದರಿಂದ ಜಾನಪದ ಸಮಾಜವಿನ್ನೂ ಸುಮಸುಮಾರು ತ್ರೇತಾಯುಗದ ಸಮಾಜದಂತಿದೆ. ಒಂದು ಸ್ಥಾನದಲ್ಲಿ ಸಂಸ್ಕೃತ, ಪ್ರಾಕೃತ, ಅಪಭ್ರಂಶಗಳ ಸೋಪಾನದಿಂದ ದೇಶೀಯ ಭಾಷೆಗೆ ಸಾಹಿತ್ಯವಿಳಿದು ಬಂದುದು ಪ್ರಜೆಗಳ ಜ್ಞಾನವಿಸ್ತಾರಕ್ಕಾಗಿ. ಹೀಗಾಗುವಷ್ಟರಲ್ಲಿ ಪಾರ್ಸಿ ಉರ್ದು ಭಾಷೆಗಳು ರಾಜಕೀಯ ಭಾಷೆಗಳಾಗುವ ಕಾಲವೊಂದು ಆಗಿಹೋಯಿತು. ಇಂದು ಇಂಗ್ಲೀಷ ಭಾಷೆಯ ಗಾಳಿಯು ಜನ ಸಮುದಾಯದ ಮೇಲೆ ಬೀಸುತ್ತಲಿದೆ. ನಾಳೆ ಮತ್ತಾವುದು ಬರುವದೋ? ಆದರೆ ಹಿಂದುಸ್ಥಾನಕ್ಕುಂಟಾದ ಅರಿವು ಜಗತ್ತಿಗುಂಟಾದ ಎಚ್ಚರದ ಭಾಗವೇ ಇರುವಂತೆ, ಪ್ರಾಂತಗಳಲ್ಲಿ ಹುಟ್ಟಿದ ತಿಳುವಳಿಕೆಯು ಕೂಡ ಭಾರತಬುದ್ಧಿಯ ಅಂಶವೇ ಆಗಿದೆ. ಈ ಬುದ್ಧಿಯನ್ನು ಹಳ್ಳಿಹಳ್ಳಿಗೂ ಅಲ್ಲಿಯ ಮನೆಮನೆಗೂ ಅದರೊಳಗಿನ ಮನಮನಕ್ಕೂ ಅಷ್ಟೇ ಅಲ್ಲ, ಬರಲಿರುವ ಸಂತತಿಗೂ ನೀಡಬೇಕಾದರೆ ದೇಶೀಯ ಭಾಷೆಗಳಿಂದಲ್ಲದೆ ಬೇರೆ ಭಾಷೆಯಿಂದಾಗಲಾರದು. ಈ ಕಾರ್ಯವು ಇನ್ನೂ ಆಗಬೇಕಾಗಿದೆ ಹೇಳಿದ್ದನ್ನಾದರೂ ತಿಳಿದುಕೊಂಡು ಸಮಾಜವು ಕಾರ್ಯೋನ್ಮುಖವಾಗುವಂತೆ ಅದಕ್ಕಿನ್ನೂ ಶಿಕ್ಷಣ ಸಂಸ್ಕಾರವು ದೊರೆಯಬೇಕಾಗಿದೆ. ಹೀಗೆ ಮಾಡುವ ರೀತಿಯಲ್ಲಿಯೇ ಭಾಷೆಯು ಧರ್ಮದಂಥ ಮಹತ್ತ್ವವಾದ ಕಾರ್ಯವನ್ನು ಮಾಡಲಿದೆ ಎಂಬುದು ಇನ್ನೂ ಎಷ್ಟೋ ಜನರಿಗೆ ತಿಳಿದಂತಿಲ್ಲ. ಹಿಂದಿನ ಕಾಲಕ್ಕೆ ಒಂದೆ ಭಾಷೆಯವರು ಕೂಡ ಭಿನ್ನ ಧರ್ಮಗಳ ಮೂಲಕ ಭಿನ್ನ ಸಂಸ್ಕಾರದವರಾಗಿರುತ್ತಿದ್ದರು. ಒಬ್ಬರ ಧ್ಯೇಯವು ಇನ್ನೊಬ್ಬರ ಧ್ಯೇಯವಾಗಿರುತ್ತಿರಲಿಲ್ಲ ಇಷ್ಟೇ ಅಲ್ಲ, ಒಂದು

ಧರ್ಮದ ಮಹಾಪುರುಷರು, ಇನ್ನೊಂದು ಧರ್ಮದವರಿಗೆ ಅಧಮ ಪಾತ್ರಗಳಾಗಿ ಕಾಣುತ್ತಿದ್ದರು. ಹಾಗೆ ತೋರಿಸುವದೇ ಅಂದಿನ ಮತಪ್ರಚಾರದ ಮಹತ್ವದ ಕಾರ್ಯವಾಗಿತ್ತು. ಇಂದು ಏಕಭಾಷೆಯ ಮೂಲಕ ಭಿನ್ನ ಮತದವರು, ಭಿನ್ನವರ್ಣದವರು, ಭಿನ್ನಕುಲಜಾತಿಗಳವರು ಒಂದಾಗುವ ಸುಮುಹೂರ್ತ ಬಂದಿದೆ. ಅದರ ಹದ ಔಚಿತ್ಯಗಳನ್ನರಿತು ಕಲಿತವರು ಉಪಯೋಗಿಸಿಯಾರೇ? ಭಾಷೆ ಮಾನವನ ಮಂತ್ರ, ತಂತ್ರ, ಹೃದಯಕ್ಕೆ ಹೃದಯಗಳನ್ನು ಕೂಡಿಸಿಕೊಡುವದೆ ಅದರ ಸಾಧ್ಯ. ಕನ್ನಡದ ಹೆಸರಿನಿಂದ ಕರ್ನಾಟಕದವರು ಒಗ್ಗೂಡಲಾರರಾದರೆ, ಹಿಂದುಸ್ತಾನಿಯ ಹೆಸರಿನಿಂದ ಹಿಂದುಸ್ತಾನ ಒಂದಾದೀತೇ? ಜಾಗತಿಕ ಭಾಷೆಯಿಂದ ಜಗಜ್ಜನವು ಒಂದಾಗುವ ದಾರಿಯೇನು? ಅಟ್ಟಕ್ಕೆ ಹಾರದ್ದು ಬೆಟ್ಟಕ್ಕೆ ಹಾರೀತೇ?

---

# ಧರ್ಮ

## ೧ ಧರ್ಮ

### ' ಧಾರಣಾತ್ ಧರ್ಮಮಿತ್ಯಾಹುಃ '

### — ಹೊಂದುಗೂಡಿರುವದೇ ಧರ್ಮ —

ಧರ್ಮವೆಂಬ ಮಾತಿಗೆ ಹಲವು ಅರ್ಥಗಳಿವೆ. ದಾನಮಾಡುವ ಮನಸ್ಸಿಲ್ಲದವನಲ್ಲಿ ಧರ್ಮಬುದ್ಧಿಯು ಇಲ್ಲವೆಂದೆನ್ನುವ ವಾಡಿಕೆಯುಂಟು. ದಿನದ ಬಳಿಕೆಯಲ್ಲಿ ತಮ್ಮ ಮತಪಂಥಗಳೇ ತಮ್ಮ ಧರ್ಮವೆಂದೂ, ಅಜ್ಜ ಮುತ್ತಜ್ಜರಿಂದ ನಡೆದು ಬಂದ ಕಸಬು ಕೈಗಾರಿಕೆ ಕಾಯಕಗಳೇ ತಮ್ಮ ಧರ್ಮವೆಂದೂ ಅಂದುಕೊಳ್ಳುವದುಂಟು. ತಂದೆತಾಯಿಗಳನ್ನು ಕಾಡುವದು ಮಕ್ಕಳ ಧರ್ಮವಲ್ಲವೇವೆನ್ನುವಾಗ್ಗೆ ಧರ್ಮ ಶಬ್ದದ ಅರ್ಥವು ಒಂದು ಇರುತ್ತದೆ. ಕಲಿಯುಗ

ವಲ್ಲಿ ಧರ್ಮವು ಲೋಪವಾಗುತ್ತ ನಡೆದಿದೆಯೆಂದೆನ್ನುವಾಗ್ಗೆ, ಧರ್ಮ ಶಬ್ದದ ಅರ್ಥವು ಬೇರೊಂದಾಗುತ್ತದೆ. ಒಮ್ಮೊಮ್ಮೆ ಧರ್ಮವೆಂದರೆ ಪುಣ್ಯವೆಂದೂ ಒಮ್ಮೊಮ್ಮೆ ಸ್ವಭಾವಗುಣವೆಂದೂ ಅರ್ಥವಾಗುವದು. ಎದ್ದರೆ ಧರ್ಮ, ಕುಳಿತರೆ ಧರ್ಮವೆನ್ನುವ ಹಿಂದೂಧರ್ಮದವರಲ್ಲಿ 'ಧರ್ಮ'ಕ್ಕೆ ಅನೇಕಾರ್ಥಗಳಾಗುವದು ಸಹಜವಾಗಿದೆ.

ಆದರೆ "ಧರ್ಮವು ಮುಳುಗಿದರೆ ಜಗವೇ ಮುಳುಗುವದು" ಎಂದು ಜನರು ಅನ್ನುವಾಗಲೂ, "ಧರ್ಮಕ್ಕೆ ಅಳಿಗಾಲ ಬಂದಾಗ ಅದನ್ನುಳಿಸಲು ನಾನು ಲೋಕದಲ್ಲಿ ಹುಟ್ಟಿಬರುವೆ"ನೆಂದು ಭಗವಂತನು ಭಗವದ್ಗೀತೆಯಲ್ಲಿ ಹೇಳಿದಾಗಲೂ "ಕಲಿಕಾಲ ಬಂದೀತು, ಕಡೆ ಮೊದಲಾದೀತು, ಧರ್ಮವ ಬಿಡಬೇಡಿರಣ್ಣ" ಎಂದು ಸಾರುವಯ್ಯನವರು ಸಾರುವಾಗಲೂ "ಎತ್ತ ಧರ್ಮವಿಡೆಯೋ ಅತ್ತೇ ಜಯ"ವೆಂದು ನಮ್ಮ ಪುರಾಣೇತಿಹಾಸಗಳು ಪಲ್ಲವಿಯನ್ನು ಹಾಡುವಾಗಲೂ "ಧರ್ಮ" ಶಬ್ದಕ್ಕೆ ಬೇರೆ ಬೇರೆ ವಿಶೇಷವಾದ ಅರ್ಥಗಳಾಗುವವು. ಮೇಲೆ ಹೇಳಿದ ಹಲವು ಅರ್ಥಗಳನ್ನು ಬೇರೆ ಬೇರೆಯಾಗಿ ತೆಗೆದುಕೊಂಡು ಇಲ್ಲಿ ಧರ್ಮ ಶಬ್ದಕ್ಕೆ ಹಾಗೆ ಅರ್ಥ ಮಾಡಹೋದರೆ ಅದು ಅಷ್ಟು ಸರಿಯಾಗುವದಿಲ್ಲ ಅಥವಾ ಸಂಪೂರ್ಣವಾಗಿ ಕೂಡುವದಿಲ್ಲ. ಹಾಗಾದರೆ ಈ ಧರ್ಮದ ಅರ್ಥವೇನು? ಈ ಧರ್ಮವನ್ನು ಮುರಿಯುವದೆಂದರೆ ತಮ್ಮ ಕೈಯಿಂದ ತಾವೇ ತಮ್ಮನ್ನು ಹಾಳುಮಾಡಿಕೊಂಡಂತೆಯಂತೆ. ಈ ಧರ್ಮವನ್ನುಳಿಸಲು ಪ್ರತ್ಯಕ್ಷ ದೇವನೆ ಜನ್ಮತಾಳುವನಂತೆ; ಕಡಿದಾಟ ಬಡಿದಾಟಗಳ ಕಲಿಕಾಲ ಬಂದರೂ, ಕಡೆ ಮೇಲಾದರೂ ಈ ಧರ್ಮವನ್ನು ಬಿಡಬಾರದಂತೆ; ಕಡೆ ಬಾಳುವ ಗೆಲವು ಬೇಕಾದವರು ಈ ಧರ್ಮವನ್ನು ಪಾಲಿಸಬೇಕಂತೆ. ಅಂಥ ಈ ಧರ್ಮವಾವುದು? ಈ ಧರ್ಮದ ವಿರೋಧಿಯಾದ ಅಧರ್ಮವಾವುದು?

ಒಳ್ಳೆಯ ಮನಸ್ಸಿನಿಂದ ಹೊಂದುಗೂಡಿರುವದೆ ಧರ್ಮ. ವೈಮನಸ್ಸಿನಿಂದ ಬೇರೆ ಬೇರೆಯಾಗುವದೇ ಅಧರ್ಮ. ಒಳ್ಳೆಯ ಮನಸ್ಸಿನಿಂದ ಹೊಂದಿಗೂಡಿರುವದೇ ಬಾಳುವವರ ಲಕ್ಷಣ. ವೈಮನಸ್ಸಿನಿಂದ ಬೇರೆ ಬೇರೆಯಾಗುವದೆ ಹಾಳಾಗುವವರ ಲಕ್ಷಣ. ಹೊಂದುಗೂಡಿರುವ ಬುದ್ಧಿಯು ಕಡಿಮೆಯಾದಂತೆ ಹಾಳಾಗುವ ಹಾದಿ ಸಮೀಪಿಸಿತೆಂದು ತಿಳಿಯಬೇಕು. ಒಡಕು ಉಂಟಾದ ಮೇಲೆ ಒಡೆದು ಪುಡಿಪುಡಿಯಾಗಲೇನು ತಡ? ಹಾಗಾಗ

ಬಾರದೆಂಬ ಸಂಕಲ್ಪದಿಂದಲೇ ದೇವನು ದೇಹ ಧರಿಸಿ ಬರುವನು. ವೈಮನಸ್ಸನ್ನು ಇಲ್ಲದಂತೆ ಮಾಡಿ ಸಾಮರಸ್ಯವನ್ನು ಸ್ಥಾಪಿಸುವನು. ಬೇರೆ ಬೇರೆಯಾದವರನ್ನು ಹೊಂದುಗೂಡಿಸಿ ಒಂದು ಮಾಡುವನು. ಎಂಥ ಬಡಿದಾಟ ಕಡಿದಾಟದಲ್ಲಿಯೂ ಅದಲು ಬದಲಿನಲ್ಲಿಯೂ ತಾವು ಹೊಂದುಗೂಡಿ ಒಂದಾಗಿರಬೇಕೆಂಬ ಬುದ್ಧಿಯೊಂದು ಮಾತ್ರ ನಮ್ಮಲ್ಲಿ ನೆಲೆಗೊಂಡಿದ್ದರೆ ನಮ್ಮ ಧರ್ಮವೂ ಉಳಿಯುವದು; ನಾವೂ ಉಳಿಯುವೆವು. ಹೊಂದುಗೂಡಿರಬೇಕೆಂಬ ಬುದ್ಧಿಯೇ ಧರ್ಮದ ಮರ್ಮ. "ಎತ್ತ ಧರ್ಮ ಅತ್ತ ಜಯ" ವೆಂದು ಸಾರುವ ಭಾರತದ ವಾಣಿಯಾದರೂ ಪರ್ಯಾಯದಿಂದ ಹೊಂದುಗೂಡಿರುವದು. ಜಯ ಹೊಂದುವವರು ಇಲ್ಲದವರು ಇಲ್ಲದಾಗುವರೆಂದು ಹೇಳುವದಿಲ್ಲವೆ?

ಹೊಂದುಗೂಡಿರುವ ಪಾಂಡವರು ಗೆಲ್ಲಲಿಲ್ಲವೆ? ತಲೆಗೊಂದು ಬುದ್ಧಿಯುಳ್ಳ ಕೌರವರು ಸೋತು ಸಾಯಲಿಲ್ಲವೆ? ಹೊಂದಿಕೆಯಿಲ್ಲದಾದ ಯಾದವರ ಗತಿಯು ಕಡೆಗೇನಾಯಿತು? ಹಿಂದುಸ್ಥಾನವು ಇಂಗ್ಲೀಷ ಜನರ ಕೈಸೇರಬೇಕಾದರೆ ಕಾರಣವೇನು? ಅವರು ಬಂದ ಕಾಲಕ್ಕೆ ನಮ್ಮಲ್ಲಿ ಹೊಂದಿಕೆ ಇರಲಿಲ್ಲವೆಂಬುದೇ. ಮುಹಮ್ಮದೀಯರು ಬಂದು ಮೊದಲು ಜಯಶಾಲಿಗಳಾಗಲಿಕ್ಕೂ, ಎಷ್ಟೋ ದಿನಗಳ ಮೇಲೆ ಇಳಿಗಾಲವನ್ನು ಕಾಣುವದಕ್ಕೂ ಕಾರಣವಾದರೂ ಇದೇ! ಬಂದಾಗ್ಗೆ ಹೊಂದುಗೂಡಿ ಒಂದಾಗಿದ್ದರೂ ಹಿಂದುಗಡೆ ಹೊಂದಿಕೆಗೆಟ್ಟರು. ಹೊಂದಿಕೆಗೆಡಿಸುವ ದುಷ್ಟರನ್ನು ನಿಗ್ರಹಿಸಿ ಹೊಂದುಗೂಡಿರುದ ಶಿಷ್ಟರನ್ನು ರಕ್ಷಿಸಿ, ಶ್ರೀರಾಮಕೃಷ್ಣರು ಅವತಾರಿಗಳಾದರು. ಹೊಂದುಗೂಡಿಕೆಯ ಹಾದಿಯಿಂದ ಆರು ಮತಗಳನ್ನು ಸಂಧಿಸಿ ಶಂಕರಾಚಾರ್ಯರು ಧರ್ಮ ಸಂಸ್ಥಾಪಕರಾದರು. ಹದಿನೆಂಟು ಜಾತಿಯವರಿಗೂ ಹೊಂದುಗೂಡಿ ಬಾಳುವೆ ಮಾಡಹಚ್ಚಿ, ಬಸವೇಶ್ವರರು ಧರ್ಮೋದ್ಧಾರಕರಾದರು. ವಿದ್ಯಾರಣ್ಯರೂ, ಹುಕ್ಕಬುಕ್ಕರೂ, ರಾಮದಾಸರೂ, ಶಿವಾಜಿ ಮಹಾರಾಜರೂ ಧರ್ಮ ಸಂಸ್ಥಾಪನೆ ಪರಿಪಾಲನೆಗಳನ್ನು ಹೊಂದುಗೂಡಿಕೆಯ ಬಾಳುವೆಗೆ ಹಾದಿಯನ್ನು ಮಾಡಿಯೇ ಕೊನೆಗಾಣಿಸಿದರು. ಅಂತೂ ಹೊಂದಿಗೂಡಿರುವಂತೆ ಅನುಕೂಲಿಸಿಕೊಡುವವರೇ ಧರ್ಮಸಂರಕ್ಷಕರು. ಹೊಂದುಗೂಡಿಸುವವರೇ ಧರ್ಮವಂತರು. ಹೊಂದುಗೂಡಿಕೆಯ ಹಾದಿಯೇ ಧರ್ಮದ ಹಾದಿ, ಬಲದ ಹಾದಿ, ಜಯದ ಹಾದಿ, ಶುಭಮಂಗಳದ ಹಾದಿ, ಶಾಂತಿಪುಷ್ಟಿತುಷ್ಟಿಗಳ ಹಾದಿ.

ಹೊಂದ-ಗೂಡಿರಬೇಕೆಂಬುದೇನೊ ನಿಜ. ಆದರೆ ಅದು ಒಳ್ಳೇ ಮನಸ್ಸಿನಿಂದಿರಬೇಕು. ಅಜ್ಞಾನ ದೌರ್ಬಲ್ಯಗಳ ಮೂಲಕ ಕುರಿಹಿಂಡಿನಂತೆ ಹೊಂದಿಗೂಡಿರುವದಾಗಲಿ ಯಾರೋ ಕೂಡಿಸಿರಲು ಬೇರೆಯಾಗುವ ಶಕ್ತಿಯೇ ಇಲ್ಲದೆ ಹೊರೆಯೊಳಗಿನ ಕಟ್ಟಿಗೆಗಳಂತೆ ಹೊಂದುಗೂಡಿರುವದಾಗಲಿ ಧರ್ಮ ಜೀವನದ ಕುರುಹಲ್ಲ. ವೈಮನಸ್ಸು ಬೇರೆ ಬೇರೆ ಮಾಡುವಂತೆ ಸೌಮನಸ್ಸು ಹೊಂದುಗೂಡಿಸುವದು. ಹೊಂದುಗೂಡುವಿಕೆಯ ಬಾಳ್ವೆಯ ಫಲಕ್ಕೆ ಸೌಮನಸ್ಸೇ ಬೀಜ. ಸೌಮನಸ್ಸೆಂಬ ಬೀಜಕ್ಕೆ ಹುಟ್ಟಿದ ಹೊಂದ-ಗೂಡಿಕೆಯ ಬಾಳುವೆಯ ಫಲವೇ ಧರ್ಮ. ಬಲಿಷ್ಠರಾದ ಪರರ ಬೆದರಿಕೆಯು ಒತ್ತಾಯಕ್ಕೆ ಹೊಂದಿಸಿಕೊಂಡು ಒತ್ತಟ್ಟಿಗಿರುವದು ಅಧರ್ಮಜೀವನ. ಆ ಹಾಳು ಬಾಳುವೆಯಲ್ಲಿ ಮನಸ್ಸು ಹಿಗ್ಗಿರುವದಿಲ್ಲ. ತಗ್ಗಿ ಬಗ್ಗಿ ಕುಗ್ಗಿಕೊಂಡಿರುವದು. ಸೌಮನಸ್ಸಿನಿಂದ ಹೊಂದುಗೂಡಿರುವದು ಹೇಗೆ ಧರ್ಮವೋ ಹಾಗೆಯೇ ವೈಮನಸ್ಸಿನಿಂದ ಬೇರೆ ಬೇರೆಯಾಗಿರುವನೇ ಅಧರ್ಮವು. ಯಾಕಂದರೆ ಒಳ್ಳೆಯ ಮನಸ್ಸಿನವರಿಗೂ ಕೆಲವರ ಕೂಡ ಹೊಂದಿಕೊಂಡಿರುವದು ಸರಿಬರುವದಿಲ್ಲ. ಆ ಕಾಲಕ್ಕೆ ಸೌಮನಸ್ಸಿನಿಂದಲೇ ಒಳ್ಳೆಯವರು ಸರಿದು ಬೇರೆ ನಿಲ್ಲಬೇಕಾಗುತ್ತದೆ. ಧನಮದದಿಂದಾಗಲಿ ಅಧಿಕಾರಮದದಿಂದಾಗಲಿ ಮತ್ತೆ ಬೇರಾವ ಬಗೆಯ ಮದದಿಂದಾಗಲಿ ಮದಾಂಧರು ತಮ್ಮ ಅಹಂಕಾರದ ದರ್ಪದಲ್ಲಿ, ಪೌರುಷದ ಜಂಭದಲ್ಲಿ ಎರಡನೆ ಯವರನ್ನು ಲೆಕ್ಕಿಸದೆ ಬೇರೆಯುವರಿಗೇ ಹೊಂದಿಕೊಂಡಿರಬೇಕೆಂಬ ಉಪದೇಶ ಮಾಡಹತ್ತಿದರೆ ಸತ್ವಶೀಲರಾದವರು ತಮ್ಮ ಸತ್ವಬಲದಿಂದ ಅವರ ಮದವನ್ನ ಇಳಿಸಿ ಅವರನ್ನು ಹಾದಿಗೆ ತರುವವರೆಗೆ ಬೇರೆಯಾಗಿ ನಿಲ್ಲಬೇಕಾಗುತ್ತದೆ; ಆದರೆ ವೈಮನಸ್ಸಿನಿಂದಲ್ಲ. ಮನಸ್ಸಿಲ್ಲದೆ ಹೊಂದಿಕೊಂಡಿರುವದು ಧರ್ಮಜೀವನವಲ್ಲ; ಒಳ್ಳೆಯ ಮನಸ್ಸಿನಿಂದ ಬೇರೆಯಾಗಿ ನಿಲ್ಲುವದೂ ಅಧರ್ಮ ಜೀವನವಲ್ಲ. ಆದರೆ ಹೊಂದಿಗೂಡಿರುವದೂ ಬೇರೆ ಬೇರೆಯಾಗಿರುವದೂ ಹೇಗೆ ಕಣ್ಣಿಗೆ ಕಾಣಿಸುವದೋ ಹಾಗೆ ಸೌಮನಸ್ಸು ವೈಮನಸ್ಸುಗಳು ಕಣ್ಣಿಗೆ ಕಾಣಿಸುವದಿಲ್ಲ. ಒಂದು ದೃಶ್ಯ, ಇನ್ನೊಂದು ಅದೃಶ್ಯ. ಒಂದು ಕಣ್ಣಿಗೆ ಕಾಣುವದು, ಇನ್ನೊಂದು ಮನಸ್ಸಿಗೆ ಹೊಳೆಯುವದು. ಇಲ್ಲಿ ವಿವೇಕ ಮಾಡುವ ಬಗೆ ಹೇಗೆ? ನಿಶ್ಚಯದ ಹಾದಿಯು ಯಾವದು?

---

## ೨. ಧರ್ಮದ ಎದುರು ಹಿಡಿದ ದೀಪ

'ಧರ್ಮ' ಎಂದೊಡನೆ ಕೆಲವರಿಗೆ ಭಯದಿಂದ ಮೈಗೆ ಮುಳ್ಳು ಬರುವವು. ಧರ್ಮದ ಹೆಸರಿನಿಂದ ಭೂದೇವಿಗೆ ರಕ್ತದ ಅಭಿಷೇಕವಾಗಿದೆ. ಧಾರ್ಮಿಕರಿಗೆ ಕ್ರೂರತನದಲ್ಲಿಯೂ ನಿರ್ದಯತೆಯಲ್ಲಿಯೂ ಇರುವಷ್ಟು ಧೈರ್ಯ-ನಿಗ್ರಹಗಳು ಕಳ್ಳ-ಕಾಕರಿಗೂ ಇರುವುದಿಲ್ಲ. ಧರ್ಮವು ಯುದ್ಧದ ತಾಯಿ; ಜಗಳದ ಬೀಜ. ದೇವಾಸುರ ಸಂಗ್ರಾಮಗಳಾಗಲಿ, ಯುರೋಪದ ಕ್ರೂಸೇಡ್ ಯುದ್ಧಗಳಾಗಲಿ, ಹಿಂದೂ-ಮುಸಲ್ಮಾನ್ ಜಗಳಗಳಾಗಲಿ ಧರ್ಮದ ಬಾಲಹಿಡಿದು ಬಡಿದಾಡುವವು. ಆದರೆ ಧರ್ಮವು ಕೇವಲ ಭಯಕ್ಕೆ ಕಾರಣವಾಗಿದ್ದರೆ ಅದು ಇದುವರೆಗೂ ಬದುಕಿರುತ್ತಿರಲಿಲ್ಲ. ಆ ಭಯದ ಜೊತೆಗೆ ಭಕ್ತಿಯಿದೆ; ಅಂತೆಯೆ 'ಧರ್ಮ'ವೆಂದರೆ ಕೆಲವರಿಗೆ ಹರ್ಷ ರೋಮಾಂಚಗಳೇಳುವವು; ಆನಂದಬಾಷ್ಪಗಳುದುರುವವು; ಆದರದಿಂದ ತಲೆ ಬಾಗುವುದು. ಎಷ್ಟು ಧರ್ಮಸಂಸ್ಥಾಪಕರು, ಎಷ್ಟು ಸಾಧು-ಸತ್ಪುರುಷರು, ಏನು ತ್ಯಾಗ, ಎಂಥ ಅಂತಃಕರಣ? ಧರ್ಮದ ಇತಿಹಾಸವು ಅದ್ಭುತ ರಮ್ಯ ಕಥೆಗಳ ಆಗರವಾಗಿದೆ. ಇಂದಿನ ಜಗತ್ತಿನಲ್ಲಿ ಉಳಿದಿರುವ ಸದ್ಬುದ್ಧಿಗೆ ಧರ್ಮದ ತಾಯ್ಬೇರಿನ ಪೋಷಣೆಯಿದೆ. ಆದರೆ ಅದೇ ಧರ್ಮದ ಇನ್ನೊಂದು ರೂಪವು ನಗೆಗೆ ಈಡಾಗಿದೆ. ಧರ್ಮದ ಸೋಗಿನಲ್ಲಿ ಎಷ್ಟು ಜಂಭ! ಎಂಥ ಮೋಸ! ಏನು ಹುಚ್ಚುಚ್ಚು!-ಹೀಗೆ ಧರ್ಮದ ತ್ರಿಮೂರ್ತಿಸ್ವರೂಪವು ಅತಿ ವಿಚಿತ್ರವಾಗಿದೆ. ರುದ್ರಭೀತಿ! ಶಾಂತಪ್ರೀತಿ! ಬೀಭತ್ಸಹಾಸ್ಯ! ಇದೆಲ್ಲವೂ ಧರ್ಮವನ್ನೇ ಕುರಿತು. ಇಂತಹ ಈ ಧರ್ಮವೆಂದರಾದರೂ ಏನು?— ಎಂದು ಕೇಳುವ ಅಗತ್ಯವೇ ನಮಗೆ ತೋರುವುದಿಲ್ಲ. ಎಲ್ಲರಿಗೂ ಧರ್ಮ ತಿಳಿದಿದೆ. ಧರ್ಮ ಬಿಟ್ಟು ಏನಿದೆ? ಧರ್ಮವೆಂದರೇನು ಎಂದು ಚರ್ಚೆ ಮಾಡುವವನೆ ಅಧಾರ್ಮಿಕನಿರಬೇಕೆಂದು ತಿಳಿಯುವಷ್ಟು ಸೂಕ್ಷ್ಮವಾಗಿದೆ ಕೆಲವರ ಧಾರ್ಮಿಕಬುದ್ಧಿ.

ಆದರೆ ಇಂದು 'ಧರ್ಮವೆಂದರೇನು?' ಎಂದು ಕೇಳದೆ ಗತಿಯಿಲ್ಲ. ಧರ್ಮವು ಎಲ್ಲ ಕಡೆಗೂ ಅಡ್ಡಗಾಲು ಹಾಕುತ್ತಿದೆ. ಜಾತಿ, ಮತ, ಕುಲ (Caste, Creed, Colour) ಗಳ ಸಂಕುಚಿತಬುದ್ಧಿಯನ್ನು ಮೀರಿರುವು

ದೆಂದು ಬಿರುದುತೊಟ್ಟಿರುವ ಈ ಇಪ್ಪತ್ತನೆಯ ಶತಮಾನದ ಧರ್ಮಸಾಮ್ರಾಜ್ಯದಲ್ಲಿ ಜಾತಿಯ ರೋಗವಿಲ್ಲದ ಚುನಾವಣೆಗಳಿಲ್ಲ; ಮತದ ಒಳಗಂಟಿಲ್ಲದ ರಾಜಕೀಯ ಪಕ್ಷಗಳಿಲ್ಲ; ಕುಲದ ಕಲಂಕ ಮೆತ್ತಿಕೊಂಡಿರದ ರಾಷ್ಟ್ರೀಯ ಧೋರಣೆಗಳಿಲ್ಲ. ಜನಿವಾರ ಶಿವದಾರಗಳನ್ನು ಹಾಕಿರಲಿ—ತೊರೆದಿರಲಿ ಚಂಡಿಕೆ–ಗಡ್ಡಗಳನ್ನು ಬೆಳಸಿರಲಿ—ಬೋಳಿಸಿರಲಿ; ಗುಡಿ-ಚರ್ಚುಗಳನ್ನು ಕಂಡಿರಲಿ-ಬಿಟ್ಟಿರಲಿ, ನಮ್ಮನಮ್ಮ ಜಾತಿಧರ್ಮವು ನಮ್ಮ ಕೊರಳಿಗೆ ಜೋತು ಬಿದ್ದುಕೊಂಡೋ, ತಲೆಯನ್ನೇರಿಯೋ, ಮೋರೆಯನ್ನು ಮುಸುಕಿಯೋ, ಎದೆಯಲ್ಲಡಗಿಯೋ ನಮ್ಮೊಡನೆ ಬರುವುದು. ನಮ್ಮ ನೆರಳೂ ನಮ್ಮನ್ನು ಬಿಟ್ಟು ಕೆಲಸೊತ್ತಿರಬಹುದು; ಜಾತಿ ಬಿಡುವುದಿಲ್ಲ. ನಾವು ಜಾತಿಯನ್ನು ಬಿಡಬಹುದು, ಜಾತಿ ನಮ್ಮನ್ನು ಬಿಡುವುದಿಲ್ಲ. ಪರಮತಸಹಿಷ್ಣುತೆಯು ನಮ್ಮಲ್ಲಿ ಬೆಳೆದಿದೆ ಎಂದು ಕೆಲವರಿಗೆ ಭ್ರಮೆಯಿದೆ. ಅಲ್ಲಿ, ಮತವೆಂದರೆ ಸತ್ತ ಮತವೆಂದರ್ಥ. ಆಚರಣೆಗೆ ಬರುವ ಮತಗಳ ವಿಷಯದಲ್ಲಿ ಜನರು ಅಸಹಿಷ್ಣುಗಳಾಗಿದ್ದಾರೆ. ಇದಲ್ಲದೆ ಜೀವಂತಮತವು ಇಂದು ವೇಷ ಬದಲಾಯಿಸಿದೆ. ಖಾದೀಮತ–ಗಿರಣೀಮತ, ಕಾಂಗ್ರೆಸ್‌ಮತ–ಸೊಶಾಲಿಸ್ಟ್‌ಮತ, ಅಹಿಂಸಾಮತ–ಕ್ರಾಂತಿಮತ, ಗಾಂಧೀಮತ–ಟಿಳಕಮತ, ಪ್ರಾಂತೀಯಮತ–ರಾಷ್ಟ್ರೀಯಮತ, ದೇಶಮತ–ವಿಶ್ವಮತ ಇವುಗಳಲ್ಲಿ ಕಂಡುಬರುವ ಹೊಟ್ಟೆಯುರುಕತನವು ಇಂದಿನ ವ್ಯವಹಾರದಲ್ಲಿ ಹೊಸದಲ್ಲ. ಎಣ್ಣೆಯಿಲ್ಲದೆ ಉರಿಯುವುದೆಂದರೇನು?—ಎಂಬುದಕ್ಕೆ ಮತಗಳ ಕೊಳ್ಳಿದೆವ್ವಗಳು ತಕ್ಕ ಉದಾಹರಣೆಗಳಾಗಿವೆ. ಕುಲಗಳ ಬಣ್ಣದ ಭೂತವಂತೂ ಸರ್ಕಸ್ಸಿನ ಹೆಣ್ಣು, ಗುಂಡು-ಕಟ್ಟಿಗೆಯನ್ನು ಕಾಲ್ಕೆಳಗೆ ಉರುಳಿಸಿ ಹೊರಳಿಸುವಂತೆ ಇಡಿಯ ಭೂಮಿಯನ್ನೇ ಉರುಳಾಡಿಸುತ್ತಿದೆ. ಆರ್ಯ-ದ್ರಾವಿಡಭೂತವು ಬ್ರಾಹ್ಮಣ ಬ್ರಾಹ್ಮಣೇತರ ಹೆಸರಿನಿಂದ ತನ್ನ ಕಾಟವನ್ನು ಕೊಡುತ್ತಿದೆ. ಅಮೇರಿಕದ ಬಿಳಿಯ ಅಲ್ಲಿಯ ಮೂಲನಿವಾಸಿಗಳಾದ ಕೆಂಪು ಇಂಡಿಯನರನ್ನೂ, ತಾವೇ ಗುಲಾಮರನ್ನಾಗಿ ತಂದ ಕಪ್ಪು ನಿಗ್ರೋ ಜನರನ್ನೂ ಯಾವ ಅಮಾನುಷ ಕ್ರೌರ್ಯದಿಂದ ನಡೆಯಿಸಿಕೊಂಡಿರುವರು, ನಡೆಯಿಸಿಕೊಳ್ಳುತ್ತಿರುವರು—ಎಂಬುದು ಇತಿಹಾಸದ ವಿಷಯವಾಗಿದೆ. ಹಿಂದುಸ್ಥಾನದ ಜನರು ಜಗತ್ತಿನ ಅಸ್ಪೃಶ್ಯರು; ಯಹುದೀ ಜನರು ಯುರೋಪಿನ ಹುಚ್ಚುನಾಯಿ; ಅರಿಸಿಣ ಬಣ್ಣದ ಚೀನಿ-ಜಪಾನಿಗಳು ಪಾಶ್ಚಿಮಾ

ತ್ತ್ಯರಿಗೆ ಸಿಡುಗು. 'ಅಯ್ಯೋ! ಬಿಳಿಯ ಬಣ್ಣಕ್ಕೆ ಸಾವು ಬಂತು' ಎಂದು ಒಂದು ಕೂಗು. 'ಕಪ್ಪು ಬಣ್ಣವನ್ನೆ ಕೊಂದುಹಾಕಿಬಿಡಿರಿ' ಎಂದೂ ಒಂದು ಬೊಬ್ಬೆ. ಇಷ್ಟೊ ಸಾಲದೆ ಈ ವರ್ಣದ್ವೇಷಕ್ಕೆ ರಕ್ತವಿಜ್ಞಾನಿಗಳ ಆಧಾರ ಬೇರೆ. ಮನುಷ್ಯಜಾತಿಯಲ್ಲಿ ಒಂದರಲ್ಲಿ ಒಂದು ಬೆರೆಯಲಾರದ, ಬೆರೆಯ ಬಾರದ ನಾಲ್ಕು ರಕ್ತಗಳಿವೆಯಂತೆ. ಸನಾತನಿಗಳಿಗೆ ಭೇದಕ್ಕೆ ಆಧಾರ; ಪುಂಡ ಬಿಳಿಯ ಜನರಿಗೆ ಬಡಿದಾಟಕ್ಕೆ ನೆವ! ವರ್ಣಭ್ರಾಂತಿ ಇಲ್ಲಿಯೆ ನಿಂತಿಲ್ಲ; ನಿಗ್ರೋಜನರು ಮನುಷ್ಯಕುಲಕ್ಕೇ ಸೇರಿದವರಲ್ಲ; ಕಪ್ಪು-ಕಂದೀಬಣ್ಣದವರು ಆಳಿಸಿಕೊಳ್ಳಲಿಕ್ಕೇ ಹುಟ್ಟಿದ್ದಾರೆ; ಬಿಳಿಯ ಬಣ್ಣದವರೇ ಅರಸರಾಗಬಲ್ಲರು; ತಾಮ್ರಮುಖಿಗಳು ರಾಕ್ಷಸ ಕುಲದವರು; ಇತ್ಯಾದಿ ಇತ್ಯಾದಿಯಾಗಿ ಮಹಾ ಮಹಾ ಸಿದ್ಧಾಂತಗಳನ್ನು ಮನುಷ್ಯನ ಮರ್ಕಟಬುದ್ಧಿಯು ಧರ್ಮವೆಂದು ಸಾರಿದೆ. ಅದಕ್ಕೆ ಸರಿಯಾಗಿ ಮರ್ಕಟಚೇಷ್ಟೆಗಳೂ ನಡೆದಿವೆ. ಈ ಮಂಗನಿಗೆ ಧರ್ಮದಾವೇಶವು ಮದ್ಯದ ಮದವಿದ್ದಂತೆ!

ಹೀಗಿರುವಾಗ ಧರ್ಮದ ಕಲ್ಪನೆಯಲ್ಲಿ ಏನೋ ತಪ್ಪಾಗಿದೆ ಎಂದರೆ ತಪ್ಪೇ? 'ಹೌದು ತಪ್ಪಾಗಿದೆ' ಎಂದು ಬಹಳ ಜನರು ಒಪ್ಪಿಕೊಳ್ಳುತ್ತಾರೆ. ಆದರೆ ಪ್ರತಿಯೊಬ್ಬರೂ ಇನ್ನೊಬ್ಬರ ಧರ್ಮವು ಅಧರ್ಮವೆಂದು ಸಾರುವರು. ತಮ್ಮ ಧರ್ಮದಲ್ಲಿಯೂ ತಾವು ಮಾಡಿದ್ದು ಧರ್ಮ, ಬೇರೊಬ್ಬರು ಮಾಡಿದ್ದು ಅಧರ್ಮವೆಂದು ತಿಳಿಯುವರು. ಕಲಿಯುಗದ ಕಲ್ಪನೆಯಿಂದಂತೂ ಅಧರ್ಮಕ್ಕೇ ಧರ್ಮಪಟ್ಟಬಂದಿದೆ.

ಧರ್ಮದ ಮುಂದೆ ಹಿಡಿದ ದೀಪದ ಬೆಳಕಿನಲ್ಲಿ, ನಾನು ಕಂಡುಕೊಂಡ ಒಂದು ಸ್ವರೂಪವಿಭಾಗದ ಶಬ್ದಚಿತ್ರವಿದು!

---

# ೩. ಐದು ರಹಸ್ಯಗಳು

## ಪ್ರಾಚೀನ ಸಂಸ್ಕೃತಿಗಳ ಉಗಮದ ಬಗ್ಗೆ ಒಂದು ತಾತ್ತ್ವಿಕ ಊಹೆ

'ನಹಿ ಜ್ಞಾನೇನ ಸದೃಶಂ' ಜ್ಞಾನದ ಸರಿದೊರೆ ಯಾವುದೂ ಇಲ್ಲ ಎಂದು ಬಲ್ಲವರು ಹೇಳಲಿ, ಅಜ್ಞಾನದ ಸರಿಸಮವೂ ಯಾವುದೂ ಇಲ್ಲ. ಇದ್ದರೆ ಜ್ಞಾನವೊಂದೇ ಎಂದು ಅಜ್ಞಾನದ ಅಗಾಧ ಆಳವನ್ನು ಎಲ್ಲಿ ಯಾವ ಜ್ಞಾನಿಯೂ ಹೇಳಬಲ್ಲನು. ದೇವರನ್ನು ಮೊದಲು ಮಾಡಿಕೊಂಡು ಯಾವ ರಹಸ್ಯವೂ ಅದರ ಬಗ್ಗೆ ಜೀವರಿಗಿರುವ ಅಪಾರವಾದ ಜ್ಞಾನದಿಂದಲೇ ಭವ್ಯವಾಗಿ ತೋರುವದು. ಯುಗಜುಗಗಳಲ್ಲಾಗುವ ಜ್ಞಾನದ ಪ್ರಗತಿಯೆಲ್ಲವೂ ನಮ್ಮ ಅಜ್ಞಾನದ ಅವಧಿಯನ್ನು ಅಳೆಯುತ್ತಲಿದೆ. ನಮಗೆ ತಿಳಿಹೆಲ್ಲ ಸಂಗತಿಗಳನ್ನು ಕೂಡಿಹಾಕಿದರೂ ತಿಳಿಯಬೇಕಾದುದರ ಪ್ರಸಂಗಕ್ಕೂ ಸರಿಹೋಗುವದಿಲ್ಲ. ಹುಟ್ಟು, ಇರವು, ಸಾವುಗಳ ಗುಟ್ಟು ರಟ್ಟಾಗಿದೆಯೇ? ಹುಟ್ಟಿನ ಈಚೆ ಗೊತ್ತಿಲ್ಲ, ಸಾವಿನ ಆಚೆ ಗೊತ್ತಿಲ್ಲ, ಇರವಿನ ಒಳಗು ಗೊತ್ತಿಲ್ಲ. ಹುಟ್ಟು ಇರವು ಸಾವು ಎಲ್ಲರಿಗೂ ಇದೆ. ಅಯೋನಿಸಂಭವರಿಗೂ ಹುಟ್ಟು ಇದೆ. ಚಿರಂಜೀವಿಗಳೂ ಕಲ್ಪಾಂತದಲ್ಲಿ ಸಾವನೊಪ್ಪುವರು. ಅರಿವಿಲ್ಲದಲ್ಲಿಯೂ ಇರವು ತಪ್ಪಿಲ್ಲ. ಅಜ್ಞಾನಿ, ಪಾಪಿ, ದೀನರಿಗೂ ಇವು ತಾನಾಗಿ ಸಂಭವಿಸುವವು. ಇಂಥ ಈ ಅತಿಸಾಮಾನ್ಯವಾದ ದೈನಂದಿನ ಘಟನೆಗಳು ಇನ್ನೂ ಅಗಮ್ಯಗಳಾಗಿವೆ. ಇದರ ಬಗ್ಗೆ ಮಾನವನಿಗೆ ಮೊದಲಿಂದಲೂ ಇರುವ ಅಜ್ಞಾನವೇ ಇವುಗಳ ರಹಸ್ಯಕ್ಕೆ ದೇವತ್ವವನ್ನು ಕಲ್ಪಿಸಿದೆ.

ಹುಟ್ಟಿಸುವ ದೇವ ಪ್ರಜಾಪತಿ; ದಕ್ಷಪ್ರಜಾಪತಿ; ದಕ್ಷಬ್ರಹ್ಮ; ಬ್ರಹ್ಮ ಹುಟ್ಟಿನ ಗುಟ್ಟು ಹುಟ್ಟಿಗೆಯ ಇಂದ್ರಿಯಗಳನ್ನೂ ದೇವನ ಚಿನ್ಹ, ಪ್ರತೀಕ, ಸಂಕೇತಗಳನ್ನಾಗಿಸಿತು. ಶಿಶ್ನ, ಯೋನಿ, ಭಗ, ಲಿಂಗಗಳು ದೇವವಾಚಕವಾದುವು. ಚಿನ್ಹವಾವುದೇ ಇದ್ದರೂ ತತ್ವವು ರಹಸ್ಯಮಯವೇ! ಎರಡಿಲ್ಲದ

ಒಂದೇ ಒಂದಿದ್ದಾಗ ಅದೇ ಶೂನ್ಯ, ಅದೇ ಅನಂತ. ಎರಡಿಲ್ಲದೆ ಸೃಷ್ಟಿಯಿಲ್ಲ. ಒಂದರಲ್ಲಿಯೋ ಎರಡಿರಬಹುದು. ಆದರೆ ಆ ಎರಡು ಒಂದಾದಾಗಲೇ ಸೃಷ್ಟಿಗೆ ಕಾರಣ. ಎರಡೂ ರಹಸ್ಯಗಳೆ. ಪ್ರಜಾಪತಿ ರಹಸ್ಯ! ಶಕ್ತಿರಹಸ್ಯ! ಶಿಶ್ನ ದೇವರು! ಭಗವತಿ! ಎಲ್ಲ ಪ್ರಜಾಪತಿಗಳಿಗೂ ದಕ್ಷಬ್ರಹ್ಮನೆ ಮೂಲ. ಯಾವ ಪ್ರಜಾಪತಿಗಳ ಸಂತತಿಗೂ ದಕ್ಷಬ್ರಹ್ಮನ ಹೆಂಗೂಸುಗಳೇ ಕ್ಷೇತ್ರ. ಒಂದು ಬ್ರಹ್ಮ ಇನ್ನೊಂದು ಶಕ್ತಿಮಾತೆ.

ಬ್ರಹ್ಮಶಕ್ತಿ ಸಂಯೋಗವೇ ಇರವಿಗೆ ಆದಿ. ಅದರ ಪರಸ್ಪರಾಕರ್ಷಣವೆ ಇರವಿನ ಅವಿಚ್ಛಿನ್ನ ಸಂತತಿಯ ತಂತು. ಜೀವ ಜೀವಕ್ಕೂ ಬಿನ್ನದೇಹವಿದ್ದರೂ, ಒಂದಕ್ಕೊಂದು ಬೇಕಾಗಿ ಹೊಂದಿಕೊಳ್ಳುವ ಅಗಮ್ಯರೀತಿಯೇ ಇರವಿನ ಸತ್ವಸಾರ. ನರ-ನಾರಿಯರ ರತಿಯೇನು? ನರ-ನರರ ಮೈತ್ರಿಯೇನು? ನರ-ನಾರಾಯಣರ ಭಕ್ತಿಯೇನು? ಒಂದೊಡೆದು ಎರಡಾದ ಸತ್ತ್ವವೆ ಹೊಂದಿ ಒಂದರ ಅನುಭವ ಪಡೆಯುವ ಅಗಮ್ಯ ದಾಹವಲ್ಲದೆ ಈ ಕಾಮಕ್ಕೆ ಬೇರೆ ಅರ್ಥವೇನು? ದಾಹವಿನ್ನೂ ಆರಿಲ್ಲ. 'ನ ಕಾಮಃ ಕಾಮ್ಯಾನಾಂ ಉಪಭೋಗೇನ ಶಾಮ್ಯತಿ.' ಎರಡರದು ಮೂರಾಗುತ್ತಿದೆ, ನೂರಾಗುತ್ತಿದೆ; ಆದರೆ ನೂರರದು ಒಂದಾಗುವ ಹಾದಿ ತೋರುತ್ತಿಲ್ಲ. ಇರವು ಸಾಗಿದೆ, ಅರಿವು ಮೂಡಿಲ್ಲ. ನರನೂ ನಾರಿಯೂ ನಾರಾಯಣನೂ ದೇವರಾದರು. ಪಿತೃಗಳು ಗುರುಗಳು ರಾಜರು ದೇವರಾದರು. ಎರಡನ್ನು ಒಂದುಗೂಡಿಸಿ ಇರವಿನೊಳಗಿನ ಅರಿವಿಗೆ ಹಾದಿಮಾಡಿದವರೆಲ್ಲರೂ ದೇವರಾದರು.

ಹುಟ್ಟಿಗೆ ಮೊದಲಿಲ್ಲ. ಇರವಿಗೆ ಕೊನೆಯಿಲ್ಲ; ಆದರೂ ಸಾವಿಗೆ ಸಾಕಿಲ್ಲ. ಹುಟ್ಟಿನ ಹೊಟ್ಟೆಯಲ್ಲಿ ಸಾವಿನ ಸಾಮಗ್ರಿಯಿದೆ. ದೇಹಕ್ಕೂ ಪ್ರಾಣಕ್ಕೂ ಇರುವ ಬೆಸುಗೆ ಒಮ್ಮೆಲ್ಲೊಮ್ಮೆ ಬಿಚ್ಚಲೇಬೇಕು. ಅದು ಕಗ್ಗಂಟಲ್ಲ; ಸರಿಗಂಟು. ಹುಟ್ಟೆಂದರೆ ರೂಪ, ಸಾವೆಂದರೆ ಅರೂಪ. ಹುಟ್ಟೆಂದರೆ ಗತಿ, ಸಾವೆಂದರೆ ಅಗತಿ; ಹುಟ್ಟೆಂದರೆ ರಸ, ಸಾವೆಂದರೆ ವಿರಸ. ಎರಡು ಕಟ್ಟಿಗೆ ತುಂಡುಗಳ ಘರ್ಷಣದಿಂದಲೆ, ಹುಟ್ಟಿದ ಬೆಂಕಿ ಕಟ್ಟಿಗೆಯನ್ನೂ ಸುಟ್ಟು ತಾನೂ ವಿಲೀನವಾಗುವಂತೆ ಜಡಕ್ಕೆ ರೂಪುಗೊಟ್ಟು ಜೀವವು ಜಡದ ರೂಪುಗೆಡಿಸಿ ತಾನೂ ಅದೃಶ್ಯವಾಗುವದು. ಸಾವಿನ ಕಳ್ಳಹೆಜ್ಜೆಯು ಸುಳಿವು

ಯಾರಿಗೂ ಹತ್ತದು. ಸಾವಿಗೆ ಸಂಬಂಧಿಸಿದುದೆಲ್ಲವೂ ರಹಸ್ಯಮಯ; ದೇವ ಚಿನ್ಹ, ಸ್ಮಶಾನ, ಕಪಾಲ, ಭಸ್ಮ, ಮಣ್ಣು, ಎಲ್ಲವೂ ರುದ್ರನ ವಿಭೂತಿ.

ಜೀವ-ಜೀವದ ಮಥನದಿಂದ ಜನ್ಮದ ಉಗಮವಾಗಿ, ಜೀವ ಜೀವದ ಆಲಂಬನ, ಉದ್ದೀಪನ, ಆಕರ್ಷಣದಿಂದ ಇರವಿನ ಪ್ರಪಂಚವಾಗಿ, ಬೀಜದ ಅಗಮ್ಯ ಅದೃಶ್ಯತೆಯಿಂದ ಸಾವಿನ ಸಮಸ್ಯೆಯಾಗಿ—ರಹಸ್ಯಗಳನ್ನುಂಟ ಮಾಡಿರುವದಲ್ಲದೆ, ಜಡವು ಜೀವದಿಂದ ಇಷ್ಟು ಭಿನ್ನವಾಗಿದ್ದೂ ಜೀವಕ್ಕಾಗಿ ಜಡವು ಜೀವಿಸಿರುವದು ಇನ್ನೊಂದು ಅಗಮ್ಯ ರಹಸ್ಯವೇ ಆಗಿದೆ. ಜಡವು ಜೀವದ ಗೂಡು. ಅನ್ನ, ದೃಶ್ಯ, ಆಟದೆಡೆ. ಜಡಕ್ಕೆ ಅಳಿವಿಲ್ಲ, ಜೀವಕ್ಕೆ ನಾಶ ವಿಲ್ಲವಾದರೂ ಒಂದನ್ನೊಂದು ಬಿಟ್ಟಾಡುವ ಮುಟ್ಟಾಟದಲ್ಲಿ ಹುಟ್ಟು, ಇರವು, ಸಾವಿನ ವಿಲಾಸವಾಗಿ ಹೋಗುವದು. ಇಂದ್ರಿಯಗಳೆಲ್ಲವೂ ಜಡದ ಕೂಡ ಉಂಟಾದ ಜೀವದ ಸಂಬಂಧದಿಂದಲೇ. ಜಡದ ತತ್ತ್ವವೇ ಇಂದ್ರಿಯಗಳ ಇಂದ್ರ. ದೇವತೆಗಳ ರಾಜ. ಭೂತಗಳ ಅಧಿಪತಿ.

ಇಂತು, ಪ್ರಜಾಪತಿ, ಭಗವತಿ, ನಾರಾಯಣ, ರುದ್ರ, ಇಂದ್ರರು ಅಯ್ದು ಚಿರಂತನ ರಹಸ್ಯಗಳ ದೇವತಾತತ್ವಗಳಾಗಿರುವರು. ಇವೈದೂ ಸಂಸ್ಕೃತಿಯು ವಿವಿಧರೂಪಗಳನ್ನು ತಾಳಿ, ವಿವಿಧ ಸಂಮಿಶ್ರಣದಿಂದ ಪ್ರಪಂಚದ ಹಾಸು ಹೊಕ್ಕಾಗಿ ಜ್ಞಾನದ ಘಟಕಗಳಾಗಿವೆ. ಆಕಾಶವೆ ಪ್ರಜಾಪತಿ, ಪೃಥ್ವಿಯೆ ಭಗವತಿ, ಅಂತರಿಕ್ಷಭೂತಗಳೆ ಇಂದ್ರ, ಜೀವವೆ ನಾರಾಯಣ, ಅನೇಕವು ಏಕತ್ವದ ಹದಕ್ಕೆ ಬರುವವರೆಗೂ ರೂಪವು ವಿರೂಪವಾಗುವ ಸಾರ್ವಭೌಮ ಕ್ರಿಯೆಯೆ ರುದ್ರ. ಈ ಪಂಚಕಗಳೆ ಪ್ರಪಂಚದ ಘಟಕಗಳು. ಈ ಪಂಚಕದ ಒಳಸಂಚು ಒಂದು ಸಂಚಿನಿಂದ ಬಂದಿದೆ. ಆ ಸಂಚನ್ನರಿಯುವದೆ ರಹಸ್ಯದ ರಹಸ್ಯ. ಅಲ್ಲಿ ಅಯ್ದೂ ಒಂದು; ರಹಸ್ಯವು ಬಯಲು. ಅದೇ ಮೂಲ ಬ್ರಹ್ಮರಹಸ್ಯ.

---

# ೪. ಅನ್ನ

## ಪ್ರಸ್ತಾವನೆ

ಅನ್ನದ ವಿಷಯ ಬಹಳ ಸಣ್ಣ ವಿಷಯ ಎಂದು ಬಹಳ ಜನರ ತಿಳಿವಳಿಕೆಯಿದೆ! ‘ಎಲ್ಲರೂ ಮಾಡುವದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ!’ ಎಂದು ಹೇಳಿದ ದಾಸರು ಎಲ್ಲರೂ ಅನ್ನವಸ್ತ್ರಕ್ಕೆ ಕೊಡುವ ಮಹತ್ವವನ್ನು ಸೂಚಿಸಿದ್ದರೂ ಅದರ ಸ್ಥಾನವು ಮೇಲ್ತರಗತಿಯದಲ್ಲ ಎಂದು ಸಾರಿದ್ದಾರೆ. ಅನ್ನದ ವಿಚಾರ ಚಿಕ್ಕವರು ಮಾಡಬೇಕು; ದೇವರು ಹುಲ್ಲು ಮೇಯಿಸುವದಿಲ್ಲ. ಪ್ರಾಣಿ ಹುಟ್ಟುವದರ ಮೊದಲು ಅವನ ಅನ್ನ ಹುಟ್ಟಿರುತ್ತದೆ. ಅನ್ನದಿಂದ ಭೂತಗಳು ಹುಟ್ಟಿದವು. ‘ಹೊಟ್ಟೆ ಹೊರಕೊಳ್ಳುವದು ಏನು ಮಹಾ? ನಾಯಿ ಕೂಡ ಹೊಟ್ಟೆ ಹೊರಕೊಳ್ಳುವದು’ ಎಂದು ಮುಂತಾಗಿ ಹಸಿಬಿಸಿ ವೇದಾಂತವನ್ನು ಕುಟ್ಟಿ ಹಸಿದವರಿಗೆಲ್ಲ ನೀಡುವದು ಬಹಳ ದಿನದಿಂದ ನಡೆದ ಬಂದ ಸಂಪ್ರದಾಯವಾಗಿದೆ. ದೇಶವು ಧರ್ಮದ ಪ್ರಥಮ ಸಾಧನ ಎಂಬುದೇ ನಿಜವಾದರೆ ಅನ್ನವು ಅದರ ಪ್ರಥಮ ಸಮಸ್ಯೆ ಎಂಬುದರಲ್ಲಿ ಸಂದೇಹವೇ ಇಲ್ಲ. ಅನ್ನದ ಅರ್ಥವು ವ್ಯಾಪಕವಾಗಿರುವದರಿಂದಲೂ, ಅನ್ನ ಇದ್ದವರೂ ಇಲ್ಲದವರೂ ಕೂಡಿಯೇ ಆಶೆ-ನಿರಾಶೆಗಳ ಮೂಲಕ ಆ ಪ್ರಶ್ನೆಯೆ ಬಹಳ ತೊಡಕಿನದಾಗಿದೆ ಎಂಬುದನ್ನು ಒಪ್ಪಿಕೊಳ್ಳಲಾರದ್ದಕ್ಕೆ ಅದು ಮಹತ್ವದ್ದೇ ಅಲ್ಲ ಎಂಬ ಹುಂಬುಗುತ್ತಿಗೆಯ ನ್ಯಾಯಕ್ಕೆ ಬಂದಿರುವದರಿಂದಲೂ, ಈ ಪ್ರಶ್ನೆಯನ್ನು ಬಿಡಿಸುವ ಅಧಿಕಾರ, ಜವಾಬ್ದಾರಿ ಎರಡೂ ಉಳ್ಳವರೂ ಇನ್ನೂ ಕೋಂಕಣ ಸುತ್ತಿ ಮೈಲಾರದ ಹಾದೀ ಹುಡುಕುವ ವ್ಯರ್ಥಪ್ರಯಾಸದಲ್ಲಿರುವದರಿಂದಲೂ ಅನ್ನಸಮಸ್ಯೆಯು ವಿಕ್ರಮನ ಬೇತಾಳದಂತೆ ಮೊದಲಿದ್ದ ಸ್ಥಳದಲ್ಲಿಯೇ ತೂಗಾಡುತ್ತಲಿದೆ. ಬೇತಾಳನಂತೆಯೇ ಅದು ತನ್ನ ಸ್ಥಳಬಿಟ್ಟು ಕದಲಿ ಕೆಲ ಹಾದಿಯವರೆಗೆ ಬರುವದು. ಆದರೆ ಕೊನೆಯವರೆಗೂ ಬರುವದಿಲ್ಲ; ಸಮಸ್ಯೆ ಬಿಡಿಸುವದಾಗುವದಿಲ್ಲ. ಈ ಸಮಸ್ಯೆಯನ್ನು ಸಮಗ್ರವಾಗಿಯೂ ಬಿಡಿಸಿದ್ದೇ ಆದರೆ ಧರ್ಮವು ಇನ್ನೊಂದು ಘಟ್ಟ ಮೇಲಕ್ಕೆ ಏರಲೇ ಬೇಕು. ಮಾನವನ ದೀನತೆಯೂ ಧರ್ಮದ ಅತಂತ್ರತೆಯೂ

ಅನ್ನದ ಅವ್ಯವಸ್ಥೆಯ ಮೂಲಕವಾಗಿಯೆ ಇದೆ ಎಂದು ಹೇಳಿದರೆ ಕೆಲವರಿಗೆ ದೇವರಿಗಿಂತ ಪ್ರಸಾದದ ಮಹತ್ವವೇ ಹೆಚ್ಚಾಗಿಬಿಟ್ಟಿತಲ್ಲ ಎಂದು ನಗೆ ಬರಬಹುದು. ಆದರೆ ಪ್ರಸಾದಭಕ್ತಿಯ ಅನುಭವವುಳ್ಳವರಾದರೂ ಆ ನಗೆಯ ಅವಿವೇಕವನ್ನು ತಿಳಿಯದೆ ಹೋಗಲಾರರು. ಎಲ್ಲ ಸಂಸ್ಕೃತಿ ನಾಗರಿಕತೆಗಳ ವೈಭವದ ಕಾಲವಲ್ಲಿ ಅನ್ನದ ಸಮೃದ್ಧಿಯಿತ್ತು, ಅನ್ನಕ್ಕೆ ಬೆಲೆಯಿತ್ತು, ಅನ್ನಕ್ಕೆ ಪಾವಿತ್ರ್ಯವಿತ್ತು, ಅನ್ನಕ್ಕೆ ದೇವತ್ವವಿತ್ತು ಎಂದು ಕಂಡುಬರುವದು. ಕಂಗಾಲತನವು ಹೆಚ್ಚಾದ ಕಾಲಕ್ಕೆ ಅನ್ನದ ಕೊರತೆಯನ್ನು ತತ್ವಜ್ಞಾನದ ಬಂಗಾಲಿತನದಿಂದ ಮುಚ್ಚಬೇಕಾಗುತ್ತದೆ. ಈ ಮಾತು ಜನಕ್ಕೆ ಎಷ್ಟು ಬೇಗ ತಿಳಿದೀತೋ ಅಷ್ಟು ಒಳ್ಳೆಯದು ಆ ಮಹತ್ವವನ್ನರಿತೇ ಈ ಪ್ರಬಂಧದಲ್ಲಿ ಆ ಸಮಸ್ಯೆಯ ಎಳೆ ಎಳೆಗಳನ್ನು ಬಿಡಿಸಿ ಮಾನವನ ಮಾನವನ್ನು ಮುಚ್ಚುವಂತೆ ಇನ್ನೊಂದು ವಸ್ತ್ರವನ್ನು ನೆಯ್ದು ತೋರಿಸುವ ಪ್ರಯತ್ನ ಮಾಡಲಾಗಿದೆ.

ಈ ಸಮಸ್ಯೆಯ ಮೂಲಶಕ್ತಿಗಳು ಎರಡು. ಅನ್ನ ಮತ್ತು ಹಸಿವು ಇವಕ್ಕೆ 'ಅರ್ಥ' ಮತ್ತು 'ಕಾಮ' ಎಂಬ ದೊಡ್ಡ ಹೆಸರುಗಳಿವೆ. ಅನ್ನ-ಹಸಿವುಗಳ ತೊಡಕನ್ನು ತೊಡಕಿಲ್ಲದೆ ಬಿಡಿಸುವ ಪ್ರಯೋಗಕ್ಕೆ 'ಧರ್ಮ' ಎಂದು ಹೆಸರು. ಈ ಧರ್ಮಶಕ್ತಿಯು ಹಸಿವು, ಅನ್ನಗಳ ತೊಡಕಿನಲ್ಲಿ ಸಿಗದಂತೆ ಮೀರಿನಿಂತ ಜ್ಞಾನದಲ್ಲಿದೆ. ಆ ಜ್ಞಾನವು ಎಷ್ಟು ಪೂರ್ಣವೋ ಅಷ್ಟು ಆ ಧರ್ಮವೂ ಪೂರ್ಣ, ಅಷ್ಟೇ ಹಸಿವು ಅನ್ನಗಳ ಸಮಸ್ಯೆಯಲ್ಲಿ ತೃಪ್ತಿ. ಆ ಮಾನದಿಂದಲೇ ಮಾನವನೂ ಮುಕ್ತ. ಈ ಜ್ಞಾನ, ಈ ಸಮತೂಕ, ಈ ಒಂದನ್ನೊಂದು ನುಂಗುವ ಎರಡು ಶಕ್ತಿಗಳು ಈ ನಾಲ್ಕಕ್ಕೇ 'ಪುರುಷಾರ್ಥ' ಎಂದು ಹೇಳುವರು. ಪ್ರಕೃತಿಯು ಪುರುಷನಿಗೆ ಹಾಕಿದ ಒಗಟವೇ ಇದು; ಇದನ್ನು ಬಿಡಿಸುವದರಲ್ಲಿ ಅವನ ಗಂಡಸುತನದ ಸಿದ್ಧಿಯಾಗುವದು. ಮಾತು ಬಹಳ ಚಿಕ್ಕದಾಗಿ ತೋರುವವು, ನಿಜ; ಆದರೆ ಈ ಸಮಸ್ಯೆಯು ಭೂಮಂಡಲವನ್ನು ವ್ಯಾಪಿಸಿದೆ. ಮಾನವನಿಗೆ ತಪಸು ಮಾತಹಚ್ಚಿದೆ. ಯುಗ ಯುಗ ಕಳೆದರೂ ಸಮಸ್ಯೆ ಸಮಸ್ಯೆಯಾಗಿಯೇ ಉಳಿದಿದೆ. ಆದರೆ ಸದ್ಯಕ್ಕೆ ಜಗಕ್ಕೆ ಬಂದಡರಿದ ಪ್ರಳಯಕಾಲವು ಈ ಸಮಸ್ಯೆಗೆ ಉತ್ತರವನ್ನು ಬೇಡುತ್ತಿದೆ. ಧರ್ಮದ ತೂಕ ತಪ್ಪಿದೆ. ಅಧರ್ಮದ

ಜೋಲಿ ಹೆಚ್ಚಾಗಿದೆ. ಗೆಲವೇ ಹೊಯ್ದಾಡುವಂತೆ ತೋರುತ್ತಿದೆ. ಮಾನವನೊಳಗಿನ ಪಶುವು ಗರ್ಜನೆ ಹಾಕುತ್ತಿದೆ. ದೇವಸ್ವರವು ಮೌನಶ್ರುತಿಯನ್ನು ಹಿಡಿದಿದೆ. ಅನ್ನದ ಸಮಸ್ಯೆಯು ಉತ್ತರವನ್ನು ಬೇಡುತ್ತದೆ. ಮಾನವನ ಜ್ಞಾನದ ಎತ್ತರ, ಧರ್ಮದ ಒರೆ, ಕಾಮದ ಆಳ, ಅನ್ನದ ಅಳತೆ, ಮುತ್ತೊಮ್ಮೆ ನಿರ್ಣಯವಾಗಬೇಕಾಗಿದೆ. ಈ ಸಮಸ್ಯೆಗೆ ಉತ್ತರವನ್ನು ಮನೆಮನೆಯಲ್ಲಿಯೂ ಮನವಮನದಲ್ಲಿಯೂ ಹುಡುಕುವ ಪ್ರಯತ್ನಗಳಾಗಲೆಂದು ಈ ಪ್ರಬಂಧ ಬರೆಯಲಾಗಿದೆ.

## ಅನ್ನದ ಅರ್ಥ

ಪ್ರಾಣಿಯು ಪ್ರಾಣ ಉಳಿಯಲೆಂದು ಹಸಿವೆಯ ಹೊಟ್ಟೆ ಉರಿಯನ್ನು ತಣಿಸಲಾಗಿ ಏನೇನನ್ನು ತಿನ್ನುವದೊ, ಉಣ್ಣುವದೊ, ಸೇವಿಸುವದೊ ಅದೆಲ್ಲವೂ ಅನ್ನ. ನೆಲವೆಲ್ಲವೂ ಅನ್ನ. ಮಣ್ಣು ಹುಳು-ಹುಪ್ಪಡಿಯ ಅನ್ನ. ಹುಳು-ಹುಪ್ಪಡಿ ಹಕ್ಕಿ ಪಕ್ಕಿಗಳ ಅನ್ನ. ಈ ಹಕ್ಕಿಪಕ್ಕಿ ಮನುಷ್ಯಾದಿ ಪ್ರಾಣಿಗಳ ಅನ್ನ. ವನಸ್ಪತಿಗಳ ಸೃಷ್ಟಿಯು ಮಣ್ಣು-ನೀರು ಗಾಳಿ-ಬೆಳಕನ್ನು ಉಂಡು ಬೆಳೆಯುತ್ತಿದೆ. ಈ ವನಸ್ಪತಿಯು ಕ್ರಿಮಿಕೀಟಕ ಮೊದಲುಗೊಂಡು ಮಾನವನ ವರೆಗೂ ಆಹಾರವಾಗಿದೆ. ಹಿಂಸ್ರಪಶುಗಳು ಒಂದನ್ನೊಂದು ಹಸಿವೆಯ ಉನ್ಮತ್ತತೆಯಲ್ಲಿ ಮಾನವನನ್ನೂ ತಿನ್ನುವದುಂಟು. ಮಾನವನಿಗೆ ಆಹಾರವಾಗದ ಪ್ರಾಣಿಯೆ ಇಲ್ಲ; ಪದಾರ್ಥವೂ ಇಲ್ಲ. ಹಸಿದಾಗ ಕಲ್ಲನ್ನೂ ತಿಂದು ಕರಗಿಸಬಲ್ಲ. ಹಸಿವೆಯ ರಾಕ್ಷಸವು ಅವನಲ್ಲಿ 'ಹಸಿನಾತ' ಎಂದು ಕೂಗುವಾಗ ಮನುಷ್ಯನನ್ನೇ ತಿನ್ನಲು ಮನುಷ್ಯನು ಹೇಸಿಲ್ಲ. ಅದರಲ್ಲಿ ಹೇಸುವದೇನಿದೆ! 'ಜೀವನ್ಪ್ರಾಣಿ ಪಶ್ಯತಿ'. ವಿಶ್ವಾಮಿತ್ರ ನಾಯಿಯನ್ನು ತಿಂದು ಬದುಕಿ ಮತ್ತೆ ದೊಡ್ಡ ತಪಸ್ವಿಯಾದ. ಉಣ್ಣುತಿನ್ನುವದರೊಳಗಿನ ಮಡಿವಂತಿಕೆ-ಹೇಸಿಕೆ ಶಾಸ್ತ್ರ-ಪ್ರತಿಷ್ಠೆಗಳೆಲ್ಲವೂ ಮಾನವನ ಸಂಸ್ಕೃತಿಯುಂತೆಯೆ ಅವನ ಜುಬ್ಬದ ಇತಿಹಾಸದ ಒಂದು ಭಾಗ ಮಾತ್ರ.

ಪಾರ್ಥಿವ ಅನ್ನವಷ್ಟೆ ಅನ್ನವಲ್ಲ. ನೀರಿಲ್ಲದೆ ಮನುಷ್ಯನು ಬಾಳಲಾರನು. ಬೆಳಕಿಲ್ಲದಿದ್ದರೆ ಬಾಡಿಹೋಗುವನು. ಗಾಳಿಯಿಲ್ಲದಿದ್ದರೆ ಉಸಿ

ರಡಗಿ ಹೋಗುವನು. ನಿಜವಾಗಿಯೂ ಮನುಷ್ಯನು ಕ್ಷಣಕ್ಷಣಕ್ಕೂ ಬಾಳು ವದು ಈ ನಾಲ್ಕರಿಂದಲೂ ಆಹುದು. ಗಾಳಿ-ಬೆಳಕು-ನೀರು ಇವೂ ಅನ್ನಗಳೇ. ನಮ್ಮ ಬಾಳು-ಸಾವುಗಳೆರಡೂ ಈ ಮಹಾಭೂತಗಳ ಆಧೀನವಾಗಿವೆ. ಹೀಗಿದ್ದರೂ ಭೂಮಿತಾಯಿಯೆ ಮಾನವನ ಅನ್ನದ ಅಕ್ಷಯ ನಿಧಿಯಾಗಿದೆ, ಎಂಬುದು ತೀರ ಪ್ರತ್ಯಕ್ಷವಾದ ಮಾತು. ಆದರೆ ಈ ಪ್ರತ್ಯಕ್ಷ ಮಾತೂ ಇನ್ನೂ ಸಾಕಷ್ಟು ಪ್ರಮಾಣಕ್ಕೆ ಬರದಿದ್ದುದರಿಂದಲೇ ಅನ್ನವು ಮಾನವನ ಪ್ರಾಣದೊಡನೆ ಚೆಕ್ಕಿನಾಟವನಾಡುತ್ತದೆ. ಭೂಮಿತಾಯಿಯು ಅಖಂಡವಾಗಿ ಮಾನವಕುಟುಂಬದ ಅನ್ನಕೋಶಗ್ರಹವಾಗದ ವರೆಗೆ ಅನ್ನಸಮಸ್ಯೆಯು ಬಿಡಿಸಬರದ ಗಂಟು; ಇಧರ್ಮವು ಕಟ್ಟಿಟ್ಟ ಮಾತು. ಯಾವುದೇ ಕಾರಣ ದಿಂದ ಯಾವುದೇ ನೆವದಿಂದ ಯಾವುದೇ ಅನಾನುಕೂಲತೆಯಿಂದ ಅಖಂಡ ಭೂಮಿಯು ಖಂಡಿತವಾಗಿರುವದೇ ಧರ್ಮವೃಕ್ಷದ ಮೂಲಕ್ಕೆ ಹಾಕಿದ ಕೊಡಲಿಯ ಪೆಟ್ಟು ಎಂದು ಬಲ್ಲವರ ತಿಳಿವಳಿಕೆಗೆ ತಕ್ಕಷ್ಟು ಬಂದಂತೆ ತೋರುವದಿಲ್ಲ. ಧಾರಿಣಿಯು ಅನೇಕ ತಂತ್ರವಾಗಿರುವವರೆಗೆ ಧಾರಣಾ ಲಕ್ಷಣವಾದ ಧರ್ಮವು ಸ್ವತಂತ್ರವಾಗುವದೇ ಸಾಧ್ಯವಿಲ್ಲ. ಧಾರಿಣಿಯನ್ನು ಏಕಧಾರಣೆಗೆ ತರುವದೇ ಧರ್ಮಸಂಸ್ಥಾಪನೆಯ ಪ್ರಥಮಕಾರ್ಯ. ಅಸ್ತಿ ವಾರವಿಲ್ಲದೆ ಕಟ್ಟಡವು ನಿಲ್ಲಲಾರದು. ಅನ್ನಸ್ವರೂಪಳಾದ ಭೂಮಿಯು ಧರ್ಮಕ್ಕೆ ಕೊಡುವ ಉತ್ತರವೇ ಇದು. ಒಂದು– ಭೂಮಿಗೂ ಧರ್ಮಕ್ಕೂ ಸಂಬಂಧವೇ ಇಲ್ಲ ಎಂದು ಒಪ್ಪಿಕೊಳ್ಳಬೇಕು, ಇಲ್ಲವೆ ಅನ್ನಪೂರ್ಣೆಯನ್ನು ಸ್ವತಂತ್ರ ಮಾಡುವವರೆಗೆ ಧರ್ಮವು ಅತಂತ್ರವಾಗಿರತಕ್ಕದ್ದು ಎಂದು ತಿಳಿದು ಕೊಳ್ಳಬೇಕು. ಧರ್ಮವು ಅರ್ಥಮೂಲವಾಗಿದೆ ಎಂದು ವಿಷ್ಣುಗುಪ್ತ ಚಾಣಕ್ಯನು ಹೇಳಿದ್ದರ ಅರ್ಥವೇ ಇದು. ಆಸಮುದ್ರಪರ್ಯಂತ ಪೃಥ್ವಿ ಯನ್ನು ಏಕಚಕ್ರಾಧಿಪತಿಯಾಗಿ ಆಳಬೇಕೆಂಬ ಹಿಂದಿನ ಹಿರಿಯರ ಆಶೆಯ ಅರ್ಥವೂ ಇದೆ.

ಸಾಯುವವರೆಗೆ ಹೇಗಾದರೂ ಮೈ ಉಳಿಸಿಕೊಳ್ಳುವಂತೆ ಏನಾದರೂ ತಿಂದು ಬಾಳುವದು ಅನ್ನದ ಸಮಸ್ಯೆಗೆ ಉತ್ತರವೇ ಅಲ್ಲ. ಹುಲ್ಲು ತಿಂದೂ ಬಾಳಬಹುದು. ಆದರೆ ಅದಕ್ಕೆ ಮನುಷ್ಯರಾಗಿ ಬದುಕುವುದು ಅವಶ್ಯವಿಲ್ಲ.

ಮಣ್ಣು ತಿನ್ನುವ ಪ್ರಾಣಿಗಳೂ ಇವೆ. ಅಮೃತ ಉಣ್ಣುವ ದೇವತೆಗಳ ಕಲ್ಪನೆಯೂ ಇದೆ. ಮಾನವನು ಮನದ ಮೂರ್ತಿಯಾಗಿ ಮೆರೆಯ ಬೇಕಾದರೆ ಅವನ ಅನ್ನದ ರೂಪವು ಎಷ್ಟೋ ನಿರ್ಮಲವಾಗಬೇಕು. ಅನ್ನ ನಿಧಿಯಾದ ಭೂಮಿಯನ್ನು ಪಾದಾಕ್ರಾಂತ ಮಾಡುವ ಕೆಲ ಮಾನವರ ವಿಧಾನದಿಂದಲೆ ಉಳಿದ ಮಾನವರೂ ಅರಣ್ಯಕರಾಗಿ ಪಶುಕೋಟಿಯನ್ನು ಸೇರಬೇಕಾಗುವದು. ಮಾನವನ ಅನ್ನದಿಂದ ಅವನ ಮನವನ್ನೂ ತಿಳಿಯ ಬೇಕಾಗಿದೆ. ಮನುಷ್ಯನ ವೈಯು ಅನ್ನದ ಪರಿಣಾಮ. ಅದೇಕೆ ವೈ ಕೂಡ ಅನ್ನವಲ್ಲವೇ? ಅಂತೆಯೇ ಜನರ ವೈಗಳನ್ನೂ ಆಳಿ ಅನ್ನವನ್ನು ಆಧೀನದಲ್ಲಿಟ್ಟುಕೊಳ್ಳಲು ಶಕ್ತಿಮದೋನ್ಮತ್ತರು ಹವಣಿಸುವದುಂಟು. ಲಪಷ್ಟೆ ಸ್ವತಂತ್ರವಾದರೆ ಸಾಲದು. ಮಾನವರ ವೈಗಳೂ ಪರಾಧೀನ ಉಳಿದಿರುವ ವರೆಗೆ ಅನ್ನದ ಇನ್ನೊಂದು ಕಗ್ಗಂಟು ಬಿಡಿಸಲಾಗದು.

---

## ೫. ಅಹಿಂಸೆ

ಮಹಾತ್ಮರು ಅಹಿಂಸಾಯೋಗಿಗಳು. ಕಾಯಾವಾಚಾಮನದಿಂದಲೂ ಆಚರಿಸುವವರು. ಮಹಾತ್ಮರ ಗುರಿಯು ಮೋಕ್ಷ; ದೇವರು ಸತ್ಯ, ಯೋಗ ಅಹಿಂಸಾ ಪ್ರೇಮ,ಪ್ರತ್ಯಕ್ಷಕಾರ್ಯ ಭಾರತಸ್ವಾತಂತ್ರ್ಯ; ಉದ್ದೇಶ ಭೂತ ಹಿತಹೀನದೀನ ಜನಸೇವೆ. ಇವಿಷ್ಟು ಮಾತುಗಳಲ್ಲಿ ಅವರ ಜೀವನದ ತಿರುಳೆಲ್ಲ ಬಂದುಬಿಡುವದು. ಈ ಲೇಖನದಲ್ಲಿ ಅವರ ಅದ್ವಿತೀಯವಾದ ಅಹಿಂಸಾ ಪ್ರೇಮಯೋಗದ ವಿಷಯವಾಗಿ ಅವರ ವಚನಗಳಿಂದಲೆ ಸಂಗ್ರಹಿಸಿದ ಸಂಗತಿಗಳನ್ನು ಕೊಡಲಾಗಿದೆ.

ಅಹಿಂಸಾಪ್ರೇಮಯೋಗವು ಅಪೂರ್ವವಾಗಿದೆ. ಹೀಗೆಂದಷ್ಟಕ್ಕೆ ಇದು ತೀರ ಹೊಸದೆಂದು ತಿಳಿಯಲಾಗದು. ಪಾತಂಜಲಯೋಗದಲ್ಲಿ ಸಾರ್ವಭೌಮ ಧರ್ಮ ಲಕ್ಷಣಗಳಲ್ಲಿ ಅಹಿಂಸೆಯೊಂದು ಎಂದು ಹೇಳಿದ್ದಿದೆ. ತ್ರಿಗುಣಾತೀತನ

ಗುಣಾವಳಿಯಲ್ಲಿ ಅಹಿಂಸೆಗೆ ಸ್ಥಾನವಿರುವದಾಗಿ ಭಗವದ್ಗೀತೆಯಿಂದ ಕಂಡುಕೊಳ್ಳಬಹುದು. ಬುದ್ಧನ ಅವತಾರವೂ ಜಿನಧರ್ಮವೂ ಅಹಿಂಸೆಯನ್ನೆ ಸಾರುವವು. ಅಹಿಂಸೆಯು ಬ್ರಹ್ಮತೇಜೋಬಲವು. ಇಷ್ಟಿದ್ದಾಗ್ಯೂ. ಅಹಿಂಸೆಯು ಹಿಂದೂಧರ್ಮದ ಲಕ್ಷಣವಲ್ಲ, ಬುದ್ಧಧರ್ಮ ಲಕ್ಷಣವೆಂದು; ಅಹಿಂಸೆಗೆ ಧಾರ್ಮಿಕ ಜೀವನದಲ್ಲಿ ಸ್ಥಾನವಿದೆ, ರಾಜಕೀಯ ಜೀವನದಲಿ ಸ್ಥಾನವಿಲ್ಲವೆಂದು; ಅಹಿಂಸೆಯು ದುರ್ಬಲರ ಗುಣವೆಂದು; 'ಅಹಿಂಸಾ ಪರಮೋ ಧರ್ಮಃ' ಎಂಬ ಸೂಕ್ತಿಯು ಮೂಲತಃ ಪರಮೋಽಧರ್ಮಃ ಎಂದರೆ ಪರಮೋ ಅಧರ್ಮಃ ಎಂದು ಇತ್ತೆಂದು; ವಚನಶೂರ ಬ್ರಾಹ್ಮಣರ ಹಾಗು ವಿರಕ್ತ ಸನ್ಯಾಸಿಗಳ ಹಾದಿ ಅಹಿಂಸೆಯೆಂದು; ಇಂತು ಮುಂತಾಗಿ ಪ್ರತಿಪಾದಿಸುವ, ಸಾರುವ, ಪಂಡಿತರ ಸಂಖ್ಯೆ ಕಡಿಮೆಯಿಲ್ಲ. ಮಹಾತ್ಮರು ಮಹಾ ಮೂರ್ಖರಾಗಿರುವರೆಂದು ಅಲ್ಲದ ಕೆಲಸದಲ್ಲಿ ಅವರು ಸಲ್ಲದ ರೀತಿಯಲ್ಲಿ ಕೈಯಿಕ್ಕುತ್ತಿರುವರೆಂದು ಗೊಣಗುಟ್ಟುವ ಪ್ರಜ್ಞಾವಾದಿಗಳೂ ವಿಪುಲರಾಗಿದ್ದಾರೆ. ಮಹಾತ್ಮರಿಗೆ ಜಯವು ದೊರೆತದ್ದಾದರೆ ಅವರನ್ನು ಹೊಗಳುವವರಲ್ಲಿ ಸಂದೇಹವಿಲ್ಲ. ಬಿದ್ದೆತ್ತಿಗೆ ಆಳಿಗೊಂದು ಕಲ್ಲಾದರೆ ಗೆದ್ದೆತ್ತಿನ ಬಾಲ ಹಿಡಿಯುವದೂ ಸಹಜವಾಗಿದೆ. ಜಯದ ಮಹಿಮೆಯೆ ಹಾಗಿದೆ. ಆದರೂ ಅಹಿಂಸಾಪ್ರತಿಪಾದನೆಯಿಂದ ಧರ್ಮಸಂಕರವಾಗುತ್ತಿದೆ ಎಂದು ಧರ್ಮಮೂರ್ತಿಗಳು, ಹುಚ್ಚುತನವು ಪೆದ್ದತನವು ಕಾಲಿಗೆ ಬರುತ್ತಿದೆ ಎಂದು ರಾಜನೀತಿನಿಪುಣರು, ವ್ಯರ್ಥವಾಗಿ ಹಿಂಸೆಗೆಡೆಯಾಗುವದೆಂದು ಮಂದಮಾರ್ಗಿಗಳು, ಹೇಡಿತನವು ಬೇರೂರುವದೆಂದು ಕ್ರಾಂತಿಕಾರಕರು– ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಅಂತೂ ಅಹಿಂಸಾಮಾರ್ಗವನ್ನು ಹೀಯಾಳಿಸುತ್ತಲೂ, ಸಾಶಂಕರಾಗಿ ನೋಡುತ್ತಲೂ, ಪ್ರತ್ಯಕ್ಷಾಪ್ರತ್ಯಕ್ಷವಾಗಿ ವಿರೋಧಿಸುತ್ತಲೂ ಇದ್ದಾರೆ. ಇಂಥ ವಿರೋಧಿಗಳಲ್ಲಿ ಅಹಿಂಸೆಗೆ ಗೆಲವಾದರೆಯೆ ಮಹಾತ್ಮರ ಮಹಾತ್ಮ್ಯವೂ ಅಹಿಂಸೆಯ ಸಾಮರ್ಥ್ಯವೂ ಸಿದ್ಧವಾಗುವದು. ಅಹಿಂಸಾಬೋಧೆಯು ಮಹಾತ್ಮರು ಟಾಲ್‌ಸ್ಟಾಯನೆಂಬ ಪಾಶ್ಚಿಮಾತ್ಯನಿಂದ ಕಲಿತುದಾದ್ದರಿಂದ ಅದು ತ್ಯಾಜ್ಯವೆಂದು ಹೇಳುವ ಶುದ್ಧ ಸ್ವದೇಶಿವ್ರತವುಳ್ಳವರೂ ಇದ್ದಾರೆ. ಹೀಗಾಗಿ ಮಹಾತ್ಮರ ಅಹಿಂಸಾಮಾರ್ಗವು ಅಪೂರ್ವವಾಗಿದೆ.

ಅಹಿಂಸೆಯು ಬಗ್ಗೆ ಮಹಾತ್ಮರೆ ಏನು ಹೇಳುವರೋ ಕೇಳುವಾ:— ಅಹಿಂಸೆಯು ಸಕಲ ಧರ್ಮಗಳ ಸಾರವಾಗಿದೆ. ಹಿಂದೂಧರ್ಮದ ಜೀವಾಳವಾಗಿದೆ. ಸತ್ಯವನ್ನು ಕಾಣಲು ಇದರ ಹೊರ್ತು ಬೇರೆ ಹಾದಿಯಿಲ್ಲ. ಅಹಿಂಸೆಯು ಬಲಿಷ್ಠರ ಬಲವು. ಅಹಿಂಸೆಯು ಬರಲಿರುವ ಯುಗದ ಧರ್ಮವು. ಭಾರತವು ಆ ಧರ್ಮವನ್ನು ಬೋಧಿಸಲು ದೇವನಿಂದ ನಿಯೋಜಿತವಾದ ದೇಶವು. ಅನೇಕ ಧರ್ಮಗಳಿಂದ ವಿವಿಧ ಜ್ಞಾನಗಳಿಂದ ತಾವು ಅದನ್ನು ತಿಳಿದುಕೊಂಡಿದ್ದರೂ ತಮ್ಮ ಅಹಿಂಸಾಮಾರ್ಗವು ತಮ್ಮ ಅನುಭವದಿಂದಲೆ ಕಂಡುಕೊಂಡುದಾಗಿದೆ.

ಮಹಾತ್ಮರ ಅಹಿಂಸಾಮಾರ್ಗದ ವಿಷಯವಾಗಿ ಜನರಿಗಿರುವ ಸಂಶಯದ ನೆಲೆಯಾದರೂ ಏನು? ಬ್ರಿಟಿಷ ಸರಕಾರದವರು ಭಯಂಕರ ಶಸ್ತ್ರಾಸ್ತ್ರಗಳಿಂದ ಸುಸಜ್ಜಿತರು. ಬಡತನದಿಂದ, ಪರದಾಸ್ಯದಿಂದ, ಶಸ್ತ್ರಹೀನತೆಯಿಂದ, ಹೀನದೈನ್ಯದಿಂದ ಕಂಗೆಟ್ಟು ಮುಂಗೆಟ್ಟವರು ಭಾರತೀಯರು. ಇಂಥ ಭಾರತೀಯರು ಇಂಥ ಬ್ರಿಟಿಷರಿಂದ ಹಿಂದ ಸ್ಥಾನದಂಥ ದೊಡ್ಡ ದೇಶದ ಸ್ವಾತಂತ್ರ್ಯವನ್ನು ಅಹಿಂಸೆಯಿಂದ ಎದುರಿಸಿ ಗೆದ್ದುಕೊಳ್ಳುವದು ಹೇಗೆ? ಅಹಿಂಸೆಯಿಂದ ಇದುವರೆಗೆ ಯಾರೂ ದೇಶ ಸ್ವಾತಂತ್ರ್ಯವನ್ನು ಗೆದ್ದಿಲ್ಲ. ಅಹಿಂಸೆಯೆಂಬ ಧಾರ್ಮಿಕ ಭ್ರಾಂತಿಯಿಂದ ವ್ಯರ್ಥವಾಗಿ ಜನರು ವಿನಾಶಹೊಂದುವರು. ದುಷ್ಟ ಜನರನ್ನು ಪ್ರೀತಿಯಿಂದ ಗೆಲ್ಲುವದು ಸಾಧ್ಯವಿಲ್ಲ. ವ್ಯಕ್ತಿಗಳು ವ್ಯಕ್ತಿಗಳ ಅಂತಃಕರಣವನ್ನು ಗೆಲ್ಲಬಹುದು; ಒಂದು ಜನಾಂಗವು ಇನ್ನೊಂದು ಜನಾಂಗದಿಂದ ಸಾಮ್ರಾಜ್ಯವನ್ನು ಗೆಲ್ಲುವದು ಅಸಾಧ್ಯ.

ಇದಕ್ಕೆ ಮಹಾತ್ಮರ ಹೇಳಿಕೆ ಹೀಗಿದೆ:— ಬ್ರಿಟಿಶರು ಹಿಂಸಾಸಿದ್ಧರು. ಅವರನ್ನು ಹಿಂಸೆಯಿಂದ ಗೆಲ್ಲುವದು ಸಾಧ್ಯವಲ್ಲ, ಭಾರತೀಯರು ಗೆಲ್ಲುವದಂತೂ ತೀರ ಅಸಂಭವ. ಭಾರತೀಯರ ಧಾರ್ಮಿಕ ಇತಿಹಾಸದಲ್ಲಿ ಅಹಿಂಸಾಬಲವನ್ನು ಪ್ರಕಟಿಸಿದ ಅನೇಕಾನೇಕ ಸತ್ಪುರುಷರಾಗಿ ಹೋಗಿದ್ದಾರೆ. ನಮ್ಮ ರಕ್ತದಲ್ಲಿ ಅಹಿಂಸಾಬಲವಿದೆ. ಜಗತಿಗೆ ಹಿಂಸೆಯು ಬೇಸರ ಬಂದಿದೆ. ಅನಿರ್ವಾಹವಾಗಿ ಅದು ಆ ಹಾದಿಯಲ್ಲಿ ಹೋಗುತ್ತಿದೆ. ನಾವು ಹೊಸ ಹಾದಿಯನ್ನು ತೋರಿಸೋಣ. ನಿಜವಾದ ಒಬ್ಬ ಅಹಿಂಸಾಯೋಗಿಯೂ ಹಾದಿಯನ್ನು

ತೋರಿಸಲು ಸಮರ್ಥನಾಗುವನು. ಮೇಲಾಗಿ, ಹಿಂಸೆಯಿಂದ ಗೆದ್ದ ಯಾವ ರಾಜ್ಯವೂ ಸಾಮಾನ್ಯರ, ದೀನಹೀನರ ಹಿತವನ್ನು ಸಾಧಿಸಲಾರದು. ಪ್ರಜಾ ಸ್ವಾತಂತ್ರ್ಯವುಳ್ಳ ಯಾವ ರಾಜ್ಯವನ್ನೂ ಪ್ರಜೆಗಳ ಹಿತಕ್ಕಾಗಿಯೆ ಸ್ಥಾಪಿಸು ವದಾದರೆ ಅದು ಅಹಿಂಸೆಯಿಂದಲೆ ಶಕ್ಯವು. ಯಾರೋ ಕೆಲವರು ಹೇಗೋ ಹಿಂಸೆಯನ್ನು ಮಾಡಿ ಎಲ್ಲಿಯೋ ರಾಜ್ಯವನ್ನು ಗೆದ್ದರೆ ಅದಾದರೂ ಯಾರಿಗೋ ಆಗುವದು. ದುರ್ಬಲರಾದ ಹೀನದೀನರ ಸಂರಕ್ಷಣೆಯು ಅದ ರಿಂದಾಗಲಾರದು.

ಅಹಿಂಸೆ ಹಿಂಸೆಗಳ ಬಗ್ಗೆ ಇರುವ ಕೆಲವು ತಪ್ಪು ತಿಳುವಳಿಕೆಗಳೇನೆಂಬು ದನ್ನು ಹೇಳುವದಗತ್ಯವಾಗಿದೆ. ಅಹಿಂಸೆಯೆಂದರೆ ಎರಡನೆಯವರಿಗೆ ಏನೂ ಉಪದ್ರವ ಮಾಡದೆ ಇರುವದು; ಕೊಲ್ಲುವದೊತ್ತಟ್ಟಿಗಿರಲಿ ಕಾಯಾ, ವಾಚಾ, ಮನಸಾ ಎರಡನೆಯುವರಿಗೆ ಅಹಿತವನ್ನು ಅಪೇಕ್ಷಿಸಬಾರದು; ಹಾಗೆ ಆಡ ಬಾರದು, ಮಾಡಬಾರದು; ಎರಡನೆಯವರು ಏನು ಮಾಡಿದರೂ ತಡಕೊ ಳ್ಳಬೇಕು, ಹಾಗೆ ಮಾಡುವಲ್ಲಿ ಸತ್ತರೂ ಅಡ್ಡಿಯಿಲ್ಲ. ಹೀಗೆ ಮಾಡುವದು ಶುದ್ಧ ಪೆದ್ದತನ, ಹೇಡಿತನ, ಹೆಂಗಸುತನ, ಮೂಢತನ; ಇದು ಹಾಳಾಗುವ ವರ ಹಾದಿ. ಹೀಗಾರಾದರೂ ತಾವಿರುವರೆಂದರೆ ಇಲ್ಲವೆ ತಿಳಿದಿದ್ದರೆ ಅದು ಶುದ್ಧಭ್ರಮೆ. ಇನ್ನು ಹಿಂಸೆಯೋ! 'ಜೀವೋ ಜೀವಸ್ಯ ಜೀವನಂ' ಜೀವ ಗಳನ್ನು ತಿಂದೆ ಜೀವಗಳು ಜೀವಿಸುವವು, ಮತ್ತು Struggle for existence ಬಾಳುವೆಗಾಗಿ ಬಡಿದಾಡದೆ ಗತಿಯಿಲ್ಲವೆಂಬ ಮಹಾವಾಕ್ಯಗಳು ಹಿಂಸೆಯು ಸಹಜವಾಗಿದೆ ಎಂದು ಬೋಧಿಸುವವು; ರಾಮಕೃಷ್ಣಾದಿಗಳು ಹಿಂಸೆ ಯನ್ನು ಮಾಡಿದ್ದಾರೆ; ಯಜ್ಞಕ್ಕಾಗಿ ಹಿಂಸೆಯೇ ಧರ್ಮ್ಯವೆಂದು ಗಣಿಸಲ್ಪ ಟ್ಟಿದೆ; ಸೃಷ್ಟಿಯಲ್ಲಿ ಹಿಂಸೆಯು ತುಂಬಿದೆ; ದೇವರೂ ಹಿಂಸೆಯನ್ನು ಮಾಡು ತ್ತಾನೆ; ಕ್ಷತ್ರಿಯರಿಗೆ ಯುದ್ಧವು ಧರ್ಮವಾಗಿದೆ.

ಮಹಾತ್ಮರು ಅಹಿಂಸಾಮೀಮಾಂಸೆಯನ್ನು ಹೀಗೆ ಮಾಡುತ್ತಾರೆ:— ಹಿಂಸೆ ಸಂಹಾರಗಳನ್ನು ಮಾಡುವ ಅಧಿಕಾರವು ಸರ್ವಜ್ಞನಾದ ಸೃಷ್ಟಿಕರ್ತ ನಾದ ದೇವರಿಗೆ ಇದೆಯೆ ಹೊರ್ತು ಮಾನವನಿಗಿಲ್ಲ. ಮಾನವನು ಸರ್ವಜ್ಞ ನಾಗಿದ್ದರೆ ಯಾವುದು ಬೇಕಾದುದು ಯಾವುದು ಬೇಡಾದುದು ಎಂಬುದು

ಅವನಿಗೆ ತಿಳಿಯಬಹುದಾಗಿತ್ತು; ಅವನು ಬೇಡಾದುದನ್ನು ಸಂಹಾರಮಾಡ ಬಹುದಾಗಿತ್ತು. ಕಟ್ಟಲಾರದವನು ಕೆಡಿಸಬಾರದು. ಸತ್ತವರನ್ನು ಹುಟ್ಟಿಸ ಲರಿಯದವನ್ನು ಇದ್ದವರನ್ನು ಕೊಲ್ಲಬಾರದು. ಮಾನವನಿಗಿದ್ದ ಸತ್ಯ ದರ್ಶನವು ಅಪೂರ್ಣವಾಗಿದೆ. ತನ್ನ ಸತ್ಯಕ್ಕಾಗಿ ಎರಡನೆಯವರನ್ನು ಹಿಂಸೆ ಪಡಿಸುವದು ಯೋಗ್ಯವಲ್ಲ. ಇಷ್ಟೇ ಅಲ್ಲ, ಹಿಂಸಾಬುದ್ಧಿಗೆ ಪ್ರಾರಂಭ ವಾಗುತ್ತಲೆ ಸತ್ಯದ ದರ್ಶನವಾಗುವದು ನಿಂತುಬಿಡುವದು. ಸತ್ಯದರ್ಶನಕ್ಕೆ ಅಹಿಂಸೆಯಿಲ್ಲದೆ ಮಾರ್ಗವಿಲ್ಲ. ಹಿಂಸೆಗೆ ಕ್ರೋಧವು ಬೇಕು. ಕ್ರೋಧದಿಂದ ಆತ್ಮನಾಶವಾಗುವದು. ಕೋಪವೆಂಬುದು ಪಾಪದ ನೆಲೆಗಟ್ಟು. ಕ್ರೋಧವು ವಿವೇಕಕ್ಕೆ ವಿಘಾತಕ. ಕ್ರೋಧವು ಸಂತೋಷವನ್ನು ಹಾಳು ಮಾಡುವದು, ಶಾಂತಿಯನ್ನು ಕೆಡಿಸುವದು. ಕ್ರೋಧವು ಕಂಗೆಡಿಸುವದು– ಸತ್ಯವನ್ನು ಮರೆ ಮಾಡುವದು. ವಿರೋಧಿಗಳನ್ನುಂಟುಮಾಡುವದು ಅಹಿಂಸೆಯೆಂದರೆ ಪ್ರೇಮ, ಕಾರುಣ್ಯ, ದಯೆ. ಅಹಿಂಸೆಯು ನಿಷೇಧವನ್ನಷ್ಟೆ ಹೇಳುವದಿಲ್ಲ ವಿಧಿಯನ್ನೂ ಹೇಳುವದು. ಸರ್ವೇ ಸುಖಿನಃ ಸಂತು. ಎಲ್ಲರಿಗೂ ಹಿತವಾಗಲಿ ಎಂದು ಎಲ್ಲರ ಹಿತಕ್ಕಾಗಿ ಅಹಿಂಸೆಯು ದೇಹಾಯಾಸವನ್ನು ಪರಿಗಣಿಸದೆ ದುಡಿಯುವದು. ಅನ್ಯಾಯಕ್ಕೆ ಪ್ರತೀಕಾರವನ್ನು ಮಾಡುವದು; ಅನ್ಯಾಯಕ್ಕೆ ನೆಲೆ ದೊರೆಯ ದಂತೆ ಅದರೊಡನೆ ಅಸಹಕಾರವನ್ನು ಮಾಡುವದು. ಅಹಿಂಸಾಬಲವೆ ಸತ್ಯಾ ಗ್ರಹಬಲವು, ಆತ್ಮಬಲವು. ಅಹಿಂಸೆಗೆ ತಾಳ್ಮೆ ಬೇಕು, ಸೈರಣೆ ಬೇಕು, ಕ್ಷಮೆ ಬೇಕು. ಅಹಿಂಸೆಯು ಹೇಡಿಗಳಿಗೆ ಸಾಧ್ಯವಿಲ್ಲ. ಕ್ಷತ್ರಿಯರ ಧರ್ಮಯುದ್ಧವು ಅಹಿಂಸೆಯಲ್ಲದಿದ್ದರೂ ಅದು ಕೇವಲ ಹಿಂಸೆಯಲ್ಲ. ರಣಾಂಗಣದಲ್ಲಿ ಸ್ವಸಂರಕ್ಷ ಕವಾದ ಹಿಂಸೆಯು ಅನಿವಾರ್ಯವಾದುದು. ಕದ್ದು ಕೊಲೆ ಮಾಡುವದು ಯಾವ ಉದ್ದೇಶದಿಂದ ಮಾಡಿದರೂ ಅದು ಹಿಂಸೆಯೆ; ಅದೇ ಅಧರ್ಮವು. ಜನರಲ್ಲಿ ಅದು ಭೀತಿಯನ್ನೂ, ಅವಿಶ್ವಾಸವನ್ನೂ ಉಂಟು ಮಾಡುವದು. ಹೇಡಿತನವು ಅಕ್ಷಮ್ಯವಾಗಿದೆ. ಧರ್ಮಯುದ್ಧವು ಕ್ಷಮ್ಯವಾಗಬಹುದು. ಕೊಲೆಪಾತಕತನವು ಕತ್ತಲೆಯ ಹಾದಿ. ದೇಹಯಾತನೆಗೆ ಅಂಜುವವನು, ಮರಣಕ್ಕೆ ಹೆದರುವವನು, ಸ್ವಾರ್ಥಿಯು, ಕ್ರೋಧಸ್ವಭಾವವುಳ್ಳವನು, ದುಷ್ಟ ಸ್ವಭಾವದವನು ಅಹಿಂಸಾಮಾರ್ಗಿಯಾಗುವದು ಸಾಧ್ಯವಿಲ್ಲ.

ಹಿಂದುಸ್ತಾನದವರಿಗೆ ಸದ್ಯಕ್ಕೆ ಮಹಾತ್ಮರು ಅಹಿಂಸಾ ಮಾರ್ಗವನ್ನು

ಬೋಧಿಸಿದುದು ಮುಕ್ಕಾಲು ಮೂರು ಪಾಲು ರಾಜನೀತಿಯೆಂದು. ಅಹಿಂಸೆಯು ಬ್ರಿಟಿಶ ಸಾಮ್ರಾಜ್ಯವಾದಿಗಳಿಗೆ ಗೊತ್ತಿಲ್ಲದ ಅಸ್ತ್ರವು. ಬ್ರಿಟಿಶ ಸಾಮ್ರಾಜ್ಯಕ್ಕೂ ಜಗತ್ತಿನಲ್ಲಿ ಶತ್ರುಗಳಿಲ್ಲದೆ ಇಲ್ಲ. ಅವರೂ ಜನರ ಅಪ್ರೀತಿಗೆ ಹೆದರುತ್ತಾರೆ. ತಾವು ಕ್ರೂರರಲ್ಲ ಅನ್ಯಾಯಿಗಳಲ್ಲ ಎಂದು ಸಾರುತ್ತಾರೆ. ಅಹಿಂಸಾವ್ರತಿಗಳನ್ನು ಹಿಂಸಿಸಿದರೆ ಸಾಮ್ರಾಜ್ಯದ ಪತ್ತು ಹಾಳಾಗುವದು, ಅಪ್ರೀತಿ ಬೆಳೆಯುವದು, ಶತ್ರುಗಳು ಪ್ರಬಲರಾಗುವರು. ಬ್ರಿಟಿಶರ ಹಿಂಸಾಬಲಕ್ಕಿಂತ ನಮ್ಮ ಅಹಿಂಸಾಬಲವು ಹೆಚ್ಚಾದರೆ ನಾವು ಗೆಲ್ಲುವದರಲ್ಲಿ ಸಂಶಯವಿಲ್ಲ. ಆದರೆ, ಅಹಿಂಸೆಯು ತ್ರಿಕರಣಪೂರ್ವಕವಾಗಿ ಬೇಕು. ರಾಜನೀತಿಯೆಂದು ಅದನ್ನು ಅಪ್ರಮಾಣಿಕರಾಗಿ ಆಚರಿಸಿದರೆ ಅದರ ಫಲವು ದೊರೆಯಲಾರದು. ದೇಹಪೋಷಣೆಯಲ್ಲಿಯೂ, ಪಶುವ್ಯಾಘ್ರಕೀಟಕಾದಿಗಳಿಂದ ಸ್ವಸಂರಕ್ಷಣ ಮಾಡಿಕೊಳ್ಳುವದರಲ್ಲಿಯೂ ಸ್ವಲ್ಪ ಹಿಂಸೆಯು ಅನಿವಾರ್ಯವಾದರೂ ಅಹಿಂಸೆಯೆ ಜೀವನದ ಗುರಿ, ಪ್ರಪಂಚದ ಆಧಾರ, ಧರ್ಮದ ತಿರುಳು ಎಂಬುದನ್ನು ನಾವು ಮರೆಯಲಾಗದು. ಎಲ್ಲ ಸರಕಾರದವರು ಹೇಳಿಕೊಳ್ಳುವ ಶಾಂತಿ, ವ್ಯವಸ್ಥೆ, ನ್ಯಾಯಗಳು ಅಹಿಂಸೆಯಿಲ್ಲದೆ ಅಶಕ್ಯ. ಅಂತೂ ಮಹಾತ್ಮರ ಅಹಿಂಸಾ ಮಾರ್ಗದಲ್ಲಿ ಕಷ್ಟಸಹನೆಯು ತಪವು, ಸತ್ಯಾಗ್ರಹವು ವ್ರತವು, ಪ್ರೇಮವು ಅಂತಃಶಕ್ತಿಯು, ದೈವಭಕ್ತಿಯು ಬೆಂಬಲವು, ಅನ್ಯಾಯದೊಡನೆ ಅಸಹಕಾರವು ತಪ್ಪದ ವಿಧಿಯು, ಅಧರ್ಮವಾದ ಶಾಸನಗಳ ಉಲ್ಲಂಘನವು ಅವಶ್ಯಕರ್ಮವು, ನಿರ್ಭಯ ಧೀರತನವು ಅದರ ಉಸುರು. ಜನಾಂಗಗಳ ಜೀವನೇತಿಹಾಸದಲ್ಲಿ ಈ ಅಹಿಂಸಾ ಮಾರ್ಗವು ಅಪ್ರತಿಮವಾಗಿದೆ. ಜಯಶಾಲಿಯಾಗಿದ್ದಾದರೆ ಜಗತ್ತಿಗೆ ನಿರುಪಮವಾದ ಸುಖವನ್ನು ಕೊಡುವದಾಗಿದೆ. ಈ ಬಲವು ನಮ್ಮಲ್ಲುಂಟಾಗಬೇಕಾದರೆ ಕೆಲ ಕಾಲವಾದರೂ, ನಾವು ನಾಲಿಗೆಗೆ ಆಧೀನರಾಗಬಾರದು, ಕಾಮವಾಸನೆಯು ಅಳಿಯಬೇಕು, ಅಸ್ತೇಯ ಅಪರಿಗ್ರಹಾದಿ ಲಕ್ಷಣವಾದ ಬಡತನವು ಜೀವನವಾಗಬೇಕು, ಸತ್ಯವು ದೈವತವಾಗಬೇಕು. ಭಾರತೀಯರ ಪೂರ್ವಚರಿತ್ರವನ್ನು ನೋಡಿದರೆ ಇದೇನು ಅನಪೇಕ್ಷಿತವಲ್ಲ. ಹಾಗಾದರೆ ಇದು ಸಾಧ್ಯವಾದೀತೇ?

ಸತ್ಯಾಗ್ರಹಾಶ್ರಮದ ನಿಯಮಾವಳಿಯಲ್ಲಿ ಹೀಗೆ ಬರೆದಿದೆ:—

“ಸತ್ಯ ಹಿಂಸೆಗಳ ಅನುಯಾಯಿಯು ಪ್ರಜಾಕಂಟಕನನ್ನೂ ಪ್ರೇಮ

ದಿಂದಲೆ ಗೆಲ್ಲುವನು. ಪ್ರಜಾಕಂಟಕನ ಇಚ್ಛೆಯಂತೆ ಅವನು ನಡೆಯುವದಿಲ್ಲ, ಆದರೆ ಶಾಸನೋಲ್ಲಂಘಕ್ಕೆ ಮರಣವನ್ನೂ ಶಿಕ್ಷೆಯನ್ನಾಗಿ ಭೋಗಿಸಲು ಸಿದ್ಧನಾಗಿ ಪ್ರಜಾಕಂಟಕನನ್ನೆ ಪ್ರೇಮದಿಂದಲೆ ಗೆಲ್ಲುವನು."

---

## ೬. ನಯಶಾಸ್ತ್ರವು.*

೧. ಶಾಸ್ತ್ರಾನುಸಾರ ನಾವು ನಡೆಯುತ್ತೇವೆಂದು, ಶಾಸ್ತ್ರಗಳು ನಮ್ಮ ಮುಂಚೆ ಹುಟ್ಟಿದವೆಂದಾಗುವದಿಲ್ಲ! ಇದೇ ಮಾತು ಎಲ್ಲ ಬಗೆಯ ಸಂಸ್ಥೆ ವ್ಯವಸ್ಥೆಗಳಿಗೂ ಹತ್ತುವದು. ಯಾವ ಶಾಸ್ತ್ರವಾದರೇನು? ಯಾವ ಸಂಸ್ಥೆಯಾದರೇನು? ಮನುಷ್ಯನು ಮನುಷ್ಯನ ಪುರುಷಾರ್ಥ ಸಾಧನೆಗಾಗಿಯೇ ಅವುಗಳನ್ನು ನಿರ್ಮಾಣ ಮಾಡಿದ್ದಲ್ಲವೇ? ಪುರುಷಾರ್ಥಸಿದ್ಧಿಗೆ ಅವು ಅಡ್ಡ ಬರಹತ್ತಿದರೆ, ಅವು ಎಷ್ಟು ಹಳೆಯವಿದ್ದರೇನಾಯಿತು? ಅವುಗಳನ್ನ ನಾವು ತಿದ್ದಬೇಕು, ಮುರಿಯಬೇಕು, ಬದಲಿಸಬೇಕು. ಸಮಾಜವಾದರೂ ಇದಕ್ಕೆ ಒಪ್ಪಲಿಕ್ಕೆಬೇಕು; ಮತ್ತೂ ಒಪ್ಪೇ ಒಪ್ಪಿಕೊಳ್ಳುವದು. ಯಾಕಂದರೆ, ಸಮಾಜವೆಂದರೇನು ಕಲ್ಲುಬಂಡೆಯಲ್ಲ; ಅದೊಂದು ಹರಿಯುವ ಹೊಳೆಯು, ತನ್ನ ಪ್ರವಾಹಕ್ಕೆ ಯಾವ ದಿಕ್ಕು ಒಳಿತೆಂಬದು ಅದಕ್ಕೂ ತಿಳಿಯುತ್ತದೆ. ಆದಕಾರಣ ಸಮಾಜದ ಕೃತಿಗಳಿಂದ ಸಂಸ್ಥೆಗಳು, ಸಮಾಜದ ಪುರೋವೃದ್ಧಿಯನ್ನು ಮಾಡದಾಗುತ್ತಲೇ, ಆ ಸಂಸ್ಥೆಗಳನ್ನು ಕರಗಿಸಿ ಬೇರೆ ಸಂಸ್ಥೆಗಳ ಎರಕವನ್ನು ಹೊಯ್ಯಬೇಕಾಗುತ್ತದೆ.

೨. ಸಂಸ್ಥೆಗಳಂತೆಯೇ ಸಂಸ್ಥಾನದ ಅಥವಾ ರಾಜ್ಯದ ಕಥೆಯು. ಸಂಸ್ಥಾನವು ಸಮಾಜಪುರುಷನ ನೆರಳು. ಸಮಾಜಪುರುಷನ ನಡೆನುಡಿಯಂತೆ ಸಂಸ್ಥಾನವು ಅಭಿನಯಿಸುತ್ತಿರಬೇಕು. ಇದನ್ನು ಬಿಟ್ಟು, ಸಂಸ್ಥಾನವು ಸಮಾಜಪುರುಷನ ದೇಹವಾಗಿ ಅವನಿಗೆ ನಿರ್ಬಂಧಿಸುವ ಲಕ್ಷಣಗಳನ್ನು ತೋರಿಸ

---

* ಪರಮ ಜ್ಞಾನಿಗಳಾದ ಆರ್. ಡಬ್ಲ್ಯು. ಇಮರ್ಸನ್ ಇವರ Politics ಎಂಬ ಪ್ರಬಂಧದೊಳಗಿನ ಕೆಲವು ವಿಚಾರಸೂತ್ರಗಳಿಂದಲೂ ಸುಭಾಷಿತಗಳಿಂದಲೂ ಮೇಲ್ಪರದ ನಿಬಂಧವು ಬದ್ಧವಾಗಿದೆ.

ಹತ್ತಿದರೆ, ರಶಿಯಾದೊಳಗೆ ಈಗ ಆಗಿರುವಂತೆ, ಸಮಾಜಪುರುಷನು ತನ್ನ ದೇಹತ್ಯಾಗವನ್ನು ಮಾಡಿಯಾದರೂ ಪುನರ್ಜನ್ಮವನ್ನು ಹೊಂದಲಿಚ್ಛಿಸು ತ್ತಾನೆ. ಈ ಸ್ಥಿತಿ ಬರದೆ ಸುಧಾರಿಸುವ ಸಮಾಜವು ನಿಜವಾಗಿ ದೈವವುಳ್ಳದ್ದು.

೩. ಧಾರಣಾರ್ಥವಾದವಷ್ಟೇ ಧರ್ಮ; ಸಮಾಜದೇಹವನ್ನಷ್ಟೇ ಅಲ್ಲ ಸಮಾಜಹೃದಯವನ್ನೂ ಧಾರಣೆ ಮಾಡಬಲ್ಲದ್ದೇ ಧರ್ಮ. ಸಮಾಜಹೃದಯ ದಲ್ಲಿ ದ್ವೈತವನ್ನುಂಟು ಮಾಡುವದು ಧರ್ಮದ ಕೆಲಸವಲ್ಲ. ಅವಕ್ಕಾಗಿ ಅದನ್ನು ನಿರ್ಮಿಸಿಲ್ಲ. ದ್ವೈತವನ್ನುಂಟು ಮಾಡಲಿಕ್ಕೆ ಧರ್ಮವೂ ಬೇಡ. ದ್ವೈತವು ಸ್ವಾಭಾವಿಕ ಆಚಾರದಲ್ಲಿ ಮೂಡಿ ಕಾಣುವದು. ಅದನ್ನು ಹೋಗ ಲಾಡಿಸಿ ಹೃದಯದಲ್ಲಿ ಅದ್ವೈತಭಾವನೆಯ ಪ್ರತಿಷ್ಠೆ ಮಾಡುವದು ಧರ್ಮದ ಕಾರ್ಯವು. ಸಮಾಜಪುರುಷನ ಈ ಕಾಮನೆಯೇ ಮೂರ್ತಿಮತ್ತಾಗಿ ಧರ್ಮ ವೆನ್ನಿಸಿಕೊಳ್ಳುವದು. ಆದಕಾರಣ ಯಾವಾಗ್ಗೆ ಈ ಕಾಮನೆಯು ಧಾರ್ಮಿಕ ವಿಧಿನಿಷೇಧಗಳಿಂದ ವಿಫಲವಾಗುವಂತೆ ಕಾಣುವದೋ ಆ ಕಾಲಕ್ಕೆ ಸಮಾಜ ಪುರುಷನು, ಆ ವಿಧಿನಿಷೇಧಗಳ ವಿಧಿನಿಷೇಧವಿಲ್ಲದವನಾಗುತ್ತಾನೆ. ಇದರಿಂದ ಆ ವಿಧಿನಿಷೇಧಗಳು ಲುಪ್ತವಾಗುತ್ತವೆ. ಹೊಸ ವಿಧಿನಿಷೇಧಗಳು ಅದರ ಸ್ಥಳ ವನ್ನು ಹಿಡಿಯುತ್ತವೆ.

೪. ಧರ್ಮವೇನು, ಶಾಸ್ತ್ರವೇನು, ಸಂಸ್ಥೆಯೇನು, ಸಂಸ್ಥಾನವೇನು? ಎಲ್ಲದರ ಹಣೇಬರಹವು ಒಂದೇ! ಇವೆಲ್ಲ ಸಮಾಜಪುರುಷನ ಹೃದಯದ ಬೇರೆ ಬೇರೆ ಆಸ್ಥಾನಗಳು. ಅವನ ಇಚ್ಛಾಮಾತ್ರದಿಂದ ಇವುಗಳ ರೂಪವು ಪಲ್ಲಟಿಸಬೇಕು. ಹಾಗಾಗದಿದ್ದರೆ, ಕರ್ತೃ–ಕೃತಿಗಳ ಯುದ್ಧ ಹೂಡಿದಂತಾಗಿ, ಅಂತ್ಯದಲ್ಲಿ ಕರ್ತೃವಿಗೆ ಕಷ್ಟವೂ, ಕೃತಿಗೆ ನಷ್ಟವೂ ಒಂದೊದಗುವದು. ಈ ಬೀಜಮಂತ್ರವನ್ನು ಎಲ್ಲರೂ ನೆನಪಿನಲ್ಲಿಡಬೇಕಾಗಿದೆ.

೫. ಈ ಮೇಲಿನ ವಿವರಣೆಯನ್ನೋದಿ ಹಲವರು 'ಕೃತಿಗಳ ಜೀವಿತವು ಭಂಗುರವಾಯಿತಲ್ಲ' ಎಂದು ಉದ್ಗಾರಿಸಬಹುದು. ಅಹುದು. ಕೃತಿಗಳು ಕ್ಷಣಭಂಗುರಗಳಾಗಿವೆ. ಇಷ್ಟರಿಂದ, ಸಿಕ್ಕವರು ಕಂಡ ಕಂಡ ಕೃತಿಗಳನ್ನು ಸಿಕ್ಕಸಿಕ್ಕಂತೆ ಮುರಿಯಬಹುದೆಂದು ಯಾರೂ ಶಂಕಿಸಬಾರದು. ಹಾಗೆಂದಿಗೂ ಆಗದು! ಯಾಕಂದರೆ ಹಾಗಾಗುವದು ಅಶಕ್ಯವು. ಕೃತಿಯ ಬೇರುಗಳು ಕರ್ತೃ ವಿನಲ್ಲಿರುವದರಿಂದ ಅಜ್ಞಾನಿಗಳು, ಕೃತಿಯ ಬೊಡ್ಡೆಯನ್ನು ಕಡಿದರೂ ಅದನ್ನು

ನಿರ್ಮೂಲಿಸಲಾರರು. ಆದರೆ, ಬೇರು ಕೊಂದು ಬಿಡುತ್ತಲೆ ಅದರಿಂದ ಗಿಡವು ತಾನೇ ಒಣಗಿ ಹೋಗುವದೆಂದು ಸಮಾಜಪುರುಷನು ತನಗೆ ಬೇಡಾಗಿರುವ ಕೃತಿಯ ಬೇರುಗಳನ್ನು ಕಿತ್ತಿ ಒಗೆಯುವನು. ಅವನು ಟೊಂಗೆಗಳನ್ನು ಕಡಿಯುವದರಲ್ಲಿ ತೊಡಗುವದಿಲ್ಲ. ಆ ಮೇಲೆ ಸಮಾಜಪುರುಷನ ಗಡ್ಡೆಯಿಂದ ಬೇರೆ ಮೊಳಕೆಗಳು ಅಂಕುರಿಸಿ ಅವನಿಗೆ ಬೇಕಾಗಿರುವ ಬೇರೆ ಗಿಡಗಳಾಗುವವು. ಸಮಾಜಪುರುಷನು, ಆನಂದಕ್ಕೆ ಮೂಲವಾಗಿರುವ ಕೃತಿಗಳನ್ನು ಮಾಡದಿರಲಾರನು, ಜೀವಿತಕ್ಕೆ ಮುಳುವಾಗುವ ಕೃತಿಗಳನ್ನು ಕೆಡಿಸದಿರಲಾರನು. ಪುರುಷನ ಬೆಂಬಲವಿದ್ದ ಪ್ರಕೃತಿಯು ಈ ಸರ್ಗವಿಧಿಯನ್ನು ಎಡೆಬಿಡದೆ ಮನಸುಗೊಟ್ಟು ಮಾಡುವಳು. ಇದರಿಂದ ಯಾವ ವ್ಯಕ್ತಿಗೆ ಅಥವಾ ವ್ಯಕ್ತಿಗಳಿಗೆ ತಾತ್ಕಾಲಿಕ ದುಃಖವೆನಿಸಿದರೂ, ಪರಿಣಾಮದಲ್ಲಿ ಅದರಿಂದ ಅವರಿಗೆ ಸುಖವೇ ಆಗುವದು.

೬. ನಯಶಾಸ್ತ್ರವೂ ಮೇಲಿನ ನಿಯಮಗಳಿಗೆ ಅಪವಾದವಿಲ್ಲ; ಜನ, ಧನ, ಮನ ಸಂರಕ್ಷಣೆಗಾಗಿ ಸಂಸ್ಥಾನವಾಯಿತು; ಸಂಸ್ಥಾನವನ್ನು ನೀತಿಯುಕ್ತ ಮಾಡಲಿಕ್ಕೆ ನಯಶಾಸ್ತ್ರವಾಯಿತು. ಜನರಿಗಾಗಿ ಧನವೆಂದಮೇಲೆ, ಧನಕ್ಕಿಂತ ಜನ ಮೇಲೆಂಬದನ್ನು ಹೇಳಲಿಕ್ಕೇ ಬೇಡ. ಹಾಗೆಯೇ ಜನರಿಗೆ ಮನ ಮೂಲವಾದ ಕಾರಣ, ಮನವು ಜನರಿಗಿಂತ ಮಹತ್ವವುಳ್ಳದೆಂಬದೂ ತಾನೇ ತಿಳಿಯುವದು. ಈ ತರಗತಿಯ ತಾರತಮ್ಯವನ್ನು ಮರೆಯದಿದ್ದರೆ ಸಂಸ್ಥಾನದಲ್ಲಿಯೂ ನಯಶಾಸ್ತ್ರದಲ್ಲಿಯೂ ಕಾಲಕಾಲಕ್ಕೆ ಯಾವ ಸುಧಾರಣೆಯನ್ನು ಮಾಡಿದರೆ ಹಿತವು, ಯಾವದನ್ನು ಮಾಡದಿದ್ದರೆ ಅಹಿತವು ಎಂಬ ಮಾತು, ತಾನೇ ಹೊಳೆಯುವದು. ಇಷ್ಟರಿಂದ ನಯಶಾಸ್ತ್ರವು ಸುಲಭವಿರುವದೆಂದೂ, ಅದರ ಗುಟ್ಟುಮಟ್ಟುಗಳು ಸಾಮಾನ್ಯರಿಗೂ ತಿಳಿಯಬಹುದೆಂದೂ ತಿಳಿಯಬಾರದು. ಮೇಲಿನ ತಾರತಮ್ಯ ಪ್ರಕಾರವು ಮೂಲಭೂತವಿದ್ದರೂ, ಹಲಕೆಲವು ಪ್ರಸಂಗಗಳಲ್ಲಿ ಈ ತಾರತಮ್ಯದ ತರಗತಿಯನ್ನು ತಿರುಗಿಸಬೇಕಾಗುವದು. ಈ ವಿವೇಕದಲ್ಲಿಯೇ ನಯಶಾಸ್ತ್ರಜ್ಞರಿಗೆ ಜಾಣತನ ಬೇಕು. ಈ ವಿವೇಕವನ್ನು ತಪ್ಪುವದರಿಂದಲೇ ಅವರಿಗೆ ಭಯವುಂಟಾಗುವದು.

೭. 'ಅನ್ನಂ ಬ್ರಹ್ಮೇತಿವ್ಯಜಾನಾತ್', ಧನವೆಂದರೆ ಹೊನ್ನಷ್ಟೇ ಅಲ್ಲ, ಹೊಲವಷ್ಟೇ ಅಲ್ಲ, ಧನವೆಂದರೆ ಅನ್ನವು; ಧನವೆಂದರೆ ಸ್ಥಿರಚರ ಆಸ್ತಿಯು.

ಪ್ರಾಣಾಯತನವಾದ ದೇಹದ ಒಂದು ಸಾಧನವು. ಮತ್ತೊಂದು ಸಾಧನವು ವೈಬಲವು; ಆದರೆ ಈ ವೈಬಲವನ್ನೂ ಧನದಿಂದ ಕೊಂಡುಕೊಳ್ಳಬಹುದು. ಅನ್ನದ ಪೆಟ್ಟಿಗೆಯ ಕೀಲಿಯನ್ನು ತೆಗೆಯುವ ಕೀಲಿಯು ಧನವು. ಎಲ್ಲರೂ ಜನರಾದ ಮಾತ್ರಕ್ಕೆ ಎಲ್ಲರಿಗೂ ಧನವು ಅಷ್ಟೇ ಹೇಗಾದೀತು? ಅವರವರ ಮೂಲಪುರುಷರ ಮೈಬಲದಿಂದಲೂ ಮನೋಬಲದಿಂದಲೂ ಇನ್ನೂ ಹೆಚ್ಚು ಕಡಿಮೆಯಾಗಬಹುದು. ಈ ಧನದ ವೈಷಮ್ಯವನ್ನು ಹೋಗಲಾಡಿಸುವದು ಎಂದೂ ಆಗದ ಮಾತು. ಈ ವೈಷಮ್ಯವನ್ನು ಪೂರ್ವದ ವರ್ಣಾಶ್ರಮದಲ್ಲಿ ಸಮಮಾಡಿಕೊಂಡಂತೆ ಮಾಡಬಹುದು. ಆದರೆ ಈ ವೈಷಮ್ಯವನ್ನು ಮೂರ್ತತಃ ತೆಗೆಯಲಾಗದು. ಅಮೂರ್ತ ಮನಸಿನಲ್ಲಿ ಸಮಪಡಿಸಿಕೊಳ್ಳಲಿಕ್ಕೆ ಯಾವದಾದರೊಂದು ರೀತಿಯನ್ನು ಹುಡುಕಲು ಬೇಕು. ಈ ತತ್ವವನ್ನರಿಯದೆ ಮಾಡಿದ ಪ್ರಯತ್ನಗಳು ನಿಷ್ಫಲ, ಅಹಿತಕಾರಿ.

೮. ಪ್ರಾಣಾಪಾಯವುಂಟಾಗುವಂತೆ ಅನ್ನದ ತಲೆಯೆತ್ತಿಸಕೊಡಬಾರದು. ಜನವಿದ್ದರೆ ಧನ ಬೇಕು. 'ಸ ಈಕ್ಷತ. ಅನ್ನವೇಭ್ಯಃ ಸೃಜಾ ಇತಿ'. ಅನ್ನ ಸಂಗ್ರಹವನ್ನು ಮಾಡಿ ಪ್ರಾಣ ಹಾನಿಯನ್ನು ಯಾರಾದರೂ ಮಾಡಿದರೆ ಸಂಸ್ಥಾನವು ಇದನ್ನು ಸರಿಪಡಿಸಲಿಕ್ಕೆ ಬೇಕು. ಎಲ್ಲರ ಪ್ರಾಣಬೆಲೆಯು ಅಷ್ಟೇ. ಧನಾದಿ ವೈಷಮ್ಯವನ್ನು ಪ್ರಾಣದ ಮೇಲೂ ಆರೋಪಿಸಬಹುದೇ? ಧನವಂತರ ಪ್ರಾಣರಕ್ಷಣೆಗಾಗಿ ನಮ್ಮ ಸಮಾಜವೂ ಸಂಸ್ಥಾನವೂ ಸದ್ಯಕ್ಕೆ ಚಿಂತಿಸುವದು ಬಡವರಿಗಾಗಿ ಚಿಂತಿಸುವಂತೆ ನಟನೆ ಮಾಡುವದು. ಇದು ಅತ್ಯಂತ ಗರ್ಹಣೀಯ ಸಂಸ್ಥಾನದ ಅಥವಾ ಸಮಾಜದ ಧನವು. ಎಲ್ಲ ಪ್ರಾಣಿಗಳಿಗೂ ಸಮಾನ ಅನುಕೂಲತೆಗಳನ್ನುಂಟು ಮಾಡುವದಕ್ಕಾಗಿ ಹೀಗಾಗದಿದ್ದರೆ ವ್ಯರ್ಥವಾಗಿ ಜನಧನದ ಹಗೆಯುಂಟಾಗುವದು. ಈ ಹಗೆತನವು ಸಂಸ್ಥಾನವನ್ನೂ ಸಮಾಜವನ್ನೂ ಕೆಲ ಕಾಲದಲ್ಲಿ ಛಿನ್ನಭಿನ್ನ ಮಾಡುವದು; ಈ ತರದ ಹಗೆತನವು ಆಫ್ರಿಕಾ, ಫಿಜಿ ಮೊದಲಾದ ವಸಹಾತುಗಳಲ್ಲಿ ಮೈದೋರಿರುವದು.

೯. ಧನವು ಜನರನ್ನು ದುರ್ಲಕ್ಷಿಸದಂತೆಯೂ, ಜನವು ಧನವನ್ನು ತಿರಸ್ಕರಿಸದಂತೆಯೂ, ಮನವನ್ನು ಸಂಸ್ಕಾರಗೊಳಿಸುವದೇ ಸಮಾಜದ್ದೊಂದು ಕಾರ್ಯ, ಸಂಸ್ಥಾನದೊಂದು ಕಾರ್ಯ. ಇದೇ ರಾಜನೀತಿಯ ಪ್ರಶ್ನೆ. ದಂಡು

ಭಂಡಾರವೆಲ್ಲ ಇದಕ್ಕಾಗಿ; ಪಂಚಪ್ರಧಾನರು ಇದಕ್ಕಾಗಿ; ರಾಜನು ಇದಕ್ಕಾಗಿ; ಧನಧನದೊಳಗಿನ ಹಗೆಗಳನ್ನೂ ಜನಜನದೊಳಗಿನ ಬಗೆಗಳನ್ನೂ ತೆಗೆದು ಹಾಕಿ ಸಮಾಜಪುರುಷನು ಸಾಯದಂತೆ ಮಾಡುವದೇ ಸಂಸ್ಥಾನದ ಕೆಲಸವು. ಇದಕ್ಕೆ ಬೇಕಾಗುವ ಬುದ್ಧಿಯೇ ರಾಜನೀತಿ. ಇದರ ಶಾಸ್ತ್ರವೇ ನಯಶಾಸ್ತ್ರ. ನ್ಯಾಯಾಧೀಶರನ್ನು ಹೆಚ್ಚು ಮಾಡುವದರಿಂದ ಅನ್ಯಾಯ ಕಡಮೆಯಾಗಲಾರದು. "ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ." ಈ ಮನವನ್ನು ಸಂಸ್ಕಾರಗೊಳಿಸುವಂತೆ ಸಮಾಜವ್ಯವಸ್ಥೆಯನ್ನಿಡುವದೇ ನಯಶಾಸ್ತ್ರದ ಕಾರ್ಯ. ಇದನ್ನು ನಮ್ಮ ಪೂರ್ವದ ಕ್ಷತ್ರಿಯರರಿತಿದ್ದರು. ಅಕಿಂಚನವ್ರತಸ್ಥರಾದ ಆಚಾರತೆಯುಳ್ಳ ದ್ವಿಜರಿಗೆ ಸಮಾಜದ ಅಂತರ್ವ್ಯವಸ್ಥೆಯಲ್ಲಿ ಆದರದ ಪದವಿಯನ್ನು ಕೊಟ್ಟಿದ್ದು ಧೂರ್ತರಾಜನೀತಿಗೆ ತಕ್ಕದ್ದೇ ಆಗಿತ್ತು. ಆದರೆ ಪೂರ್ವದಲ್ಲಿ ವಿಶೇಷತಃ ಈಗ ರಾಜನೀತಿಯ ಹೆಸರು ಕೆಟ್ಟು ಹೋಗಿರುವದು.

೧೦. "ವಾರಾಂಗನೇವ ಕುಟಿಲಾ ಖಲು ರಾಜನೀತಿಃ." ರಾಜನೀತಿಯೊಬ್ಬ ಸೂಳೆ. ಅವಳ ತುಟಿಯ ತುದಿಗಿರುವ ಮಾತು, ಗಲ್ಲದ ಮೇಲಿರುವ ನಗೆ, ಕಣ್ಣ ಒಳಗಿರುವ ಪ್ರೀತಿ, ಆದಕ್ಕೂ ಒಳಗಿರುವದೆಂದು ತಿಳಿಯುವದು ಮೂಢತನ. ಲಾಯಿಡ್ ಜಾರ್ಜರು ಹಿಂದಕ್ಕೆ ಪ್ರಪಂಚದ ರಂಗಭೂಮಿಯಲ್ಲಿ ಕಿಳ್ಳಿಕೇತರಂತೆ ರಾಜನೀತಿಯನ್ನು ಹೇಗೆ ಕುಣಿಸುತ್ತಿದ್ದರೆಂಬ ಮಾತು ಸಾಲೆಯ ಹುಡುಗರ ಹರಟೆಯೊಳಗಿನ ಮಾತಾಗಿ ಬಿಟ್ಟಿತ್ತು. ಈ ಸೂಳೆಯ ಸಂಗ ಬೇಡ ಎಂದು ರಾಜನೀತಿಯನ್ನು ರವೀಂದ್ರನಾಥರು ತ್ಯಜಿಸಿದರು. 'ಉದ್ಧರೇದಾತ್ಮನಾತ್ಮಾನಂ' ಎಂದನ್ನುವ ಅರವಿಂದರು ರಾಜನೀತಿಯು ಗರತಿಯಾಗಿ ಬರುವ ವರೆಗೆ ಅವಳ ಮುಖಾವಲೋಕನ ಮಾಡುವದಿಲ್ಲೆನ್ನುವರು. ಪತಿತೋದ್ಧಾರ ಪ್ರಿಯರಾದ ಮಹಾತ್ಮರು ರಾಜನೀತಿಯ ಹಾದರವನ್ನು ಹೋಗಲಾಡಿಸಬೇಕೆಂದೇ ಅವಳನ್ನು ಮುಂದೆ ಕರೆದಿರುವರು. ಆದರೆ ರಾಜನೀತಿಯ ಈ ರೂಪವು ಅವಳ ಸ್ವರೂಪವಲ್ಲ.

೧೧. ದುಡ್ಡುಳ್ಳವರಿಗೇ ದೊಡ್ಡಿಸ್ತನ ಸಿಗಬೇಕೆಂದು ಧನದ ಕಿವಿಮಾತು. ಸಾವಿರ ಮಂದಿಯಂದದ್ದೇ ಸತ್ಯವೆಂದು ಜನದ ಕಿವಿ ಮಾತು. ಈ ಎರಡೂ ಮಾತಿಗೆ ಕಿವಿಗೊಟ್ಟು ಕಿವಿಗೊಡದೆ ಪೂತಮನಸಿಗೆ ಯೋಗ್ಯವೆನಿ

ಸುವದನ್ನೇ ನಯಶಾಸ್ತ್ರವು ನಡೆಯಿಸಬೇಕು. ಸಜ್ಜನರ ಸದುಪದೇಶದಂತೆ ಸಮಾಜವನ್ನು ಸಂರಕ್ಷಿಸುವದೇ ಸಂಸ್ಥಾನದ ಕರ್ತವ್ಯ. ಆದರೆ ಸಜ್ಜನರ ಸಂಪರ್ಕವಿರದಂತಿರಬೇಕೆಂದೇ ಸದ್ಯದ ಸಂಸ್ಥಾನಗಳು ಪಂಥ ತೊಟ್ಟಂತೆ ತೋರುತ್ತದೆ. ಹಣಕ್ಕಿಂತ ಗುಣಕ್ಕೆ ಹೆಚ್ಚು ಮಾನವು ದೊರೆಯಬೇಕು. ಸತ್ಯವಿದ್ದದ್ದನ್ನು ಮಾಡಲಿಕ್ಕೆ ಹತ್ತು ಜನರು ನೆರವಾಗಬೇಕಲ್ಲದೆ, ಹತ್ತು ಜನ ರಾಡಿದಂತೆಯೇ ಸತ್ಯವಾಗಬೇಕಂದಲ್ಲ. ಬ್ರಹಸ್ಪತಿ ವಸಿಷ್ಠರಂಥ ಜನರ ವಿಚಾರಾನುಸಾರ ಇಂದ್ರ ರಾಮಚಂದ್ರಾದಿ ಅರಸರು ಆಳಿದಂತೆ ಈಗಿನ ಆಳಿಕೆಯೂ ಆಗಬೇಕು. ಇದೇ ನಯಶಾಸ್ತ್ರದ ಪ್ರತಿಪಾದ್ಯ ವಿಷಯ.

೧೨. ದಂಡಬಲದಿಂದಲೇ ಪ್ರಪಂಚವು ಸುಸೂತ್ರವಾಗಿ ನಡೆದಿದೆ ಎಂಬುದು ತೀರ ತಪ್ಪು. ಎಂಥ ಕ್ಷುದ್ರ ಮನುಷ್ಯನೂ ಪ್ರೀತಿಯ ಬೀಜವಿಲ್ಲದೆ ಇಲ್ಲ. ಈ ಪ್ರಪಂಚವು ಪರಬ್ರಹ್ಮನ ಪ್ರೀತಿಬೀಜದ ವಿಸ್ತಾರವಾಗಿದ್ದರಿಂದ ಸಂಸ್ಥಾನದಲ್ಲಿ ಪರಸ್ಪರ ಪ್ರೇಮದ ಪ್ರಗತಿಯಾಗುವಂತೆ ನಯಶಾಸ್ತ್ರದ ನೀತಿ ಇರಬೇಕು. ಎತ್ತ ಕಡೆಗೂ ದಂಡವನ್ನೆತ್ತಿಕೊಂಡು ಶರಿಬಡಕನಂತೆ ತಲೆತಿರುಗಿ ನಿಂತ ಸದ್ಯದ ರಾಜನೀತಿಯು ಬರುವ ಯುಗದ ದಿವ್ಯ ನಯಶಾಸ್ತ್ರದ ಕೇವಲ ಆಸುರಿ ಸ್ವರೂಪವಾಗಿರುವದು. ಒಬ್ಬ ದೇವರೇ ಅರಸ; ನ್ಯಾಯ ಸತ್ಯ ಪ್ರೀತಿಗಳೇ ರಾಜೋಪಾಯಗಳು; ನಯಶಾಸ್ತ್ರವು. ಹೀಗೆ ವಿಷಯ ಪ್ರತಿಪಾದನ ಮಾಡಿ ಜನರ ಮನಗಾಣಿಕೆ ಮಾಡಿಕೊಡುವದೇ ಅದರ ಆದ್ಯಕರ್ತವ್ಯ. ಸಾವಿರ ಸಂಕಟಗಳನ್ನು ಸಹಿಸಿ ಹಾಗೆ ಸಿದ್ಧಿಸುವದೇ ಅದರ ಅಂತಿಮ ಧ್ಯೇಯ.

---

## ೭. ನಿಜವಾದ ಧಾರ್ಮಿಕನು

ಮುಂಡೆ ಬೋಳಾದರೆ ಧಾರ್ಮಿಕನಾಗುವನೆ? ಧಾರ್ಮಿಕನು ಸತ್ಯದಿಂದಲೂ ಸರಳತೆಯಿಂದಲೂ ಮುಂಡಿತನಾಗಿರಬೇಕು. ಅಡವಿಪಾಲಾದರಿಲ್ಲ, ಗವಿಹೊಕ್ಕು ಕುಳಿತರಿಲ್ಲ, ಗಡ್ಡೆಗೆಣಸು ತಿಂದಿಲ್ಲ, ಗಾಳಿಯುಂಡಿಲ್ಲ, ಒಣ ಎಲೆ ತಿಂದಿಲ್ಲ. ಇವಾವುಗಳಿಂದಲೂ ಮುಕ್ತಿಯ ಹಾದಿ ದೊರೆಯದು. ಇವುಗಳೆಲ್ಲವನ್ನು ಸಾಧಿಸುವ ಮುಮುಕ್ಷುವಲ್ಲ; ಆದರೆ ಸಕಲ ಸುಖಸಾಧನಗಳನ್ನು

ಕೆಲಕಾಲ ತ್ಯಾಗಮಾಡಿ ಸರ್ವಭೋಗವು ನಿರಂತರವಾಗಿ ತನಗೆ ದೊರೆಯ ಬೇಕೆಂದು ಹಗಲಿರುಳು ಹವಣಿಸುತ್ತಿರುವ ಸಾಧಕನು. ಮೈಮೇಲೆಲ್ಲ ಮಣಿ ಮುತ್ತುಗಳಿರಬಹುದು. ಆದರೂ ಅಂತಃಕರಣವು ಮಾತ್ರ ಲೌಕಿಕ ವ್ಯವಹಾರಗಳಿಗೆ ಸೆರೆಯಾಳಾಗಿರದಿದ್ದರೆ ಸಾಕು. ಬಹಿರಂಗದಲ್ಲಿ ಅವನು ಲೌಕಿಕನಂತೆ ಕಂಡಾಗ್ಯೂ ಸುಖ ದುಃಖ ಸಮವೆಂದು ಶಾಂತನಾಗಿ ಭಾವಿಸು ವವನು ಧಾರ್ಮಿಕನೆನ್ನಲು ಯಾವ ಅಡ್ಡಿಯಿದೆ? ಕಾವಿಯ ಬಟ್ಟೆಯನ್ನೂ ಬೂದಿ ಬಡಕ ಮೈಯನ್ನೂ ಕಂಡೇನು ಮದನನು ಓಡಿಯೇ ಹೋಗುವನೆ? ಕವಚವು ಬೇಕು ಅಂತರಂಗಕ್ಕೆ; ಬಹಿರಂಗಕ್ಕೆ ಇದ್ದರೂ ಅಷ್ಟೆ! ಇರದಿದ್ದರೂ ಅಷ್ಟೆ! ಲೌಕಿಕನ ವೇಷವಿದ್ದಾಗ್ಗ್ಯೂ ಆದರೂ ಆತ್ಮವು ಅನಿರ್ಬಂಧವಾಗಿ ತನ್ನ ಮೇಲ್ಮೆಯನ್ನು ಮುಟ್ಟಲಾಸದು. ಅಹಂಕಾರವನ್ನೊಂದು ಗೆದ್ದ ಮೇಲೆ ಲೌಕಿಕ ಧಾರ್ಮಿಕನೆಂಬುವ ಭೇದವೇ ಉಳಿಯದು. ಎಲ್ಲಿಯವರೆಗೆ ಜೀವವು ಇಂದ್ರಿಯ ಸುಖದ ಪಂಜರದಲ್ಲಿಯ ಗಿಳಿಯಾಗಿರುವದೋ ಅಲ್ಲಿಯವರೆಗೆ ವೈರಾಗ್ಯ ವೇಷವೊಂದು ಡಂಭಾಚಾರ. ಮಾಯಾದೇವಿಯ ಮೋಹಕ್ಕೊಳ ಗಾಗದೆ ಲೋಕಾಂತದಲ್ಲಿದ್ದರೇನು? ಏಕಾಂತವಲ್ಲಿದ್ದರೇನು? ಆದರೆ ಹೃದಯವೇ ಭೋಗಸೆಟ್ಟಿಯ ಮನೆಯಲ್ಲಿ ಜೀತದಾಳಾಗಿರುವಾಗ ಯಮನಿಯ ಮಾದಿಗಳ ಡೊಂಬರಾಟದಿಂದ ಫಲವೇನು? ನಿಜವಾದ ಧಾರ್ಮಿಕನಾಗಿ ಲೋಕಾಂತದಲ್ಲಿದ್ದೂ ಜೀವನ್ಮುಕ್ತನಾಗಿರಬಹುದು. ನಿಜವಾದ ಧಾರ್ಮಿಕ ನಿರದೆ ಏಕಾಂತದಲ್ಲಿದ್ದೂ ಸಂಸಾರಿಯಾಗಿ ಉಳಿಯಬಹುದು.

ತನ್ನ ಉಪೋಷಣಾದಿಗಳಿಂದ ನೋಡುವವರಿಗೂ ಸಂಕಟವನ್ನುಂಟು ಮಾಡುವವನಿಗಿಂತ ಕಂಡವರೆಲ್ಲರೂ ಹಿರಿಹಿರಿ ಹಿಗ್ಗುವಂತೆ ಮಾಡುವ ಉಂಡಾಡುವ ಸದಾನಂದಿಯು ಲೇಸು. ಬಡವರು ಉಣ್ಣಲೆಂದು ತಾನು ಉಪವಾಸಿಯಾಗಿರುವವನು ಪುಣ್ಯವನ್ನು ಗಳಿಸುವನೆಂಬುದೇನೋ ನಿಜ. ಆದರೆ ಪಾರಣೆಯ ಕಾಲಕ್ಕೆ ಪಕ್ವಾನ್ನವನ್ನುಣಬೇಕೆಂದು ಧಾರಣೆಯನ್ನು ಮಾಡುವ ಉಪವಾಸಿಯು ಯಾವ ಪುಣ್ಯವನ್ನು ಗಳಿಸುವನೋ ತಿಳಿಯದು. ಧರ್ಮಶಾಸ್ತ್ರಗಳು ಆತ್ಮಕ್ಲೇಶವಾಗಲೆಂದು ವ್ರತೋಪವಾಸಗಳನ್ನು ವಿಧಿಸಿರು ವವೇ? ಯಾವಾಗ್ಗೆ ಕೋಳಿ ಕೂಗಿತೋ ಯಾವಾಗ್ಗೆ ಬೆಳಗಾದೀತೋ ಎಂದು ಪಾರಣೆಯ ಕಾಲವನ್ನು ಚಿಂತಿಸುತ್ತಿರುವದು ಅದಾವ ಧ್ಯಾನವೊ?

ಹಶ್ ಹುಶ್ ಎಂದು ನಿಟ್ಟುಸುರು ಬಿಟ್ಟು, ಎದೆ ಎದೆ ಬಡಕೊಂಡು, ನೆಲಕ್ಕೆ ತಲೆ ಅಪ್ಪಳಿಸಿ, ಹಾಸಿಗೆಯ ಮೇಲೆ ಉರುಳಾಡುವದು ಅದಾವ ಕೀರ್ತನವೋ, ಅದಾವ ಭಜನವೋ, ಅದಾವ ವಂದನವೋ, ಅದಾವ ಜಾಗರವೋ? ಈ ಸಾಧನೆಗಳಿಂದ ಅದಾವ ದೇವರು ಪ್ರೀತನಾಗುವನೋ? ದೇವನಿಗೆ ಬೇಕಾದ ಉಪೋಷಣವು ಬೇರೆ ಬಗೆಯದು. ವಿಷಯ ಚಿಂತನೆಯ ಊಟ ಬೇಡ; ಭೋಗವಿಚಾರಗಳನ್ನು ಬಾಡಿಸಿಕೊಳ್ಳುವದು ಸಾಕು; ಕುವಿಚಾರಗಳನ್ನೆ ಸುರಿದುಕೊಳ್ಳಬಾರದು; ಇದೇ ಅವನು ಹೇಳಿದ ಉಪವಾಸ. ಬಡವಾದ ಮೈಯನ್ನು ಮತ್ತಿಷ್ಟು ಬಡಕವಾಗಿ ಮಾಡುವ ಕಾಯಕ್ಲೇಶದಿಂದ ಪ್ರಯೋಜನವೇನು? ಮನಸಿನ ಮಂಗಚೇಷ್ಟೆಗಳು ಕಡಿಮೆಯಾಗುವಂತೆ ಅದನ್ನು ಉಪವಾಸ ಕೆಡಹುವದೇ ನಿಜವಾದ ಉದ್ದೇಶ. ಇಂಥ ಉಪೋಷಣ ಕಾಲದಲ್ಲಿ ಹಸಿದವರಿಗೆ ಅನ್ನ, ಬಡವರಿಗೆ ಬಟ್ಟೆ, ವಿಪನ್ನರಿಗೆ ಸಹಾಯ, ಬೇನೆಯವರಿಗೆ ಔಷಧ ಇಂತು ಮೊದಲಾದ ಪರೋಪಕಾರದಲ್ಲಿ ತೊಡಗಿರಬೇಕಲ್ಲದೆ ಹೀಗೆ ಆಚರಿಸಿದ ಸಾಧುಸಜ್ಜನರ ಜೀವನಚರಿತೆಯನ್ನು ಓದುವದು ಕೇಳುವದು ಮನನಮಾಡುವದು ಧರ್ಮವಾಗಿದೆ. ಇದೇ ಈಶ್ವರನ ಗುಣಕೀರ್ತನ-ನಾಮಸ್ಮರಣ. ಅವನ ಮೌಲಿಕ ಗುಣವು ಕರುಣೆಯು; ಅವನ ನಾಮವು ತಾರಕವು. ದಯಾಪೂರ್ಣನಾದ ಪರೋಪಕಾರಿಯು ಆ ತಾರಕನಾದ ಕರುಣಾಸಾಗರನ ಆವೇಶವನ್ನೇ ಅಂಶತಃ ಪ್ರಕಟಿಸುವದಿಲ್ಲವೇ? ಆಹಾರದ ಉಪೋಷಣ ಸಾಕು ವಿಚಾರದ ಉಪೋಷಣ ಬೇಕು. ವೈಷಮ್ಯವನ್ನಳಿದು ವ್ಯವಹರಿಸುವದೇ ನಿಜವಾದ ಧಾರ್ಮಿಕ ಮಾರ್ಗ

"ಸನಾತನ ಪುರಾತನವಾದ ವಸ್ತುವನ್ನು ಸಮೀಪಿಸಲು ಬಯಸುವವನು ಆ ಆಹಾರ ಈ ಆಹಾರ ಎಂಬ ಮರುಳು ವಿಚಾರದಲ್ಲಿ ತೊಡಗುವನೇ? ಮತ್ತು ಆ ಬಯಕೆಯೆ ಇಲ್ಲದವನು ಯಾವ ಆಹಾರವನ್ನುಂಡರೇನು?" ಎಂದು ಒಂದೆಡೆಗೆ ಶ್ರೀರಾಮಕೃಷ್ಣರು ಕೇಳಿರುವರು. ಅಹುದು; ಮನವು ಕಲುಷಿತವಾಗುವದು ತಾಮಸಾಹಾರದಿಂದಲ್ಲ. ಅದು ಕಾಮದಿಂದ,-ಕ್ರೋಧದಿಂದ, ಮೋಸದಿಂದ, ಮತ್ಸರದಿಂದ, ಬಿಂಕದಿಂದ, ಅನ್ಯಾಯಿಗಳ ಸಹವಾಸದಲ್ಲಿ ಆನಂದ ಹೊಂದುವದರಿಂದ; ಲೋಭಿಯಾಗುವದರಿಂದ ನಿಷ್ಕರುಣಿಯಾಗುವದರಿಂದ, ಚಾಡಿಬುರಕನಾಗುವದರಿಂದ, ಮನವು ಅಶುದ್ಧ

ವಾಗುವದು. ಹೊಟ್ಟೆಕಿಚ್ಚು ಪಡುವದರಿಂದ, ಹಿಂಸೆಮಾಡುವದರಿಂದ, ಕೃತಘ್ನನಾಗುವದರಿಂದ, ವಿಶ್ವಾಸಘಾತಿಯಾಗುವದರಿಂದ, ಎರಡನೆಯವರಿಗೆ ಕಾಸು ಕೂಡ ಕೊಡಲಾರದ ಜೀನನಾಗುವದರಿಂದ ಮನವು ಅಧಮವಾಗುವದು. ಎರಡನೆಯವರ ಕೂಡ ಹೊಂದುಗೂಡಿ ಇರಲಾರದವನು, ಹೆರವರದೆಲ್ಲ ಹರಿದುಕೊಂಡು ತನ್ನ ಹೊಟ್ಟೆ ಹೊರೆದುಕೊಳ್ಳುವವನು ಪರರನ್ನು ಕಾಡಿ ಕಾಡಿ, ಕಷ್ಟ ಕಂಡು ಕೂಡ ಕರಗದ ಎದೆಯವನು ಅಶುದ್ಧನು ಇವನು ಕಲುಷಿತ, ಇವನು ಕಲಂಕಿತ. ಕಪ್ಪು ಉಣ್ಣುವವರು ಅಶುದ್ಧರಲ್ಲ. ಕಪ್ಪು ವಿಚಾರದವರು ಅಶುದ್ಧರು, ಅಧಾರ್ಮಿಕರು.

ದೂಳಿನಿಂದ ಮಲಿನವಾದೀತೆ ನಿರ್ಮಲ ಚಂದ್ರಬಿಂಬ? ಮೋಡದಿಂದ ಮಾಸೀತೇ ಮುಗಿಲಬಟ್ಟೆ? ಅನ್ನದ ಕಿಲುಬಿಗೊಳಗಾಗುವ ಮನವು ಅದೆಂಥ ಮನವಯ್ಯಾ? ಅನ್ನ ವೀರ್ಯದಿಂದಲೇ ಜೀವಿಸುವ ಅಧೋಮುಖವಾದ ಮನವು ನಿಜವಾದ ಧಾರ್ಮಿಕನದಲ್ಲ ಅಗ್ನಿಯಂತೆ ಸದೈವವಾಗಿ ಉನ್ಮುಖವಾಗಿರುವದೇ ಧರ್ಮಲೀನ ಮನದ ಕುರುಹು. ತನ್ನ ಪ್ರತಿಜ್ಞೆಗಳನ್ನು ಪ್ರಾಮಾಣಿಕನಾಗಿ ಪಾಲಿಸುವವನೂ, ತನ್ನ ಆಳೂ ತಾನಾಗದೆ ಅರಸನಂತಿರುವವನೂ, ಕಾಮಕ್ರೋಧ ವಿವರ್ಜಿತನಾದ ಜ್ಞಾನಿಯೇ ನಿಜವಾದ ಧಾರ್ಮಿಕನು. ತನ್ನ ಮೈ-ಮಾತು-ಮನಗಳನ್ನು ತನ್ನ ಅಂಕಿತದಲ್ಲಿಟ್ಟುಕೊಂಡವನೂ ಗಂಭೀರನಿದ್ದು ಆನಂದಿಯೂ, ಸರ್ವಭೂತಗಳ ಹಿತದಲ್ಲಿ ರತಿಯುಳ್ಳವನೂ, ಏಕಾಂತಪ್ರಿಯನೂ, ವಿಚಾರ-ಉಚ್ಚಾರ-ಆಚಾರಗಳನ್ನು ಕಟ್ಟಿನಲ್ಲಿಡಬಲ್ಲವನೂ, ಅವನೇ ನಿಜವಾದ ಧಾರ್ಮಿಕನು. ರಾಗದ್ವೇಷಗಳಿಲ್ಲದ ಮನಸು, ಹಿತವೂ ಪಥ್ಯವೂ ಆದ ಮಾತು, ಇವು ಧಾರ್ಮಿಕನವಾಗಿವೆ. ನಿಜವಾದ ಧಾರ್ಮಿಕನು ಹಿಂಸಾಮಾರ್ಗದವನಲ್ಲ. ಅವನು ಕೊಲ್ಲನು, ಕೊಲ್ಲಿಸಿಕೊಡನು. ಅವನು ಸನಾತನವನ್ನು ಬಲ್ಲನು, ಹಗೆಗಳ ಮಧ್ಯದಲ್ಲಿ ಗೆಳೆಯನಂತೆ, ಕನಿಕರವಿಲ್ಲದವರ ಮಧ್ಯದಲ್ಲಿ ಕರುಣೆಯಂತೆ ಅವನಿರುವನು. ಇಹಲೋಕದ ರಾಗವಿಲ್ಲ; ಪರಲೋಕದ ಲೋಭವಿಲ್ಲ; ಇಂಥವನಿವನು. ಅನಿರ್ಬಂಧನೂ ನಿರ್ಭಯನೂ ಆದ ಜ್ಞಾನಿಯೇ ನಿಜವಾದ ಧಾರ್ಮಿಕನು.

---

# ವಿಚಾರ

## ೧. ಅನುಭಾವದ ಸ್ವರೂಪ

ಎಲ್ಲವು ಬಹ್ಮ ಎಂದು ಹೇಳುವವರೂ ಒಮ್ಮೊಮ್ಮೆ ಬ್ರಹ್ಮದ ಅನುಭವವೇ ತೀರ ಬೇರೆ ಎಂದೂ ಸಾರುವರು. ಎಲ್ಲವೂ ಬ್ರಹ್ಮವಾದರೆ ಎಲ್ಲದರ ಅನುಭವದಲ್ಲಿಯೂ ಬ್ರಹ್ಮಾನುಭವ ಸಾದೃಶ್ಯವಿರಲೇಬೇಕು. ಇದು ಎಲ್ಲ ಜೀವಿಗಳಿಗೂ ಸುಲಭವಾದ ಜ್ಞಾತದ ಆಧಾರವು; ಇದರಿಂದಲೇ ಅಜ್ಞಾತಕ್ಕೆ ಹಾದಿ.

× × × ×

ಬ್ರಹ್ಮವೆಂದರೇನು ಎಂದು ಕೇಳಿದಾಗ ಮೌನವನ್ನು ತಾಳುವವರ ಅಥವಾ 'ಮೌನ' ದಿಂದಲೇ ಅದನ್ನು ಹೇಳಬರುವದೆನ್ನುವವರ ಮಾತು ಬೇರೆ! ಆದರೆ ಅನುಭಾವವನ್ನು ಮಾತಿನಲ್ಲಿ ಹೇಳಿದ್ದೇ ಆದರೆ 'ನಾನು ಅದನ್ನು ಅರಿತೆನು' ಎಂಬ ವಾಕ್ಯದಲ್ಲಿರುವಂತೆ ಎಲ್ಲ ಜ್ಞಾನಕರ್ಮಗಳಲ್ಲಿ ಕರ್ತೃ ಕರ್ಮ ಕ್ರಿಯಾಪದಗಳ ತ್ರೈತವನ್ನೋ ತ್ರಿಪುಟಿಯನ್ನೋ ಆಶ್ರಯಿಸಲೇಬೇಕು. ಇಲ್ಲವೆ 'ನಾನು ಇರುವೆನು' ಎಂಬ ಮಾತಿನಂತೆ ಕರ್ತೃ ಕ್ರಿಯೆಗಳ ದ್ವೈತವಾದರೂ ಈ ಕೇವಲಭಾವದಲ್ಲಿ ಬೇಕು ಹೀಗಿದ್ದೂ ಕೂಡ ಅಕರ್ಮಕ ಕ್ರಿಯೆಯಲ್ಲಿ ನೈಷ್ಕರ್ಮ್ಯಸಿದ್ಧನಂತೆ ಅವನ ಕ್ರಿಯೆಯಲ್ಲಿಯೇ ಕರ್ಮವಡಗಿರುವದು ಎಂದೂ ಹೇಳಬೇಕಾಗುವದು. 'ಇರು' ವದೊಂದರೆ ಇರುವ ಕೆಲಸವನ್ನು ಮಾಡುವದೆಂದೇ ಅರ್ಥ. ಸಕರ್ಮಕಕ್ರಿಯೆಯು ಬಾಹ್ಯಕರ್ಮವನ್ನು ಅಪೇಕ್ಷಿಸುವದು. ಅಕರ್ಮಕಕ್ರಿಯೆಯು ಸ್ವಯಂ ಫಲರೂಪವಾಗಿರುವದು. ಅಕರ್ಮಕ ಕ್ರಿಯೆಯು ಹೂವುಗಳನ್ನಡಗಿಸಿಕೊಂಡ ಅತ್ತಿಯ ಹಣ್ಣಿದ್ದಂತೆ. ಇನ್ನು 'ಉಂಟು ಉಂಟು' ಎಂಬ ಕವಿಭಾಷೆಯಲ್ಲಿಯೂ, 'ನಾನು ನಾನು' ಎನ್ನುವ ಬಾಲಭಾಷೆಯಲ್ಲಿಯೂ ಕರ್ತೃಕ್ರಿಯೆಗಳಲ್ಲಿ ಉಳಿದವುಗಳು ಅಡಕವಾಗಿ ಅಡಗಿರುವವು. ಅಂತೂ ಎಚ್ಚರದ ಭಾಷೆಯು

ಒಂದು ವಿಧದ ತ್ರಿಪುಟಿಯನ್ನು ಗ್ರಹಿಸಿಯೇ ಅರ್ಥಗ್ರಹಣ ಮಾಡುವದು. ಇಲ್ಲದಿದ್ದರೆ ಅದರ ಅರ್ಥಕ್ಕೆ ಅರ್ಥವೇ ಇಲ್ಲ. ಮನುಷ್ಯನಿಗೆ ಸುಷುಪ್ತಿ ಇದ್ದಷ್ಟಕ್ಕೆ ಅದೇ ಮನುಷ್ಯನ ಸಾರವೆಂದಾಗಲಿ ಪೂರ್ಣತೆಯೆಂದಾಗಲಿ ತಿಳಿದುಕೊಳ್ಳುವವರು ತಿಳಿದುಕೊಳ್ಳಲಿ, ಸೃಷ್ಟಿಯಲ್ಲಿ ಎಚ್ಚರಕ್ಕೆ ಇರುವಷ್ಟು ಮಹತ್ತ್ವವು ಇನ್ನೇತಕ್ಕೂ ಬರಲಾರದು. ಜ್ಞಾನ, ಸಮಾಧಿ, ಮುಕ್ತಿಗಳು ಹಿರಿಯೆಚ್ಚರಗಳೆನ್ನಬಹುದಲ್ಲದೆ ಮಹಾನಿದ್ರೆಗಳೆನ್ನುವದು ಒಳ್ಳೆಯ ಅರ್ಥವಂತೂ ಅಲ್ಲ, ಅಲಂಕಾರವೂ ಅಲ್ಲ. ಎಚ್ಚರವು ತ್ರಿಪುಟಿಯ ರಾಜ್ಯವಾದರೂ ಅರಿತದ ಭಾವದಲ್ಲಿ ಅದ್ವೈತದ ಸಮಾಧಿಯಿದೆ, ಅರಿವಿನ ಕ್ರಿಯೆಯಲ್ಲಿ ದ್ವೈತದ ಪ್ರಪಂಚವಿದೆ. ಅರಿವು ಒಂದು ತುದಿಗೆ ಕರ್ತೃವಿನ ಐಕ್ಯತೆದಲ್ಲಿ ಲೀನವಾದರೆ ಇನ್ನೊಂದು ತುದಿಗೆ ಕ್ರಿಯಾಕರ್ಮಗಳ ಅನೇಕತ್ವದಲ್ಲಿ ವ್ಯಾಪಿಸಿಕೊಂಡಿದೆ.

× × × ×

ಜೀವನದ ಪ್ರತಿಮುಹೂರ್ತದಲ್ಲಿ ಮೂರು ಕ್ರಿಯೆಗಳು ಸಾಗಿವೆ. ಜೀವವು ಅನಾದಿ ಇಚ್ಛೆಪ್ರೇರಿತವಾಗಿ ಸ್ವಯಮೇವ ಕಾರ್ಯಪ್ರವೃತ್ತವಾಗುವದು; ಕ್ರಿಯಾಸಂಪರ್ಕದಿಂದ ಜ್ಞಾನವಾಗುವದು, ಈ ಜ್ಞಾನದಿಂದ ಅನಾದಿ ಇಚ್ಛೆಯ ಸ್ವರೂಪವು ಪ್ರಕಟವಾಗುವದು. ಈ ರಾಟಾಳವು ಎಂದೆಂದಿಗೂ ಸುತ್ತುತ್ತಲಿದೆ. ಹಸಿದ ಕೂಸು ಹಸಿವೆಯೆಂದು ಸ್ಪಷ್ಟವಾಗಿ ಅರಿಯದೆಯೂ ಅನ್ನಕ್ಕಾಗಿ ಹಾತೊರೆಯುವದು. ಅದನ್ನು ಉಣ್ಣುವ ಕ್ರಿಯೆಯಿಂದಲೆ ಅನ್ನದ ಜ್ಞಾನವನ್ನು ತಿಳಿದುಕೊಳ್ಳುವದು. ಅದರ ಪರಿಣಾಮ, ಪರಿಪಾಕ, ತೃಪ್ತಿಗಳಿಂದಲೆ ಇಚ್ಛೆಯ ಸ್ವರೂಪವನ್ನು ತಿಳಿದುಕೊಳ್ಳುವದು. ಸಜ್ಞ ಇಚ್ಛೆ, ಅಜ್ಞ ಇಚ್ಛೆಗಳೆರಡೂ ಕರ್ಮಕ್ಕೆ ದೂಡುವವು. ಕರ್ಮದಿಂದಲೆ ಜ್ಞಾನವಾಗುವದು. ಇಚ್ಛಾಪೂರ್ತಿಗಾಗಿ ನಡೆದ ಕರ್ಮವೇ ಪ್ರವೃತ್ತಿ, ಬಹಿರ್ಮುಖತೆ. ಇಚ್ಛೆಯ ಸ್ವರೂಪವನ್ನೇ ತಿಳಿದುಕೊಳ್ಳುವ ಕರ್ಮವೇ ನಿವೃತ್ತಿ, ಅಂತರ್ಮುಖತೆ. ಫಲಭರಿತವಾದ ಕೊಂಬೆ ಕೊಂಬೆಗಳನ್ನು ಬಿಟ್ಟು ನೆಲದೊಳಗಡಗಿರುವ ಗಡ್ಡೆ ಬೇರುಗಳೊಳಗಿನ ಬೀಜಕ್ಕೆ ಗಂಟು ಬೀಳುವ ವಿಜ್ಞಾನಮಾರ್ಗವೇ ಇದು. ಭೌತಿಕವಿಜ್ಞಾನವೂ ಒಡವೆ

ಒಡವೆಗಳೊಳಗಿನ ಅದರತನವನ್ನೆ ತತ್+ತ್ವವನ್ನೆ ಹುಡುಕಲು ಹವಣಿಸು ವದು; ಜಗದನಾದಿ ಇಚ್ಛಾಸ್ವರೂಪವನ್ನು ತಿಳಿದುಕೊಳ್ಳುವ ಜ್ಞಾನ ಕರ್ಮದಲ್ಲಿ ತೊಡಗಿ ಜೀವನುವಾಗಿ ಮುಕ್ತನಾಗಹತ್ತುವನು.

× × ×

ಸಾಮಾನ್ಯ ಅನುಭವದಲ್ಲಿಯೂ ಅಸಾಮಾನ್ಯ ಅನುಭಾವದಲ್ಲಿಯೂ ಒಂದು ಸಾದೃಶ್ಯವಿದೆ. ಜ್ಞಾನೇಂದ್ರಿಯಗಳಿಂದ ನಮಗಾಗುವ ಜಗತ್ತಿನ ಜ್ಞಾನವು ಗುಣಾವಳಿಗಳದಲ್ಲದೆ ಮತ್ತೇನು? ಈ ಜ್ಞಾನವೂ Matter ದ ಅಕ್ಷಮತ್ವವನ್ನೂ, ಅಗಮ್ಯತ್ವವನ್ನೂ, ಅನಂತತ್ವವನ್ನೂ ಸಾರಿ ಅದಕ್ಕೂ ಬ್ರಹ್ಮಪಟ್ಟವನ್ನೇ ಕಟ್ಟುವದಿಲ್ಲವೆ? ಅನುಭಾವವಾದರೂ ತನ್ನ ವಿಷಯದ ಬಗ್ಗೆ ಹೆಚ್ಚೇನು ಹೇಳಿದೆ? ಅನುಭವಕ್ಕೂ ಅನುಭಾವಕ್ಕೂ ಏನು ಹೆಚ್ಚು ಕಡಿಮೆ? ಸಕ್ಕರೆಯ ಸಿಹಿಯನ್ನು ತಿಳಿದಷ್ಟಕ್ಕೆ ಎಲ್ಲ ಫಲಜಾತಿಗಳ ಸಿಹಿಯ ಅನುಭವವು ಅವುಗಳ ಪ್ರತ್ಯಕ್ಷಾನುಭವವಿಲ್ಲದೆ ವರ್ಣನೆ ಮಾಡಲು ಸಾಕಾಗು ವಷ್ಟಾದರೂ ಬರುವದು ಸಾಧ್ಯವೇ? ಕಣ್ಣಿನಿಂದ ಬರುವ ಅನುಭವವು ಕಿವಿ ಯಿಂದ ಬರಬಹುದೆ? ಯಾವ ಅನುಭವವೂ ಜ್ಞಾನಿಯ ಪರಿಪಾಕ, ಹಾಗು ಜ್ಞಾನಸಾಧನಗಳ ಶಕ್ತಿಪಾಟವನ್ನೇ ಅವಲಂಬಿಸಿದೆ. ನಮಗೂ ಗಿಡಗಳು ಕಾಣಿಸುವವೆಂದಷ್ಟಕ್ಕೆ ಜಗದೀಶಚಂದ್ರರಿಗೆ ಅವುಗಳ ವಿಷಯದ ಜ್ಞಾನವಿರು ವಷ್ಟು ನಮಗೇಕಿಲ್ಲಾ? ಅವರ ಅಭ್ಯಾಸ ಬಲ ಹಾಗು ಅವರ ಯಂತ್ರಸಾಮಗ್ರಿ ನಮ್ಮಲ್ಲಿಲ್ಲ; ಇದೇ ಕಾರಣ. ಆದರೆ ಅನುಭವಕ್ಕೂ ಅನುಭಾವಕ್ಕೂ ಒಂದು ದೊಡ್ಡ ಭೇದವಿದೆ. ಅನುಭವವು ಜಗತ್ತಿನ ಕಾರಣವನ್ನು ಹುಡುಕುತ್ತಿದೆ; ಅನುಭಾವವು ಜಗತ್ತಿನ ಕರ್ತೃವನ್ನೆ ಹುಡುಕುತ್ತಿದೆ.

X X X X

ಅನುಭವಕ್ಕೆ ತಿಳಿಯಾದ, ಹರುವಾದ, ಸ್ಥಿರವಾದ ಎಚ್ಚರವೆ ಬೇಕು. ಅದಷ್ಟೆ ಸಾಕು. ಅನುಭಾವಕ್ಕೆ ಇದೇ ಜಾತಿಯ ಎಚ್ಚರವೆ ಬೇಕು; ಆದರೆ ಅದು ಕನಸಿನಾಚೆಯ ನಿದ್ದೆಯಲ್ಲ. ನಿದ್ದೆಯಾಚೆಗಿನ ಎಚ್ಚರ. ನಿದ್ದೆಯ ಆಚೆಗೊಂದು ಎಚ್ಚರದ ಹಿಮಾಲಯವಿದೆ. ಆದರ ಎತ್ತರದಿಂದ ಬಹಳ

ವಿಸ್ತಾರದ ಪ್ರಶ್ನೆಯು ಗೋಚರವಾಗುವದು. ಈ ಎತ್ತರದ ಮೇಲಿನ ಎಚ್ಚರಕ್ಕೆ 'ಸಮಾಧಿ' ಎಂದು ಹೇಳುವರು. ಪರ ತತ್ತ್ವವು ಅತೀಂದ್ರಿಯವೆಂದು ಜ್ಞಾನಿಗಳು ಹೇಳಿದ್ದಾರೆ. ಆದರೆ, 'ರಸೋಽವೈಸಃ' 'ಬ್ರಹ್ಮಸಂಸ್ಪರ್ಶಮಶ್ನುತೆ' ಅದು ಓಂಕಾರ ಸ್ವರೂಪವು, ಅದು ಪ್ರಾಣ. ಸಾಕ್ಷಿಯಿಂದ ಅದು ಅರಿಯಲಾಗುವದು ಇತ್ಯಾದಿಯಾಗಿ ಹೇಳುವಾಗ ಇಂದ್ರಿಯದ ಭಾಷೆಯ ಅಲಂಕಾರವನ್ನು ಮಾಡಿದ್ದಾರೆ ಎಂದು ಹೇಳಲು ಬರದು. ಸಮಾಧಿಯಲ್ಲಿಯೂ ಅದರದೊಂದು ಸುಷುಪ್ತಿಯಿದೆ ಎಂದು ಬೇಕಾದರೆ ಒಪ್ಪಿಕೊಳ್ಳೋಣ. ಆದರೆ 'ಸಮಾಧಿ' ಯ ಎಚ್ಚರವು ಇಂದ್ರಿಯ ಸದೃಶ ಅನುಭವವುಳ್ಳದ್ದಾಗಿದೆ

X X X X

ಅನುಭಾವವು ಅಂತರ್ಮುಖತೆಯಲ್ಲಿ ಕೊನೆಗಾಣಲಾರದು. ಒಳಗಿನಂತೆ ಹೊರಗೂ, ತನ್ನಂತೆ ಬೇರೆಯವರಲ್ಲಿಯೂ ತನ್ನ ತತ್ತ್ವದ ಪ್ರಭಾವವನ್ನು ಕಂಡಾಗಲೇ 'ಸರ್ವಂ ಬ್ರಹ್ಮ' ದ ಅನುಭವವು ಅನುಭಾವಿಗೆ ಬರುವದು; ಅದರ ಕರ್ತೃತ್ವದ ಪ್ರಮಾಣ ಸಿಗುವದು.

X X X X

ಅನುಭಾವವು ಅನುಭವದ ಒಂದು ಪರಿಣಾಮವು; ಪರಿಪಾಕವು. ಮೊದಲು ಅದೊಂದು ಜ್ಞೇಯ ಪರಿಪಾಕವು. ಅದರಿಂದಾಗುವ ಸೃಷ್ಟಿಜ್ಞಾನವು ಬೇರೆ ತರಗತಿಯದು. ಅನುಭಾವವು ಒಳಗಿನ ಭಾವ ಪರಿಪಾಕವು. ಅದರಿಂದ ಜೀವನ ಸಾಕ್ಷಿಸ್ವರೂಪದ ಆಳವೇ ಬೇರೆ ನೆಲೆಗಾಣುವದು. ಪ್ರಪಂಚದಲ್ಲದೊಂದು ಕ್ರಿಯಾಪರಿಪಾಕವು. ಅನುಭಾವಿಯ ನೈಮಿತ್ತಿಕವಾದ ಕರ್ತೃತ್ವಶಕ್ತಿಯೇ ಬೇರೆ ಜಾತಿಯದಾಗಿ ತೋರುವದು. ಅನುಭವಕ್ಕೂ ಅನುಭಾವಕ್ಕೂ ಸಾದೃಶ್ಯವಿದೆ, ತಾದಾತ್ಮ್ಯವಿಲ್ಲ. ಅನುಭವವು ಅನುಭಾವಕ್ಕೆ ನಿಚ್ಚಣಿಕೆಯಾಗಬಲ್ಲುದಲ್ಲದೆ ಅದೇ ನಿಲುಕಡೆಯಾಗಲಾರದು.

---

## ೨. ಸ್ವತಂತ್ರ ವಿಚಾರ

ಸ್ವತಂತ್ರ ವಿಚಾರ ಮಾಡುವದು ಸುಲಭವಲ್ಲ. ಯಾಕಂದರೆ ಸಾಮಾನ್ಯವಾಗಿ ನಮ್ಮ ಬುದ್ಧಿಯು ಅತಂತ್ರವಾಗಿಯೂ ಪರತಂತ್ರವಾಗಿಯೂ ಇರುವದು. ಬುದ್ಧಿಯು ಅತಂತ್ರವಿದ್ದಾಗ ಸುಸೂತ್ರವಾದ ವಿಚಾರವೇ ಶಕ್ಯವಿಲ್ಲ. ಸೂತ್ರವು ಹರಿದು ಹತ್ತು ದಿಕ್ಕಿಗೆ ಹರಿದುಬಿದ್ದ ಮಣಿಗಣದಂತೆ, ಅಹುದೋ ಅಲ್ಲವೋ ಎಂಬ ಅರೆಮರೆವಿನಲ್ಲಿ ನೆನೆಪಾದ ಕೆಲವು ಮಾತುಗಳು ಮನದ ಪಾಟಿಯ ಮೇಲೆ ಮಸಕು ಮಸುಕಾಗಿ ಮೂಡುವವು. ನಮ್ಮ ಒಳಗಣ್ಣು ಅಷ್ಟು ಹರಿತವಿದ್ದರೆ ಮುಗಿಲಿನಲ್ಲಿ ತೋರುವ ಮೂವತ್ತು ಮೂರು ಕೋಟಿ ಚಿಕ್ಕೆಗಳು ಮನೆಮುರುಕ ಒಕ್ಕಲಿಗನು ತೂರಿದ ಬೀಜಗಳಂತೆ ತೋರುವ ಹಾಗೆ ಅಂಥ ಕಾಲಕ್ಕೇ ಅನೇಕ ವಿಚಾರಗಳು ತಲೆದೋರಿದರೂ ನಮ್ಮ ತಲೆಯಲ್ಲಿ ಅವುಗಳನ್ನು ಪೋಣಿಸಲು ಎಳೆಯೇ ಸಿಗುವದಿಲ್ಲ. ನಾವು ಮೂಢರಂತೆ ಅಥವಾ ಮುಗ್ಧರಂತೆ ಅಥವಾ ಮೂರ್ಖರಂತೆ ಮಿಟಿಮಿಟಿ ಸ್ವರ್ಗದ ಕಡೆಗೆ ಮಿಕಿ ಮಿಕಿ ನೋಡುತ್ತ ಕುಳಿತುಬಿಡುತ್ತೇವೆ.

ಇನ್ನು ಬುದ್ಧಿಯು ಪರತಂತ್ರವಿರುವ ಕಾಲಕ್ಕಂತೂ ಆ ಸ್ಥಿತಿಯು ಅದಕ್ಕೂ ವಿಚಿತ್ರವು. ಮುಕ್ತದ್ವಾರವಿದ್ದ ಪ್ರಸ್ಥದೂಟಕ್ಕೆ ಬರುವ ಅತಿಥಿ ಅಭ್ಯಾಗತರ ತಂಡದಂತೆ ವಿಚಾರಗಳು ಜಂಗುಳಿಯಾಗಿ ಬಂದರೂ ನಮ್ಮವೆಂದು ಅಂತಃಕರಣದಿಂದ ಅನ್ನಲು ಬರುವ ವಿಚಾರಗಳು ಆ ಕಾಲಕ್ಕೆ ಬರುವದು ಅಪರೂಪ. ಬುದ್ಧಿಯು ಸಂಶಯದ ಬಲೆಯಲ್ಲಿ ಬಿದ್ದು ಒದ್ದಾಡುವದು ಅಥವಾ ನೆನಪಿನ ಅಡವಿಯಲ್ಲಿ ಹೊಕ್ಕು ಅಲೆದಾಡುವದು. ಡಂಗುರದಂತೆ ಸಾರಿ ಸಾರಿ ಹೇಳಲು ಯೋಗ್ಯವಾದ ವಿಚಾರಗಳು ಆ ಕಾಲಕ್ಕೆ ಹೊಳೆಯುವದಿಲ್ಲ. ನಮ್ಮ ವಿಚಾರ ಪ್ರಾಂತವು ವಸ್ತುಸಂಗ್ರಹಾಲಯದಂತೆ ಆಗಲವಾಗುವದೇ ಹೊರತು ಪ್ರಾಣಿಯಂತೆ ಬೆಳೆಯುವದಿಲ್ಲ. ಅಂಥ ಕಾಲಕ್ಕೆ ಬರೆದ ಲೇಖನವು ಅಥವಾ ಆಡಿದ ಮಾತು ರತ್ನನಿಧಿಯಾದ ರತ್ನಾಕರನಂತಿರದೆ, ಚಿನಿವಾರನ ಬೊಕ್ಕಸದಂತಿರುವದು.

ಅತಂತ್ರತೆಯು ಅಂಧತಮಸ್ಸಿನಿಂದ ತುಂಬಿದ ಅಸೂರ್ಯಲೋಕ; ಪರತಂತ್ರತೆಯು ದುಃಖಮಯವಾದ ಯಮರಾಜ್ಯ. ಸ್ವಾಭಾವಿಕವಾದ ಸ್ಥಿತಿಯು

ಹೀಗಿರುವಾಗ ಸ್ವತಂತ್ರತೆಯು ಸ್ವರ್ಗದಲ್ಲಿ ವಿಹರಿಸುವದು ಸಸಾರವಲ್ಲ. ಬಹುತರವಾಗಿ ನಮ್ಮ ಮನಸ್ಸು ನೀರಿನಂತಿದ್ದು ಕಂಡ ವಸ್ತುಗಳು ಅಡಗಿದ ಕೂಡಲೇ ತನ್ನಲ್ಲಿ ಮೂಡಿದ್ದ ಅದರ ನೆರಳನ್ನೂ ಮುಳುಗಿಸುವದು. ಮೂಡಿದ ಮುಳುಗಿದ ಗುರುತು ಅದರ ಮೇಲೆ ಉಳಿಯುವದಿಲ್ಲ. ಹೆಚ್ಚಾದರೆ ನಮ್ಮ ಮನಸು ಛಾಯಾಯಂತ್ರದಂತಿದ್ದು ಕಂಡ ವಸ್ತುಗಳು ಕಾಣದ ವೇಳೆಯೂ ಒಮ್ಮೆ ಕಂಡ ಬಹಿರಂಗಾಕಾರವನ್ನು ನಾವು ಕಾಣಬೇಕೆಂದಾಗ ತೋರಿಸುವದು. ಇದೇ ಅತಂತ್ರತೆ. ಪರತಂತ್ರತೆ. ನಮ್ಮ ಸ್ವತಂತ್ರ ಬುದ್ಧಿಯು ಒಬ್ಬ ಶಿಲ್ಪಿಗನಂತಿದೆ. ನಮ್ಮ ಭಾವದಂತೆ ಜಗತ್ತಿನಲ್ಲಿ ಜೀವ ತುಂಬಿಸುವದೊಂದು ಕಾರ್ಯ; ಜಗತ್ತಿನಲ್ಲಿ ಜಂಗಮನಂತಿದ್ದ ಜೀವವನ್ನು ನಮ್ಮ ಭಾವದ ಸಿಟ್ಟಿದರಿನಲ್ಲಿ ಬೊಂಬೆ ಮಾಡಿ ನಿಲ್ಲಿಸುವದೊಂದು ಕಾರ್ಯ; ಈ ಜೀವಭಾವದ ದಾಂಪತ್ಯದ ಅಪತ್ಯಗಳೇ ಈ ವಿಶ್ವರೂಪಗಳೆಂದು ತೋರಿಸುವದೊಂದು ಕಾರ್ಯ. ಈ ಕಾರ್ಯತ್ರಯದಲ್ಲಿ ಲೀಲೆಗೈಯ್ಯುತ್ತಿರುವ ಬುದ್ಧಿಯು ಆನಂದಮಯ ಪ್ರಭುವಿನ ನಾಭಿಕಮಲದಲ್ಲಿಯ ಸರಸ್ವತೀ ಸಮೇತವಾದ ಬ್ರಹ್ಮಶಕ್ತಿಯು ಹೌದು. ಸ್ವ—ತಂತ್ರದಲ್ಲಿದ್ದ ಬುದ್ಧಿಯೇ ಸ್ವತಂತ್ರ ಬುದ್ಧಿಯು. ಇದನ್ನುಳಿದು ಬೇರೆ ಸ್ವತಂತ್ರತೆಯಿಲ್ಲ.

ಪರೋಪ ಜೀವನವೇ ಜೀವನಕ್ಕೆ ಮುಳುವು. ಭುವನವನ್ನೇ ತುತ್ತು ತುತ್ತಾಗಿ ಉಂಡು ಮುತ್ತು ಮುತ್ತಾಗಿ ಉಗುಳಿದ ವ್ಯಾಸ ವಾಲ್ಮೀಕಿಗಳು ಸ್ವತಂತ್ರ ಬುದ್ಧಿಯ ಅವತಾರಗಳು. ಆದರೆ ಭುವನವು ತಾಯಿಯ ಮೊಲೆಯಂತಿದೆ. ಅದನ್ನು ಉಚ್ಛಿಷ್ಟವಾಗಿ ಮಾಡುವ ಕೂಸು ಇನ್ನೂ ಹುಟ್ಟಿಲ್ಲ; ಮುಂದೂ ಹುಟ್ಟಲಾರದು. "ವ್ಯಾಸೋಚ್ಛಿಷ್ಟಂ ಜಗತ್ಸರ್ವಂ" ಎಂಬುದು ಅತ್ಯಾದರದಿಂದಾಡಿದ ಮಾತು. ಹೋಮರ, ಡಾಂಟೆ, ಶೆಕ್ಸಪಿಯರ ಮೊದಲಾದ ಭುವನೋಪ ಜೀವಿಗಳು ಈಶಾವಾಸ್ಯವಾದ ಜಗತಿಯ ಅಮೃತ ಕುಂಭವನ್ನು ಕುಡಿದರು. 'ನಮ್ಮ ವಚನಕಾರರೂ, ನಮ್ಮ ದಾಸವರ್ಯರೂ, ನಮ್ಮ ಮಹಾಕವಿಗಳೂ, ಅಮೃತಾಶನರಾಗ ಹವಣಿಸಿದ ದೇವತಾಂಶರೇ.

ಸ್ವತಂತ್ರ ವಿಚಾರದ ನೆಲಗಟ್ಟೆಂದರೆ ಸನಾತನ ಧರ್ಮದಲ್ಲಿ ವಿಶ್ವಾಸ. "ವಿಶ್ವಂ ಧರ್ಮೇ ಪ್ರತಿಷ್ಠಿತಂ" ಎಂಬುದೇ ಅದರ ಬಿರುದು. ಸ್ವತಂತ್ರತೆಯು ಧರ್ಮದ ಪರ್ಯಾಯ ನಾಮವು. ಪರಧರ್ಮವೆಂದರೇ ಭಯಾವಹವಾದ

ಪರತಂತ್ರತೆ; ಅಧರ್ಮವೆಂದರೇ ಕಲಿಕಾಲವಾದ ಅತಂತ್ರತೆ; ಸ್ವತಂತ್ರತೆಯೇ ಧಾರಣಾಶಕ್ತಿಯು. ಏಕದೇಶದಲ್ಲಿ ಚಿತ್ತವನ್ನು ನಿಲ್ಲಿಸುವದೇ ಧಾರಣೆಯು. ಧಾರಣೆಯಿಲ್ಲದೆ ಯಾವ ವ್ಯಾಪಾರವೂ ನಡೆಯುವದಿಲ್ಲೆಂಬುದು ನಮ್ಮ ವ್ಯವಹಾರದ ಅನುಭವವಿದೆ. ಈ ಧಾರಣೆಯು ವಿಚಾರಸಾಮ್ರಾಜ್ಯದಲ್ಲಿ ನೆಲೆ ನಿಲ್ಲುವದೇ ಸಮಾಧಿಯು— ಸಮವಾದ ಬುದ್ಧಿಯ ಯೋಗವು. ಈ ಏಕಾಗ್ರತೆಯು ದುರ್ಲಭವಾಗುವದರಿಂದಲೇ ಸ್ವತಂತ್ರ ವಿಚಾರದ ಬರವೂ ಅರಬೂ ಬೀಳುವದು. ಒಂದರಂತೆ ಒಂದಿಲ್ಲವಲ್ಲ ಎಂಬ ಒಂದೇ ಮಾತೇ ಮತ್ತೆ ಮತ್ತೆ ಕಂಡು ಮುಂದುಗಾಣದಾದ ಮಂದಮತಿಗೆ ಸ್ವತಂತ್ರ ವಿಚಾರವೆಂಬುದು ಭ್ರಾಂತಿಯೆನಿಸುವದು ಸಹಜವಾಗಿದೆ. ಆದರೆ ಈ ಬುದ್ಧಿಯೋಗವು ಈ ಸಮಾಧಿಯು ಈ ಏಕಾಗ್ರತೆಯು ವಸ್ತುಜಾತಗಳ ಅನೇಕತೆಗೆ ವಿರೋಧಿಯಿಲ್ಲ; ಇಷ್ಟೇ ಅಲ್ಲ— ಈ ಏಕಾಗ್ರತೆಯ ಧರ್ಮದ ಅನುರೋಧದಿಂದಲೇ ಅನೇಕವು ಲೀಲೆಗೈಯುತ್ತಿದೆ. ವರ್ತುಲದ ಕೇಂದ್ರದಲ್ಲಿ ಸೂಕ್ಷ್ಮಾಗ್ರದ ಸೂಜಿಯನ್ನಿಟ್ಟು ಇಡೀ ವರ್ತುಲವನ್ನೇ ನಾವು ತೂಗಿ ಹಿಡಿಯಬಹುದಷ್ಟೆ ಅಂಥ ಆ ಕೇಂದ್ರವೇ ಸ್ವತಂತ್ರ ವಿಚಾರಸಾಮ್ರಾಜ್ಯದ ಸಿಂಹಾಸನ; ಧರ್ಮದ ಗುರುಪೀಠ. ಅಲ್ಲಿ ವಿರಾಜಿಸುವ ಬುದ್ಧಿಗೇ ಸ್ವತಂತ್ರ ವಿಚಾರದ ಸಾಮ್ರಾಟನೆನ್ನಬಹುದು; ಜಗದ್ಗುರುವೆನ್ನಬಹುದು. ಆ ಧರ್ಮಸಾಮ್ರಾಜ್ಯವೇ ಸಿದ್ಧಾಂತಗಳ ನೆಲೆವೀಡು; ಈ ಜಗತ್ತೆಲ್ಲ ದೃಷ್ಟಾಂತಗಳ ನಾಡು. ಕಣ್ಣು ಮುಚ್ಚಿ ಸಿದ್ಧಾಂತಗಳನ್ನು ಮಾಡಬೇಕು; ಕಣ್ಣು ತೆರೆದು ದೃಷ್ಟಾಂತಗಳನ್ನು ನೋಡಬೇಕು. ಸಿದ್ಧಾಂತಗಳ ಅರಸನೇ ದೃಷ್ಟಾಂತಗಳನ್ನಾಳುವನು.

ಸ್ವತಂತ್ರ ವಿಚಾರದ ಇನ್ನೊಂದು ಶ್ರದ್ಧೆಯೆಂದರೆ:— ತಾನು ಕೇಳಿದ ಪ್ರಶ್ನೆಗಳಿಗೆಲ್ಲ ಸಮಾಧಾನಕರವಾದ ಉತ್ತರವನ್ನು ಕೊಡಬಲ್ಲ ಶಕ್ತಿಯು ಅಂತರ್ಯಾಮದಲ್ಲಿರುವದೆಂಬುದು ಮತ್ತು ತಾನು ಹೇಳಿದ ಮಾತನ್ನು ತಿಳಿದುಕೊಳ್ಳಬಲ್ಲ ಶಕ್ತಿಯು ಬಹಿರಂಗದಲ್ಲಿಯೂ ಇರುವದೆಂಬುದು ತನ್ನ ಬುದ್ಧಿಯು ಮತ್ತು ಅಂತರಂಗ ಬಹಿರಂಗ ಶಕ್ತಿಗಳು ಇವು ಮೂರು ಸಹೋದರಗಳಾಗಿವೆ ಎಂಬುದೇ ಆ ಶ್ರದ್ಧೆ. ಆದಕಾರಣವೇ ಸ್ವತಂತ್ರ ವಿಚಾರಗಳು ಕಿವಿಮಾತುಗಳಂತೆ ಮೊದಲು ಕೆಲವರಿಗೇ ತಿಳಿದು ಬರಬರುತ್ತ ಜಯಭೇರಿಯಂತೆ ದಿಙ್ಮಂಡಲವನ್ನೂ ವ್ಯಾಪಿಸುವವು.

ನಿಃಸಂಶಯವೃತ್ತಿಯು ಸ್ವತಂತ್ರವಿಚಾರದ ಕುರುಹಾಗಿದೆ. ಸಂಶಯ ವೃತ್ತಿಯೇ ಧರ್ಮಗ್ಲಾನಿಯ ಕಾರಣವಾಗಿದೆ. ಕಾಲಕಾಲಕ್ಕುಂಟಾಗುವ ಧರ್ಮಗ್ಲಾನಿಯನ್ನು ಹೋಗಲಾಡಿಸಿ ಧರ್ಮದ ನಿಶ್ಚಲ ಸ್ವರೂಪವನ್ನು ಜಗತ್ತಿಗೆ ತೋರಿಸುವದು ಸ್ವತಂತ್ರ ವಿಚಾರಗಳ ಕಾರ್ಯವಾಗಿದೆ. ಎದೆಯಮೇಲೆ ಕೈಯಿಟ್ಟು ಹಾರದ ಹೃದಯದಿಂದ 'ಇದು ಸತ್ಯ'ವೆಂದು ಸಾರಿ ಹೇಳುವ ವೀರ ವಿಚಾರವಂತರು ಕರ್ನಾಟಕಕ್ಕೆ ಬೇಕಾಗಿರುವರು. ಅದೇಕೆ. ಅವರು ಬೇಕಾಗದ ದೇಶವೇ ಇಲ್ಲ; ಅವರು ಬೇಡಾಗುವ ಕಾಲವೇ ಇಲ್ಲ.

ಸ್ವತಂತ್ರ ವಿಚಾರದ ಇನ್ನೊಂದು ಲಕ್ಷಣವೇನೆಂದರೆ:— ಸ್ಪರ್ಶ ಮಾತ್ರದಿಂದ ಅಷ್ಟೇ ತೇಜವನ್ನು ಕೊಡುವ ತೇಜಸ್ವಿ ದೀವಿಗೆಯಂತೆ ತನ್ಮಯನಾದ ಶ್ರೋತೃವಿನಲ್ಲಿ ಸ್ವತಂತ್ರ ವಿಚಾರವಂತನು ತನ್ನಂಥ ಜ್ಯೋತಿಯನ್ನೇ ಪ್ರಕಟಿಸುವನು. ರಾಮಪಾದಗಳ ಶಕ್ತಿಯು ಸ್ವತಂತ್ರ ವಿಚಾರಗಳ ಮೊಸಲ ಸೊತ್ತಾಗಿದೆ. ಸಾವಿರಾರು ವಿದ್ಯುದ್ದೀಪಗಳನ್ನು ಒಮ್ಮಿಗಲೆ ಹೊತ್ತಿಸುವ ಕೀಲದಂತೆ ಸ್ವತಂತ್ರ ವಿಚಾರವಂತನು ಬುದ್ಧಿಗೆ ಮುಸುಕಿದ ಅಮಾಸಿಯನ್ನು ತನ್ನ ಬುದ್ಧಿಮಂತ್ರದಿಂದ ಹುಣ್ಣಿವೆಯಾಗಿ ಮಾಡುವನು. ಇಂಥ ವಿಚಾರವಂತರಾಗುವದೇ ನಮ್ಮ ಧ್ಯೇಯ. ಈ ಕ್ರಾಂತಿಯೇ ದಿವ್ಯಸಂಕ್ರಾಂತಿ.

---

## ೩. ವಿಚಾರ

ಕನ್ನಡಿಗರು ವಿಚಾರಕ್ಕೂ ವಿಚಾರೋತ್ಪಾದಕ ಕೇಂದ್ರಿಯಕ್ಕೂ 'ಬಗೆ' ಎಂಬ ಒಂದೇ ಹೆಸರನ್ನು ಇಟ್ಟಿರುವರು. ಬಗೆಗಳನ್ನು ತೋರ್ಪಡಿಸಲಿಕ್ಕೂ ಬೇರ್ಪಡಿಸಲಿಕ್ಕೂ ನಮ್ಮ ಬಗೆ ಬಗೆಯುವದು. ಬಗೆಯೆಂದರೆ ಜಾತಿ; ಬಗೆಯೆಂದರೆ ರೀತಿ. ರೀತಿ ಜಾತಿಗಳ ಅನೇಕತ್ವವನ್ನು ಬಿಂಗಡಿಸಿ ತೋರಿಸುವದೇ ಬಗೆ. ಶಿವಜೀವರ ಸಂಬಂಧದಂತೆ, ಬಗೆ ಹುರುಳುಗಳ ಸಂಬಂಧವಿರುವದು.

ಹುರುಳೊಂದು; ಬಗೆ ಬೇರೆ. ಶಿವನೊಬ್ಬ; ಜೀವ ಹಲವು. ಬಗೆಗಳೆಂದರೆ ಹುರುಳಿನ ಕದಿರುಗಳು. ಈ ಕದಿರುಗಳಿಂದಲೇ ಹುರುಳಿನ ಬೆಳಕು ಹರಡುವದು. ಹುರುಳು ಉಗಮ; ವಿಚಾರವು ಪ್ರವಾಹ.

ಒಳಗಿಲ್ಲದ ಹೊರಗಿಲ್ಲ. ಒಡಲು ಕಂಡರೂ ಜೀವ ಕಾಣದು. ಮಾತು ಕೇಳಿಸಿದರೂ ತಿಳಿವು ತೋರದು. ತೋರುವುದರ ಹಿಂದೆ ತೋರದ್ದೊಂದಿದೆ. ಹುರುಳಿನಿಂದ ವಿಚಾರ, ವಿಚಾರದಿಂದ ವ್ಯವಹಾರ-ಆಚಾರ. ವ್ಯವಹಾರದ ಜೀವ ವಿಚಾರ; ವಿಚಾರದ ಆತ್ಮತತ್ತ್ವ ಹುರುಳು. ದೇಹಾತ್ಮಗಳ ಸಂಗಮ ಭೂಮಿಯಾದ ಜೀವದಂತೆ, ತತ್ತ್ವ ಮತ್ತು ವ್ಯವಹಾರಗಳಿಗೆ ವಿಚಾರವು ಸೇತುವಾಗಿದೆ. ಈ ಸೇತುವಿನಿಂದಲೇ ತತ್ತ್ವಗಳು ವ್ಯವಹಾರದಲ್ಲಿ ಅವತರಿಸುವವು. ಈ ಸೇತುವಿನಿಂದಲೇ ವ್ಯವಹಾರದ ಉಚ್ಚ್ರಾಯವು ತತ್ತ್ವರೂಪವಲ್ಲಾಗುವದು. ತತ್ತ್ವ ವ್ಯವಹಾರಗಳ ಪರಸ್ಪರ ಪರಾಙ್ಮುಖತೆಗೆ ವಿಚಾರ ಲೋಪವೇ ಕಾರಣವು.

ಗಿಡಕ್ಕೂ ಬಿತ್ತಿಗೂ ಇದ್ದ ಹತ್ತುಗಡಿಯೆ ವ್ಯವಹಾರಕ್ಕೂ ವಿಚಾರಕ್ಕೂ ಇರುವದು. ವ್ಯವಹಾರದಲ್ಲಿ ಅಂಕುರಿಸಿದ ಅಥವಾ ಅಂಕುರಿಸಲಾರದ ವಿಚಾರವು ನಾಶಹೊಂದುವದು. ವಿಚಾರದಿಂದಲೇ ವ್ಯವಹಾರವು ಹುಟ್ಟಿದರೂ ವ್ಯವಹಾರದಿಂದಲೇ ವಿಚಾರವು ಸಫಲವಾಗುವದು. ಹುರುಳು ಕಾಣದವರಿಗೆ ವಿಚಾರಗಳು ತೋರವೆಂದೂ ವಿಚಾರ ತೋರದವರಿಗೆ ವ್ಯವಹಾರವು ನೀಗದೆಂದೂ ನನ್ನ ಮತ.

---

## ೪. ವಿಚಾರ

ಮನಸ್ಸಿನಂತೆ ಸರಾಗವಾಗಿ ಎಲ್ಲವೂ ಕೈಗೂಡುತ್ತಿದ್ದರೆ, ಕೊನೆಗಾಣುತ್ತಿದ್ದರೆ ಯಾರೂ ವಿಚಾರ ಮಾಡುತ್ತಿದ್ದಿಲ್ಲ. ಮೇಲ್ತರಗತಿಯ ಕ್ರಿಮಿಕೀಟಕಗಳಂತೆ ಎಲ್ಲ ಕ್ರಿಯೆಯೂ ಹುಟ್ಟುಗುಣದಿಂದ, ಸಹಜಪ್ರವೃತ್ತಿಯಿಂದ ಸಾಗಬಹುದಾಗಿತ್ತು. ಇಚ್ಛೆಯಂತೆ ಕ್ರಿಯೆಯಾಗದ್ದರಿಂದಲೆ ವಿಚಾರ ಮಾಡಬೇಕಾಗುತ್ತದೆ. ಈ ವಿಚಾರ ಪ್ರಪಂಚಕ್ಕೆ ನಾವು ಜ್ಞಾನ ವೆನ್ನುತ್ತೇವೆ.

ಒಂದು ಸಣ್ಣ ವಿಚಾರದಲ್ಲಿಯೂ ನಾಲ್ಕು ಅಂಗಗಳಿರುತ್ತವೆ. ಹೇಳುವವನಿಗೆ ಅದು ಅವನ ಅನುಭವ. ಹೇಳುವಾಗ ಅದೊಂದು ಮನಸ್ಸನ್ನು ಮಾತಿನಲ್ಲಿ ಮೂಡಿಸುವ ರೀತಿ. ಹೇಳಿದ ಮೇಲೆ ಅದು ಅಂತರಂಗ ಅಥವಾ ಬಹಿರಂಗ ಪ್ರಪಂಚಕ್ಕೆ ಸೇರಿದ ವಸ್ತು ವರ್ಣನಾ ವಿಷಯ. ಕೇಳಿದವರಿಗೆ ಅದು ತಂತಮ್ಮ ಅನುಭವದೊಡನೆ ಸರಿದೂಗಿ ನೋಡಿ ಸಂಮತಿ, ಅಸಂಮತಿ, ಅರ್ಧಸಂಮತಿ, ಭಿನ್ನಾಭಿಪ್ರಾಯಗಳೊಡನೆ ಸ್ಮೃತಿಭಂಡಾರಕ್ಕೆ ಸೇರಿಸಬೇಕಾದ ಅನುಭವ ವಿಷಯ. ಅಂತೂ ವಿಷಯವಿಲ್ಲದ ವಿಚಾರವಿಲ್ಲ. ವಿಚಾರಿಯಿಲ್ಲದೆಯಾದರೂ ವಿಚಾರವುಂಟೆ? ಅದೂ ಇರಲಿ. ಆ ವಿಚಾರಕ್ಕೆ ವಿಶಿಷ್ಟತೆಯಿರದಿದ್ದರೆ ತಮ್ಮ ವಿಚಾರವೆಂಬ ಹಮ್ಮು ಏನು? ಇಷ್ಟಾಗಿ, ಆ ವಿಚಾರವು ಬೇರೆ ವಿಚಾರಿಗಳ ಮನನಕ್ಕೆ, ಆಕಲನೆಗೆ ನಿಲುಕದೆ ಹೋದರೆ, ವಿಷಯದಲ್ಲಿಯೋ, ವಿಚಾರಿಯಲ್ಲಿಯೋ, ಹೇಳಿದ ರೀತಿಯಲ್ಲಿಯೋ ದೋಷವಿರಬೇಕೆಂಬ ಬೇರೊಂದು ವಿಚಾರವೇ ಹುಟ್ಟುವದು. ತೊಡಕಿದ್ದಲ್ಲಿಯೇ ವಿಚಾರಕ್ಕವಕಾಶವುಂಟಾಗುವದು.

ವಿಚಾರವು ವಿಚಾರಿಯನ್ನಷ್ಟೆ ಅವಲಂಬಿಸಿದ್ದರೆ ಮನಸ್ಸಿನ ಮನೋರಾಜ್ಯವೂ, ಕನಸಿನ ಸ್ವರ್ಗವೂ ನಿಜದ ನೆಲೆಯಾಗುತ್ತಿತ್ತು. ಆತ್ಮಾನುಸಂಧಾನವು ಕೆಲವಮಟ್ಟಿಗೆ ಅಂಥ ಛಾಯೆಯುಳ್ಳದ್ದು. ಪಾರಲೌಕಿಕ ವಿಚಾರವು ಸ್ವಯಂ ಪ್ರಮಾಣವಾಗುವ ಅಥವಾ ಅಪ್ರಮಾಣವೆನಿಸುವ ಕಾರಣವೇ ಇದು. ವಿಚಾರವು ಕೇವಲ ವಿಷಯದ ವೈಗುಣವಾಗಿದ್ದರೆ, ಮನಸೊಂದು ಯಂತ್ರವಾಗಿ, ಮಾತೊಂದು ಧ್ವನಿಯಾಗಿ, ವಿಚಾರವು ಪ್ರಾಕೃತಿಕ ಕ್ರಿಯೆಯಾಗಿ, ಅನುಭವವು ಭೌತಿಕ ಪರಿಣಾಮವಾಗಬಹುದಾಗಿತ್ತು. ಆದರೆ ಯಾಂತ್ರಿಕನಿಲ್ಲದ ಯಂತ್ರವು ಇನ್ನೂ ದೃಷ್ಟಾಂತಕ್ಕಾದರೂ ತಯಾರಾಗಿಲ್ಲ. ವಿಷಯನಿಷ್ಠ ವಿಚಾರವೆನ್ನುವದು ವಿಚಾರಿಯ ವಿಕಾರ ರಹಿತತೆಯನ್ನು ತೋರಿಸುವದಷ್ಟೆ. ಪ್ರಕೃತಿಯ ಮೇಲೆ ಮೂಡಿಸಿದ ಪುರುಷನ ಮುದ್ರೆಯು ಆವನವನ ಪುರುಷಾರ್ಥದ ವಿಚಾರವಾಗಿರುವದರಿಂದ ವಿಷಯವು ಕೇವಲ ಪ್ರತ್ಯೇಕತೆಯನ್ನು ಹೊಂದಿದಾಗ ಪುರುಷನು ಕೈವಲ್ಯಸಮಾಧಿಯಲ್ಲಿ ಸೇರಿ ವಿಚಾರವು ನಿರ್ವಿಚಾರದಲ್ಲಿ ಮುಳುಗಿ ಬಿಡುತ್ತಿತ್ತು. ವಿಚಾರವು ಮಾತಿನ ಮಲಕೂ ಅಲ್ಲ. ಕೇಳಿದರೆ ಶಬ್ದ, ತಿಳಿದರೆ ಅರ್ಥವಾಗುವ ಶಬ್ದಾರ್ಥಸಾಂಗತ್ಯದಲ್ಲಿ ಜನಿ

ಸಿದ ವಿಚಾರವು ವಿಚಾರಿಯ ಅನುಭೂತಿಯನ್ನೂ ವಿಷಯದ ಗುಣವನ್ನೂ ಏಕಜೀವ ಮಾಡುವ ಕಲೆಯು. ವಿಚಾರವು ಗುಹಾಧ್ವನಿಯಾದರೆ ಮುಂದಿಯ ಸೊತ್ತು; ಗೂಢಾರ್ಥದ ಕವಡುಗಂಟಕವಾದರೆ ಮನದೊಳಗೆ ಮುಚ್ಚಿಟ್ಟ ಗಂಟು. ಶೀಲದ ಮುದ್ರೆ ಮೂಡಿದ ಮುಖದಂತೆ ಮನದ ಮುದ್ರೆ ಬಿದ್ದ ಮಾತೂ ಹೃದಯಂಗಮವಾಗುವವು. ಒಂದು ಹೃದಯದಿಂದ ಹುಟ್ಟಿದುದು ಇನ್ನೊಂದು ಹೃದಯವನ್ನು ಸುಲಭವಾಗಿ ಸೇರಿದರೆ ಆಶ್ಚರ್ಯವಲ್ಲ.

ಅಂತೂ ವಿಚಾರದಲ್ಲಿ ವಿಷಯ ನಿಷ್ಠೆಯಿದೆ; ವ್ಯಕ್ತಿನಿಷ್ಠೆಯಿದೆ. ವಿಶಿಷ್ಟತೆಯಿದೆ; ಸಾಮಾನ್ಯತೆಯಿದೆ. ವಿಶಿಷ್ಟತೆ ವ್ಯಕ್ತಿಗೆ ಸೇರಿದುದು. ಸಾಮಾನ್ಯತೆ ವಿಷಯಕ್ಕೆ ಸೇರಿದುದು. ಮಾತಿನ ಕ್ರಿಯೆಯು ಜೀವಿಗಳ ಭೇದ ಪ್ರಪಂಚದಿಂದುಂಟಾದ ಅನಿವಾರ್ಯ. ತಿಳುವಳಿಕೆಯ ಪರಿಣಾಮವು ಸುಖದುಃಖ ಸಂವೇದನಾಭಾವೈಕ್ಯದ ಸಾತ್ತ್ವಿಕಲೋಕದ ಪ್ರಕೃತಿ. ಈ ನಾಲ್ಕು ಅಂಗಗಳು, ಅಥವಾ ಶಕ್ತಿಗಳು ಭೂಮಿತಿಯೊಳಗಿನ ಆಕೃತಿಗಳ ಗೆರೆಗಳಂತೆ ಕಲ್ಪನೆಯನ್ನು ಮೂಡಿಸಲು ಬರೆದಂತೆ ತೋರಿದರೂ ಅವುಗಳ ಪರಸ್ಪರ ಪರಿಣಾಮದಿಂದುಂಟಾಗುವ ವಿಚಾರಾಮೃತವು ಶಬ್ದ ಅರ್ಥಗಳನ್ನು, ವಿಷಯ ವಿಚಾರಿಗಳನ್ನು, ಜೀವಜೀವಿಗಳನ್ನು ಹೊಂದಿಕೆಯಾಗಿ ಒಂದುಗೂಡಿಸುವುವು. ವಿಚಾರದ ಈ ನಾಲ್ಕು ಮೂಲೆಗಳು ಒಂದು ಜೀವದ ನಾಲ್ಕು ಮುಖಗಳಿದ್ದಂತೆ. ವಿಚಾರದ ಚತುರ್ಮುಖತೆಯನ್ನರಿಯುವದು ವಿಚಾರಶಾಸ್ತ್ರದ ಮೊದಲನೆಯ ವಿಚಾರ.

'ಸತ್ಯವನ್ನರಿತವನು ಸತ್ತಂತೆ ಇರಬೇಕು.' 'ಸತ್ಯವನ್ನರಿತವನು ಸತ್ತರೂ ಸಾರುವನು' 'ಸತ್ಯವನ್ನರಿಯುವದು ಸತ್ತರೂ ಸಾಧ್ಯವೇ' ಈ ಮೂರು ಮಾತುಗಳಲ್ಲಿ ಅನುಭವದ ಭೇದವಿದೆ, ವಿಷಯಗುಣಜ್ಞಾನದ ಭೇದವಿದೆ. ಮೊದಲ ಮಾತು ಸತ್ಯಜ್ಞಾನಿಯು ನಿರ್ವಿಕಾರನಾಗಿ, ನಿಷ್ಕಾಮ್ಯನಾಗಿ, ನಿರ್ವಿಷಯಿಯಾಗಿ ಇರಬೇಕೆಂದು ಹೇಳುವದು; ಎರಡನೆಯ ಮಾತು ಸತ್ಯಜ್ಞಾನಿಗೆ ಸಾವಿನ ಅಂಜಿಕೆಯಿರದು ಎಂದು ಬೋಧಿಸುವದು; ಮೂರನೆಯ ಮಾತು ಸತ್ಯದ ಅನಂತತೆಯನ್ನು ಸಾರುವದು. ಒಬ್ಬನಿಗೆ ಇರುವಿಕೆಯ ಸಮಸ್ಯೆ, ಇನ್ನೊಬ್ಬನಿಗೆ ಕರ್ಮದ ಕೂಟಪ್ರಶ್ನೆ; ಮತ್ತೊಬ್ಬನಿಗೆ

ವಿಷಯಜ್ಞಾನದ ಒಗಟು. ಅವರವರಿಗೆ ಅವರವರ ಉತ್ತರ. ಎಲ್ಲರಿಗೂ ಸತ್ಯದ ವಿವಿಧ ಮುಖದರ್ಶನ. ಇದರಲ್ಲಿ ಒಂದು ಸುಳ್ಳು ಒಂದು ಸರಿ ಎನ್ನುವಂತಿಲ್ಲ.

———

## ೫. ಬಳಗ

'ಅ' ಕಾರವು ನಾದಮಯ ಜಗತ್ತಿನ ಮೂಲವಿದ್ದಂತೆ, ಅಪ್ಪ, ಅವ್ವ ಅಜ್ಜ, ಅಮ್ಮ, ಅತ್ತಿಗೆ, ಅಜ್ಜಿ, ಅತ್ತೆ, ಅಕ್ಕ, ಅಣ್ಣ, ಈ 'ಅ' ಕಾರದ ಬಳಗವು ಜೀವಮಯ ಜಗತ್ತಿನ ಮೂಲವಿದೆ. ಬಿಡಿಯಾಗಗೊಡದೆ ಬಳಗಗೊಳಿಸುವ ಈ ಹದವು ಮಾನವನ ಮಿದುಳಿನಲ್ಲಿ ಹೊಳೆಯಿತು; ಅವನ ಎದೆಮುಗುಳಿಗೆ ತಿಳಿಯಿತು. ಬಿಡಿತನದ ಬಿಕ್ಕಟ್ಟಿನಲ್ಲಿ ಇಡಿತನದ ಒಕ್ಕಟ್ಟು ಹುಟ್ಟಿಸುವ ಹುಟ್ಟೇ ಬಳಗ. ಮನೆತನದೊಳಗಿನ ಮಂದಿ ಜೇನ್ನೊಣಗಳು; ನನ್ನಿಯೇ ಜೇನು. ಜೇನು ಇಲ್ಲದ್ದು ಹುಟ್ಟಲ್ಲ; ಪ್ರೀತಿಯಿಲ್ಲದುದು ಬಳಗವಲ್ಲ.

ಈಗಿನ ಧರ್ಮಗ್ಲಾನಿ ಇಲ್ಲಿ ಇದೆ. ಹಕ್ಕಿಯೊಳಗಿನ ಹಸುಗಳಿಗಿಂತ ಒಂದಿಷ್ಟು ಲೇಸಾಗಿರುವೆವು ನಾವು. ಅಥವಾ ನಮಗೆ ಧೇವರು ದಯ ಪಾಲಿಸಿರುವ ಶಕ್ತಿಗಳನ್ನು ಲೆಕ್ಕಿಸಿ ವಿಚಾರಮಾಡಿದರೆ ನಾವು ಹಕ್ಕಿಯೊಳಗಿನ ಹಸುಗಳಿಗಿಂತ ತುಸು ಕೀಳಾಗಿರುವೆವು. ನಾವು ಈ ಶಕ್ತಿಯನ್ನು ಬೀಳುಗೊಳಿಸಿರುವೆವು; ಕೀಳುಗೊಳಿಸಿರುವೆವು; ಹಾಳುಗೊಳಿಸಿರುವೆವು. ಬಳಿಸಿದಂತೆ ಅಳಿಯದೆ ಬೆಳೆಯುವದೆಂದರೆ ಪ್ರೀತಿಯೊಂದೇ. ಪ್ರೀತಿ ಸಾಕ್ಷಾತ್ ಅಮೃತ; ಸಾವಿಲ್ಲದುದು. ಈ ಅಮೃತಸಂಜೀವಿನಿಯ ಸ್ಪರ್ಶವಿಲ್ಲದುದರಿಂದ ಬಳಗವು ಪ್ರೇತಗಳ ಭೂತಗಳ ಸಮೂಹವಾಗಿದೆ. ಪ್ರೀತಿಯಿಲ್ಲದಲ್ಲಿ ಭೀತಿ. ವಿಶ್ವಂಭರನಿಗೆ ಶೂನ್ಯತೆ ಅಸಹ್ಯ.

ಪ್ರೀತಿಯು ಬಿತ್ತಿ ಬೆಳೆಕೊಳ್ಳುವ ಹೊಲವಾಗಬೇಕು ಬಳಗ. ಪ್ರೀತಿಯ ಬೆಳವಲ ನಾಡಾಗಬೇಕು ಇಳೆ. ಇದಕ್ಕಾಗಿ ಬಳಗ ಸಾಧನ; ಅಲ್ಲಿಯವರೆಗೆ ಆರಂಭದ ಸಿದ್ಧಿ.

———

## ೬. ನೆಚ್ಚು

೧. ನೆಚ್ಚು ನೆಚ್ಚೆಂಬಿರಿ, ಇದೇನಿದು ನೆಚ್ಚು ? ನೆಚ್ಚು ದೇವರ ಅಚ್ಚು; ನೆಚ್ಚಿಲ್ಲದವ ಹುಚ್ಚು. ನೆಚ್ಚಿದವನು ಅಚ್ಚಹಾದಿ ಹಿಡಿಯುವನು. ನೆಚ್ಚಿಲ್ಲದ ನಡತೆ ಹುಚ್ಚುಪಚ್ಚಾಗುವನು.

೨. ನೆಚ್ಚು ದೇವರ ಹುಚ್ಚು; ದೇವರನ್ನು ಹಿಡಿಯಬೇಕೆಂಬ ಹುಚ್ಚು. ದೇವರು ಹಿಡಿಸಿದ ಹುಚ್ಚು. ಯಚ್ಚಾವತ್ತು ಜಗತ್ತು ನೆಚ್ಚಿನ ಮೆಚ್ಚು. ಇದರ ಮೈಮೆಯನ್ನು ನೆಚ್ಚಿಗೆ ಮೆಚ್ಚಿದವನೇ ಬಲ್ಲನು.

೩. ನೆಚ್ಚೆಂದರೆ ಹಮ್ಮಿನ ಹಂಬಲಕ್ಕಿದ್ದ ಬೆಂಬಲವು. ನೆಚ್ಚೆಂದರೆ ಕಾಣದ ಕಸವು. ನೆಚ್ಚೆಂದರೆ ಹುಟ್ಟಿನ ಕೆಚ್ಚು. ನೆಚ್ಚಿಗೆ ಹಗೆಯೇ ಇಲ್ಲ.

೪. ಬಿಚ್ಚು ಕವಡಗಂಟಕವ; ಹೆಚ್ಚು ಹೆದರಿಕೆಯೊಡಲ; ಮುಚ್ಚಿ ಬಿಡು ಸಂಶಯ ಪಿಶಾಚಿಯನು; ಚುಚ್ಚಿ ಒಡಿ ಮೂಢತೆಯ ಕುರವನು ನುಚ್ಚು ನುರಿಯಾಗಲಿ ಇಚ್ಛಾ ಜಾತಿ, ಮೆಚ್ಚು ಮುಡುಪಾಗಲಿ ಜೀವ ಕುಸುಮ. ಆ ಮೇಲೆ ಎಚ್ಚತ್ತು ನೋಡು ನಿನ್ನೊಳಗೆ ನೀನೇ, ನೆಚ್ಚಿನ, ನಿಚ್ಚದ, ನಿಚ್ಚಟವಾದ, ನಿಚ್ಚಳವಾಗಿ ಬೆಳಗುವ ಬೆಳಕ.

೫. ನೆಚ್ಚೆಂಬದು ಆತ್ಮದ ನೇತ್ರ; ನೆಚ್ಚಿಲ್ಲದ ಅಂಧನ ಅಂಧಃಕಾರವು ಜನ್ಮಜನ್ಮಾಂತರಕ್ಕೂ ಬೇಡ. ನೆಚ್ಚಿಗಿಂತ ಹೆಚ್ಚಿಲ್ಲ.

---

## ೭. ನೋವಿನ ಬೆಲೆಯು

ಏನಿರಬೇಕು ಏನಿರಬಾರದು ಎಂದು ತಿಳಿದುಕೊಳ್ಳುವದು ಅರಿವು. ಏನಿದೆ ಏನಿಲ್ಲ ಎಂದು ತಿಳಿಯದಿರುವದೇ ಮರೆವು. ಅರಿವು ದೇವರ ಅರುಹು. ಮರೆವು ಜೀವನ ಕುರುಹು. ಮರೆವು ಅರಿವಾದಾಗ ಜೀವ ದೇವನಾಗುವನು. ನೋವಿನ ನೆರವಿನಿಂದ ಮರೆವು ಅರಿವಾಗುವದು. ನೋವಿರದಿದ್ದರೆ ಮರೆವಿನ ಅರಿವು ಕೂಡ ನಮಗಾಗುತ್ತಿದ್ದಿಲ್ಲ. ಪ್ರಾಣದ ಪರಿವೆಯಾದಾಗಲೇ ಜೀವಕ್ಕೆ

ಮರೆವಿನ ಅರಿವಾಗುವದು. ಅರಿವಿನ ಪರಿವೆಗೆ ಮರೆವಿನ ಪರಿವೆ ಎದುರಾಗು ತ್ತಲೆ ನೋವು ಉಂಟಾಗುವದು. ನೋವೆಂದರೆ 'ಇತ್ತಿಲ್ಲ ಇತ್ತ' ಎಂದು ಹಾದೀ ತೋರಿಸುವ ಸುಟ್ಟು ಬೆರಳು. ಈ ಬೆಲೆಯುನ್ನರಿತವನೆ ಅರಿತನು.

ಒಂದೇ ನೋವಿಗೆ ಹಲವೊಂದು ಹೆಸರಿರುವವು. ತಿಳಿವಿನ ನೋವಿಗೆ ತಪ್ಪೆಂದೂ; ನುಡಿಯ ನೋವಿಗೆ ಹುಸಿಯೆಂದೂ; ನಡೆಯ ನೋವಿಗೆ ಕೇಡೆಂದೂ; ಎದೆಯ ನೋವಿಗೆ ದುಗುಡವೆಂದೂ; ಒಗೆತನದ ನೋವಿಗೆ ಹಗೆತನವೆಂದೂ ಹೆಸರುಂಟು. ತಪ್ಪು ಒಪ್ಪಾಗಲಿಕ್ಕೂ, ಹುಸಿಯು ಹುರು ಳಾಗಲಿಕ್ಕೂ, ಕೇಡು ಒಳಿತಾಗಲಿಕ್ಕೂ, ದುಗುಡ ಸೊಗಸಾಗಲಿಕ್ಕೂ, ಹಗೆ ನಗೆಯಾಗಲಿಕ್ಕೂ, ನೋವಿನ ನೆರವು ಬೇಕು. ಮೈ ಕೈ ನೋವು ಮಕ್ಕಳ ಮರಿಗೂ ತಿಳಿಯುವದು. ಮುಂದ ಮುಂದಿನ ನೋವು ಮುಪ್ಪಿನವರಿಗೂ ಮುಸುಮುಸುಕು. ಆ ನೋವನ್ನರಿತವನೇ ಅರಿತನು

ಕಲ್ಲುಮಣ್ಣಿಗೆ ಮೈ ಕೈ ನೋವಿಲ್ಲ; ಮನವಮಾತಿನ ನೋವಿಲ್ಲ; ತಿಳಿ ವರಿವಿನ ನೋವಿಲ್ಲ; ಕೂಟದ ಹಿಗ್ಗಿಲ್ಲ; ಬೇಟದ ತಗ್ಗಿಲ್ಲ; ಈ ಹಿಗ್ಗಿಲ್ಲದ ಇರವು ಬೇಡ ಬೇಡ. ಇದನ್ನರಿತವನೇ ಅರಿತನು.

ಮೈ ಕೈ ನೋವಿನ ಅರಿವಿನಿಂದ ಕಲ್ಲು ಮಣ್ಣು ಗಿಡಗಂಟೆಯಾಯಿತು. ಗಿಡಗಂಟೆಗೆ ಮೈ ಕೈ ನೋವಿನ ಪರಿವೆಯುಂಟು; ಮನವಮಾತಿನ ಪರಿವೆಯಿಲ್ಲ; ತಿಳಿವರಿವಿನ ಪರಿವೆಯಿಲ್ಲ. ಅಗಿದ ತಗ್ಗು ತಾನೇ ಮುಚ್ಚಿಕೊಳ್ಳದು; ಕಚ್ಚಿದ ಗಿಡವು ತನ್ನನ್ನು ಮುಚ್ಚಿಕೊಳ್ಳುವದು. ಗಿಡಗಂಟೆಗೆ ಮೈ ಕೈ ಕೂಟದ ಹಿಗ್ಗುಂಟು; ಮೈ ಕೈ ಬೇಟದ ತಗ್ಗುಂಟು. ತಗ್ಗು ತಿಳಿಯದಿದ್ದರೆ ಹಿಗ್ಗು ಹುಟ್ಟದು. ಇದನ್ನರಿತವನೇ ಅರಿತನು.

ಮೈ ಕೈ ಪರಿವೆಯ ಮೇರೆ ಮೀರಿ, ಮನವಮಾತಿನ ಮಿಂಚನ್ನು ಕೊಂಚ ಕಂಡು, ಆ ಹೊಸ ಬಲದ ಹೊಲದಲ್ಲಿ ಹಾರಾಡಿ, ಚೀರಾಡಿ, ಅರಿವಿನ ಮರವೆ ಯಾಗಿ, ಪರಿವೆಯ ಪರಿವೆ ಹಾರಿ, ಹಾಡಿದ್ದೇ ಹಾಡಿ, ಮಾಡಿದ್ದೇ ಮಾಡಿ, ಹುಳುಹುಪ್ಪಡಿ ಮೊದಲುಗೊಂಡು ಎತ್ತು ಕತ್ತೆ ಕಡೆಯಾಗಿ ಮನದ ಪರಿ ವೆಯ ಒಂದು ಸುಳಿಯಲ್ಲಿ ಸುತ್ತು ಸುತ್ತಾಡುತ್ತಿರುವವು.

ಹುಳುಗಳ ಅಡ್ಡಾಟ, ಹಸುಗಳ ಓಡಾಟ, ಹಕ್ಕಿಗಳ ಹಾರಾಟ— ಇವೆಲ್ಲ ಆ ಹೊಸ ಬಲದ ಹಿಗ್ಗಿನ ಉಗ್ಗು. ಮೈ ಕೈ ಅರಿವಿದ್ದು ಪರಿವೆ ಕಳೆದುಕೊಂಡು, ಆ ಹೊಸ ಗಸುವಿನ ಹಿಗ್ಗಿಗಾಗಿ ಹಾತೊರೆಯುವವು. ಅದನ್ನು ತೋರಿಸಲಿಕ್ಕೆ ನೋವು ನೆರವಾಗುವದು. ಕಟ್ಟಿದ ಚಿಗರಿ, ಅಟ್ಟಿದ ಹುಲಿ ಈ ಮಾತಿಗೆ ಇವೇ ಸಾಕ್ಷಿ. ಇದನ್ನರಿತವನೇ ಅರಿತನು.

ಮನದಿಂದಾದ ಮಾನವನು. ಅಣುವಿಗಾಗಿ ಅಳುಕದ್ದು ಮಣ್ಣು ಹೆಂಟೆ; ತನುವಿಗಾಗಿ ಅಳುಕುವದು ಗಿಡಗಂಟೆ; ಅಸುವಿಗಾಗಿ ಅಳುಕುವದು ಹಸು. ಮನಕ್ಕಾಗಿ ಅಳುಕುವನು ಮಾನವ. ಉಗ್ಗಿದರೇನು ತಗ್ಗಿದರೇನು ಹಿಗ್ಗದ ಹೊರತು? ತಗ್ಗಿ ಉಗ್ಗಿ ಹಿಗ್ಗು ಹುಡುಕಬೇಕು; ಹುಡುಕದವ ಮಾನವನಲ್ಲ. ಹಿಗ್ಗಿಲ್ಲದೆ ತಗ್ಗುವದು ಮರುಳು. ತಗ್ಗಿ ಹಿಗ್ಗಿನ ಹಾದಿ ಹಿಡಿಯುವದೇ ಹುರುಳು. ಇದನ್ನರಿತವನೆ ಅರಿತನು.

ಇದನ್ನಾರಂದರು ಆರಂದರು ಎಂದು ಕೇಳಲಾಗಿ 'ನಾ ನಾ ನಾ' ಎಂದಂದಿತೊಂದು ದನಿಯು. ಇದನ್ನರಿತವನೇ ಅರಿತನು.

**ಓಂ ಶಾಂತಿಃ ಶಾಂತಿಃ ಶಾಂತಿಃ**

---

## ೮. ಹಿಗ್ಗಿನ ನೆಲೆಯು

ಹಿಗ್ಗು ಹಿಗ್ಗು ಎಂದು ಹಿಗ್ಗಿತು ಜೀವ; ಹಿಗ್ಗು ಹಿಗ್ಗು ಎಂದು ಹಿಗ್ಗಿದನು ದೇವ. ಹಿಗ್ಗು ಹಿಗ್ಗೆಂದು ಒಂದು ಎರಡಾಗಿ ಎರಡೂ ಒಂದಾದವು. ಆ ಹಿಗ್ಗಿನ ನೆಲೆಯೆಲ್ಲಿ? ಆ ಹಿಗ್ಗಿನ ಕಲೆಯಲ್ಲಿ?

ನಗೆಯದೊಂದು ನಾಡುಂಟು; ಅಲ್ಲಿ ಬೆಳಕಿನ ಹೊಳೆಯುಂಟು; ಅದರ ದಂಡೆಗೆ ಕಲ್ಲುಂಟು; ಮುಳ್ಳುಂಟು. ಆದರೆ ಅಲ್ಲಿ ಕಲ್ಲು ಕರಗುವವು, ಮುಳ್ಳು ಮುಗುಳುವವು. ಅಲ್ಲಿಯ ಅರಸೇ ಹಿಗ್ಗು.

ಜೀವಕ್ಕೆ ಗಾಳಿಯು ಪ್ರಾಣ; ಹೆಣಕ್ಕೇನು? ಅದರ ಸುತ್ತು ಗಾಳಿಯು ಬೀಸಿದರೇನು ಸೂಸಿದರೇನು? ಹಿಗ್ಗಿನಿಂದ ಹಿಗ್ಗಿದ ಜಗದಲ್ಲಿ ಹೆಣವಿದ್ದಂತೆ ಆಗಿರುವೆನು. ಆ ಹಿಗ್ಗು ಜಗ್ಗಿಕೊಳ್ಳುವ ಬಗೆ ಹೇಗೆ?

ಹಿಗ್ಗು ಸುತ್ತಿರುವದು; ಹಿಗ್ಗು ಮುತ್ತಿರುವದು; ಹಿಗ್ಗು ಮೇಲಿರುವದು; ಹಿಗ್ಗು ಕೆಳಗಿರುವದು; ಹಿಗ್ಗು ಹೊರಗಿರುವದು; ಹಿಗ್ಗು ಒಳಗಿರುವದು ಹಿಗ್ಗಿನ ಹಗ್ಗದಿಂದ ಎಲ್ಲವೂ ನನ್ನನ್ನು ಬಿಗಿದಿರುವದು; ನಾನು ಎಲ್ಲವನ್ನೂ ಬಿಗಿದಿರುವೆನು.

ಹಿಗ್ಗಿಗಾಗಿ ಬಿತ್ತು ಅಗಿಯಾಯಿತು; ತಾಯಿಗೆ ಮಗುವಾಯಿತು; ಈ ಹಿಗ್ಗಿಗಾಗಿ ಜಗವು ಹೊಸ ಹೊಸದಾಯಿತು. ಇದಿಲ್ಲದಿರೆ ಎಂದೋ ಹಳಸಿ ಹೋಗುತ್ತಿತ್ತು.

ಹಿಗ್ಗು ಹುಚ್ಚುತನವಲ್ಲ; ಹಸುಳೆತನವಲ್ಲ. ಹಿಗ್ಗು ಹಡೆದವಳ ಹೊಟ್ಟೆಯಲ್ಲಿ ಹುಟ್ಟಿ, ಹಸುಳರ ಹದುಳದಲ್ಲಿ ಹರಿದಾಡಿ, ಹರೆಯದ ಹೃದಯವ ಹರಿಸಿ, ನನ್ನಿನಗೆಗಳು ಬೆರಸಿ ಸುರಿಸುವ ದೇವರೂಪ.

ಹಿಗ್ಗಿ ಹಿಗ್ಗಿದಂತೆ ದೇವರ ಹತ್ತರ ಬರುವಿ. ಹಿಗ್ಗ ಹಿಗ್ಗದಂತೆ ಸಾವನು ಹತ್ತರ ತರುವಿ. ಜೀವಾ! ಹಿಗ್ಗಿನ ಹಾದಿಯುಂ ಪಿಡಿ, ಬಡಿದರೆ ಬಗ್ಗಬೇಡ, ತಡೆದರೆ ತಗ್ಗಬೇಡ, ಕಡಿದರೂ ಕುಗ್ಗಬೇಡ. ಹಸುಳಾ, ಇದೆಲ್ಲ ನಿನ್ನ ಹಿಗ್ಗಿಗೆಂದು ತಿಳಿ.

ವೀರಜೀವಾ! ಸುಖವೆಂಬ ಬೀದಿಯು ಬಸವಿಯನ್ನು ಬಯಸಿ ಹೇಡಿಯ ಹಾದಿಯನ್ನು ಹಿಡಿಯಬೇಡ, ಕಂಡಿಯಾ! ವೀರಜೀವಾ! ದುಃಖವೆಂಬ ಬೀದಿ ಬಡಕನಿಗೆ ಬೆದರಿ ಹೇಡಿಯ ಹಾದಿಯನ್ನು ಹಿಡಿಯಬೇಡ, ಕಂಡಿಯಾ! ವೀರಜೀವಾ! ಅದು ನಿನ್ನ ಹಾದಿಯಲ್ಲ.

ಗಳಿಸದೆ ಬಳಿಸಬಾರದಂತೆ; ಕೈಲಾಗದವರು ಗಳಿಸದೇ ಬಳಿಸ ಬಯಸುವರು! ನೀನು ಬಯಸುವರೆ? ಯಾರ ಹಂಗೇಕೆ? ಸುಖ ದುಃಖದೊಳ

ಗಿಂದ ಹಿಗ್ಗಿನ ಹಾಲನ್ನು ಹಿಂಡಿ ತೆಗೆಯಬೇಕು. ಅದೇ ಗಂಡಸುತನವು. ಸುಖ ನೋಡಿ ಕಂಗೆಡುವರೆ? ದುಃಖ ನೋಡಿ ಮುಂಗೆಡುವರೆ? ವೀರಜೀವಾ! ಅದಲ್ಲ ನಿನ್ನ ಹಾದಿ!

ಅಗೋ ಆ ಅಟ್ಟಂಬಟ್ಟಂ ಅರಣ್ಯದ ನಟ್ಟನಡುವೆ ಬೆಟ್ಟಗೋಟೆ ಯೊಂದನ್ನು ಕಟ್ಟಿಪ್ಪ, ನಿಟ್ಟಿರುಳಿನಲ್ಲಿ ಕೂಡ ಕಟ್ಟಾಯುದ ಕಾವಲು ಗಾರರು ಅದನ್ನು ಕಾಯುತ್ತಿರುವರು. ಅದರ ಸುತ್ತಿನದೆಲ್ಲ ಮಾಟವಾಯು ನಾಡು. ಆ ಕೋಟೆಯಲ್ಲಿ ಮಣಿಮುತ್ತಿನದೊಂದು ಅರಮನೆಯುಂಟು ಆ ಕೋಣೆಯಲ್ಲಿ ಹೊನ್ನಿನ ಹೊರಸುಂಟು. ಆ ಹೊರಸಿನ ಮೇಲೆ ದೇವರಾಯನ ಮೂರು ಮಲ್ಲಿಗೆಯ ತೂಕದ ಮಗಳೊಬ್ಬಳು ಹಗಲಿರುಳು ನಗುತ್ತ ಕುಳಿ ತಿರುವಳು. ಆ ನಾಡಿನಲ್ಲಿ ಅವಳ ಕಣ್ಣುಗಳೇ ಸೂರ್ಯ ಚಂದ್ರಮರು. ಅವಳ ತುಟಿಗಳು ಸಂಜೆಮುಂಜಾವು. ವೀರಜೀವವೆ! ಇಂಥ ಮಾಯಕಾರ್ತಿಯೇ ನಿನಗೆ ಮದುಮಗಳಾಗಿ ಒಪ್ಪುವಳು.

ಮದುಮಗನೆ! ಅಲ್ಲಿಗೆ ಹೋಗಬೇಕೆಂದು ಹಂಬಲಿಸಿದವರು ಹುಚ್ಚ ರಾದರು, ಅಲ್ಲಿಗೆ ಹೋಗಬೇಕೆಂದು ಹವಣಿಸಿದವರು ಹಸುಗಳಾದರು. ಕೆಲ ವರು ಕಲ್ಲಾದರು, ಮತ್ತೆ ಹಲವರು ಮಣ್ಣಾದರು. ಅಲ್ಲಿಗೆ ಹೋಗಿ ಮದುವೆಯಾಗಿ ಬರುವದೇ ನಿನಗೆ ತಕ್ಕುದು.

ಅಪ್ಪಾ, ಅರಸುಮಗನೆ! ಮದುಮಗನೆ! ಹುಟ್ಟಿ ಬಾಳ್ವೆಯ ಮಾಡ ಬೇಕು ಹಿಗ್ಗೆಂಬ ಹೆಣ್ಣಿನಕೂಡ, ಬೆಳೆದು ಬಾಳ್ವೆಯ ಬೆಳೆಸಬೇಕು ಹಿಗ್ಗೆಂಬ ಹೆಣ್ಣಿನಕೂಡ, ಅಳಿದು ಬಾಳ್ವೆಯನುಳಿಸಬೇಕು ಹಿಗ್ಗೆಂಬ ಹೆಣ್ಣಿನ ಕೂಡ. ಮರೆಯಬೇಡ, ಮರೆಯಬೇಡ, ಮರೆಯಬೇಡ!

**ಓಂ ಶಾಂತಿಃ ಶಾಂತಿಃ ಶಾಂತಿಃ**

---

## ೯. ಸೊಬಗಿನ ತೆನೆಯು

**ನೋಡು! ನೋಡು ಜೀವಕುಮಾರಾ! ಈ ಸೊಬಗಿನ ಸೃಷ್ಟಿಯನ್ನು!** ಅಗೋ! ಅಗೋ! ಸನತ್ಕುಮಾರಾ, ಜಗದ ಸೊಗದ ವೃಷ್ಟಿಯನ್ನು! ತೆರೆ! ತೆರೆ! ಬಾಲಬ್ರಹ್ಮಾ! ನಿನ್ನ ಆತ್ಮಹರ ದೃಷ್ಟಿಯನ್ನು!

ಹಾರ ಹುಡಿಯೊಳಗಿಂದ ಯಾರ ಗುಡಿ ಹುಟ್ಟಿತು ನೋಡು! ತೀರ ಕಿಡಿಯೊಳಗಿಂದ ಈರೇಳು ಲೋಕ ಬೆಳಗಿತು ನೋಡು! ಮಣ್ಣಿನ ಹಣತಿಗಳಲ್ಲಿ ಹೊನ್ನಿನ ಕುಡಿಯ ದೀಪಗಳು ದೀಪಾವಳಿಯ ಹಬ್ಬವನ್ನು ಮಾಡುತ್ತಿರುವವು. ನೋಡೈ! ಆತ್ಮಲಿಂಗವೇ! ಸುಗ್ಗಿಯೊಳಗಿನ ಮಲ್ಲಿಗೆಯ ಮುಗ್ಗಿಗಳ ಘಮುಘಮಾಟವಿಡಗಿರುವದು! ಘ್ರಾಣಿಸೈ ಸಂತಸವಸಂತವೇ! ದೇವಮಾರ್ಗದೊಳಗೆ ಅಮರದೀವಿಗೆಗಳ ದಿಕ್ಕೆಟ್ಟ ಸಾಲುಗಳು ಕಂಗೊಳಿಸುವವು ಕಾಣೋ ವಿಶ್ವಕುಲದೀಪಾ!

ಬಡವರ ಭಾಗ್ಯವನ್ನು ಬಣ್ಣಿಸಲಳವಲ್ಲಯ್ಯಾ! ಈ ದೇವರ ಗುಡಿಯಲ್ಲಿ ಪಂಕ್ತಿಪ್ರಪಂಚವಿಲ್ಲ! ಬಡವರ ದಿನರತ್ನ ರಾತ್ರಿರತ್ನಗಳನ್ನು ನೋಡಿ ಭಾಗ್ಯವಂತರ ರತ್ನಗಳು ನೆಲ ನೀರುಗಳಲ್ಲಿ ಅಡಗಿಕೊಂಡವು! ಎಲೈ ಬಡತನವುಳ್ಳ ಭಾಗ್ಯವಂತಾ! ಕಣ್ದಣಿಯೆ ಕಂಡುಕೋ ಈ ಲೋಕೈಕ ರತ್ನಗಳನ್ನು! ಹಾಳಾಗಲಿ ಕಣ್ಣೀರ ಸುರಿಸುವ ಹಾಳು ಹಂಬಲವು.

ಬಾಳದ ಬೀಸಣಿಕೆಯು ಗಾಳಿಯಿಲ್ಲದೆ ಬಾಳೀತೆ! ಮುಂಜಾವಿನ ತಂಗಾಳಿ, ಸಂಜೆಯ ಸುಳಿಗಾಳಿಗಳಿಗೆ ಸರಿಯಾದೀತೇ! ನೀರಿನಲ್ಲಿರುವ ರುಚಿಯು ನೀರಿಲ್ಲದ ಮದ್ಯಕ್ಕೆ ಬಂದೀತೇ? ಬೆಚ್ಚನ್ನ ನೆಲದಮೇಲೆ ಎರಗುವ ನಿದ್ದೆಯು ಸೆಜ್ಜೆಸಾಲೆಯೊಳಗಿನ ಮಂಚವನ್ನೇರೀತೆ? ಈ ಬಡತನದ ಭಾಗ್ಯವು ಕಡೆತನಕಿರಲಿ! ಕಟ್ಟಕಡೆತನಕಿರಲಿ! ಇದೇ ಸೊಬಗಿನ ಗೊನೆಯು, ಇದೇ ಸೊಬಗಿನ ತೆನೆಯು!

**ಗೊಬ್ಬರವನ್ನೇನು ನೋಡಿ ಮೂಗು ಮುಚ್ಚುವಿ? ನೋಡು ಕೊನೆಯ ತೆನೆಯನ್ನು! ಗೊರಟವನ್ನೇನು ಕಂಡು ಮೂಗು ಮುರಿಯುವಿ? ಕಾಣು ತುದಿಯ ತನಿವಣ್ಣನ್ನು!**

---

# ಸ್ವಪ್ನವಿಜ್ಞಾನ

" The mysterious kingdom of dreams which almost fills half our lives, has not hitherto surrendered to us any of its essential secrets "

— Maurice Maeterlink

ಕನಸು, ಜ್ಯೋತಿಷ್ಯ, ಶಕುನ, ಮುಹೂರ್ತ, ರಮಲ, ದೈವಭಕ್ತಿ ಇತ್ಯಾದಿಗಳು ಒಂದೇ ಮೂಢಭ್ರಾಂತಿಮಾಲೆಯೊಳಗಿನ ಮಣಿಗಳೆಂದೆಣಿಸುವ ವಿದ್ಯಾವಂತರಿರುವ ಈ ಕಾಲದಲ್ಲಿ ಕನಸಿನದ್ರವ್ಯದಿಂದ ಕಟ್ಟಿದ ನಾಟಕವೆಂದರೆ ಅಷ್ಟು ಗೌರವಾರ್ಹವೆನಿಸಿಕೊಳ್ಳಲಾರದು. ಆದರೆ ಶಾಸ್ತ್ರಕ್ಕಾಗಿ ಶಾಸ್ತ್ರಾಧಾರವನ್ನು ಕೊಟ್ಟರೆ ಸಾಕು 'ಹೀಗೇನು ?' ಎಂದು ಗಾಂಭೀರ್ಯದಿಂದ ತಲೆ ಹಾಕಿ ಏನನ್ನೂ ನಂಬುವ ಚಟವು ಈ ವಿದ್ಯಾವಂತರಿಗಿರುವದು. ಕೆಲವರಿಗೆ ಪಾಶ್ಚಿಮಾತ್ಯಶಾಸ್ತ್ರಗಳ ಆಧಾರ ಬೇಕು; ಕೆಲವರಿಗೆ ಪೌರ್ವಾತ್ಯಶಾಸ್ತ್ರಗಳ ಆಧಾರ ಸಾಕು. ಅದರಲ್ಲಿಯೂ ಕೆಲವರಿಗೆ ಶಾಸ್ತ್ರವು ಅರ್ವಾಚೀನವಿದ್ದಷ್ಟು ನಂಬಿಗೆ ಹೆಚ್ಚು. ಕೆಲವರಿಗೆ ಅದು ಪ್ರಾಚೀನವಿದ್ದಂತೆ ನಂಬಿಗೆ ಸುಲಭ. ಆದರೆ ಇದೆಲ್ಲ ವಿಚಾರಜಾಡ್ಯ ಅಥವಾ ಮೂಢತೆ ಎಂದೇ ಹೇಳಬಹುದು. ಪೂರ್ವೋತ್ತರ ಪಕ್ಷಗಳ ಹೊಡೆತದಲ್ಲಿ, ಖಂಡನ-ಮಂಡನಗಳ ರಣರಂಗದಲ್ಲಿ; ವಾದ-ವಿವಾದಗಳ ತರ್ಕನಿಷ್ಠುರತತ್ವಶೋಧನೆಯಲ್ಲಿ, ಪ್ರಯೋಗ-ಪರಿಣಾಮಗಳ ಒರೆಗಲ್ಲಿನ ತಿಕ್ಕಾಟಗಳಲ್ಲಿ ಬದುಕಿ, ಉಳಿದು, ತಲೆಯತ್ತಿ ತನ್ನ ವರ್ಣರೇಖೆಗಳನ್ನು ತೋರಬಲ್ಲ ತತ್ವದ ಬೋಧವು ತತ್ಕಾಲಜೀವಿಗಳಾದ ವ್ಯವಹಾರಾಂಧರಿಗೆ ಬೇಕಾಗಿಲ್ಲ. ಯೋಗಪ್ರಯೋಗಗಳೆಂದರೆ ಅವರಿಗೆ ತಲೆಬೇಸರಿಕೆ; ಉಪಯೋಗವೇ ಅವರ ಪ್ರಾಣ. ಆದರೆ ಯೋಗಪ್ರಯೋಗಗಳಿಲ್ಲದೆ ಉಪಯೋಗವು ತಿಳಿಯದೆಂಬುದೂ ಅವರಿಗೆ ತಿಳಿಯದು. ಅಥವಾ ಈ ಮಾತು ತಿಳಿದರೂ ಅದನ್ನು ತಿಳಿದುಕೊಳ್ಳುವ ತಾಳ್ಮೆಯಿಲ್ಲ ಅವರಿಗೆ. ಆಧುನಿಕ ಶಿಕ್ಷಿತರಲ್ಲಿ ಕನಸೆಂದರೆ ಮನದ ಕಸವೆಂಬಂತೆ ಅದೊಂದು ಅರ್ಥವಿಹೀನ ಘಟನೆಯೆನ್ನುವ 'ಫ್ಯಾಶನ್' ರೂಢಿಗೆ ಬಂದಿತ್ತು. ಫ್ರಾಡನ ಮತವನ್ನು ಕೇಳಿದವರು

ಅದೊಂದು ಕಾಮದ ಇಂದ್ರಜಾಲವೆನ್ನುವ 'ಫ್ಯಾಶನ್ನಿ' ಗೆ ಬಂದಿದ್ದಾರೆ. ನಮ್ಮಲ್ಲಿಯ 'ಫ್ಯಾಶನ್ನು' ಅಲ್ಲಿಗೇ ನಿಂತಿದ್ದರೂ ಪಾಶ್ಚಿಮಾತ್ಯರ ವಿಚಾರದ ಕಲ್ಲೋಲವ್ಯಾಲೆಯು ಅಲ್ಲಿಯೇ ನಿಂತಿಲ್ಲ. ಅಜ್ಞಾತದ ನಡುಗಡ್ಡೆಗಳನ್ನು ಹುಡುಕಿಕೊಂಡು ಅದು ತುಡುಕಿ ಮುಂದೆ ಸಾಗಿದೆ. ಕನಸಿನ ರಹಸ್ಯವು ಇನ್ನೂ ರಹಸ್ಯಮಯವಾಗಿದೆ. ಅಲ್ಲಿಯ ಸ್ವಪ್ನವಿಜ್ಞಾನಿಗಳು 'ನೇತಿ-ನೇತಿ' ಎಂದು ಸಾರುತ್ತಿದ್ದಾರೆ. ಫ್ರುಡ್, ಎಲಿಸ್, ರಿವ್ಹರ್ಸ, ಎ. ಈ, ಆಲ್ಫ್ರೆಡ್-ಮೌರಿ, ಮೌರ್ಲೀವಾಲ್ಡ, ಮ್ಯಾಕ್ಸಸಾಯ್ಮನ್, ಪಿ. ಟಿಸ್ಸೆ, ಗೊಬ್ಲೊಡ್ ಮೊದಲಾದವರೂ ಸ್ವಪ್ನವಿಷಯದಲ್ಲಿ ವಿಚಾರಗಳನ್ನು ಮಾಡಿದ್ದಾರೆ. ಮಾರ್ಕ್ವಿಸ್ ಡಿ ಹಾರ್ವೆ ಡಿ ಸೆಂಟ ಡಿನಿಸ್ ಎಂಬವರು ಸ್ವಪ್ನಸ್ಮೃತಿಯನ್ನು ಬೆಳೆಸಿಕೊಳ್ಳುವ ವಿಧಾನವನ್ನು ಕುರಿತು ತಮ್ಮ ಪ್ರಯೋಗಗಳನ್ನು ಹೇಳಿದ್ದಾರೆ. ಜೆ. ಡಬ್ಲ್ಯು. ಡನ್ನಿಸ್ ಎಂಬವರು ಸ್ವಪ್ನಸೂಚನೆಗಳಿಂದ ಭವಿಷ್ಯತ್ತನ್ನು ಅಳೆದಾಡುವ ಆಟವನ್ನು ಹೇಳಿಕೊಟ್ಟಿದ್ದಾರೆ. ಸ್ವಪ್ನಗಳ ಭವಿಷ್ಯಸೂಚಕ ಶಕ್ತಿಯನ್ನು ಕುರಿತು ಎಮ್. ಆನೆಸ್ಟ ಬೋರ್ಝಾನೋ ಇವರು ಸಾವಿರ ಪ್ರಮಾಣಗಳನ್ನು ಸಂಗ್ರಹಿಸಿ ಶಾಸ್ತ್ರೀಯವಾಗಿ ನೂರರುವತ್ತು ಸ್ವಪ್ನಗಳ ಚರ್ಚೆಯನ್ನೂ ಮಾಡಿದ್ದಾರೆ. ಶಾಸ್ತ್ರೀಯ ವಿಚಾರವಂತರಿಗೆ, ಮರದ ಬೊಡ್ಡೆಯೊಳಗಿನ ಗೆರೆಗಳೂ, ನೆಲದ ಹೊಟ್ಟೆಯೊಳಗಿನ ಮಣ್ಣಿನ ತರಗಳೂ, ಮರಳುಕಾಡಿನೊಳಗಿನ ಶಂಖ, ಸಿಂಪು, ಎಲವುಗಳೂ, ಅಜ್ಞಾತ ಇತಿಹಾಸವನ್ನು ಉಸಿರುವ ಸಾಧನಗಳಾಗುವವು. ಅವರಿಗೆ ಸೃಷ್ಟಿಯೆಲ್ಲವು ಅರ್ಥಪೂರ್ಣವಾಗಿದೆ. ಮನಗಳ್ಳರಾದ ವೈಗಳ್ಳರಿಗೆ ಸೃಷ್ಟಿಯೊಳಗಿನ ಎಷ್ಟೋ ಭಾಗವು ಅಕಸ್ಮಾತ್ತಿನ ರಾಜ್ಯದೊಳಗಿನ ನಿರರ್ಥಕದ ಸಂತೆಯ ಪಸರವಾಗಿ ತೋರುವದು.

ಆದರೆ ಜೀವನದಲ್ಲಿ ಸಾರ್ಥಕತೆಯನ್ನು ಕಾಣದೆ ಒಳ್ಳೊಳ್ಳೇ ಕನಸುಗಳನ್ನಾದರೂ ಕಂಡೇವೇ ಎಂದು ಆಸಿಸುವ ಆಶೆಬಡಕರೂ ಇದ್ದಾರೆ. ಇಂಥವರಿಗೆ ಒಳ್ಳೇ ಕನಸುಗಳು ಪುಕ್ಕಟೆ ನೋಡಿದ ಸಿನೇಮಾ ನಾಟಕಗಳಂತೆ. ಅಂಕೆಗಳಿಗೆ ದೈವವನ್ನು ತೂಗು ಹಾಕಿದ ಲಾಟರೀಮೂಢರು, ಗ್ರಹಗಳಿಗೆ ಜೋತುಬಿದ್ದ ದೈವಪರವಶರು, ಚಕ್ರಬಂಧ ಒಗಟುಗಳ ಚಕ್ರ

ವ್ಯೂಹದಲ್ಲಿ ಲಕ್ಷ್ಮಿಯ ಹೆಜ್ಜೆಯನ್ನು ಹುಡುಕಾಡುವ ಅಭಿನವಶಬ್ದಭಕ್ತರು, ಇವರೆಲ್ಲರೂ ಕನಸಿನ ಅಂಜನದಿಂದ ಜೀವಿತದ ನಿಧಿಯನ್ನು ಕಂಡುಕೊಳ್ಳ ಬೇಕೆನ್ನುವ ಹುಟ್ಟು-ಮರುಳರ ಜಾತಿಯವರೆ ಸೈ. ಉಳಿದೆಲ್ಲ ವಿಚಾರದಂತೆ ಕನಸಿನ ಶಾಸ್ತ್ರೀಯ ವಿಚಾರವೂ ಭರತಖಂಡದಲ್ಲಿ ನಿಂತುಹೋಗಿ ಬಹಳ ಕಾಲವಾಯಿತು. ಈಗ ಮನೆಗಳಲ್ಲಿರುವದು ರೂಢಸಾಂಪ್ರದಾಯಿಕ ಸ್ವಪ್ನ ಸಂಕೇತ. ನಮ್ಮ ನಮ್ಮ ಅಜ್ಜಿಯರು ಇವರ ಶಾಸ್ತ್ರವನ್ನೂ ಕಣಿಯನ್ನೂ ಹೇಳುವರು. ಹೊಟ್ಟೆಮೇಲಾಗಿ ಮಲಗಬಾರದು. ಎದೆಯ ಮೇಲೆ ಕೈ ಯಿರ ಬಾರದು. ತೊಲೆಯ ಕೆಳಗೆ ಮಲಗಿದರೆ ದುಃಸ್ವಪ್ನ ಬೀಳುವದು. ಹಗಲು ಮನ ಸ್ಸಿನಲ್ಲಿ ಬಂದದ್ದು ಹೋದದ್ದೇ ರಾತ್ರಿ ಕನಸಿನಲ್ಲಿ ವಿಕಾರವಾಗಿಯೂ ವಿಪರೀತ ವಾಗಿಯೂ ಬಂದರೆ ಅದು ಹಳವಂಡಗನಸು, ಅದಕ್ಕೆ ಅರ್ಥವಿಲ್ಲ. ಕನಸು ವಿರು ದ್ಧಾರ್ಥ ಪ್ರದರ್ಶಕವಾಗಿರುವದು; ಕನಸಿನಲ್ಲಾಗಿದ್ದು ವ್ಯವಹಾರದಲ್ಲಾಗುವ ದಿಲ್ಲ. ಇವೇ ಮೊದಲಾದ ನಿಯಮಗಳನ್ನು ಅವರು ಹೇಳುವರು. ಈ ಮಾತು ಗಳಿಗೂ ಶಾಸ್ತ್ರೀಯವಾಗಿ ಅರ್ಥವಿರದೇ ಇಲ್ಲ. ನೀರೆಂದರೆ ಚಿಂತೆ. ಊಟ ವೆಂದರೆ ಕಷ್ಟ, ಬಂಗಾರವೆಂದರೆ ತಾಪ, ಬೆಳ್ಳಿಯೆಂದರೆ ಶಾಂತಿ, ಮರಣ ವೆಂದರೆ ನಿಶ್ಚಿಂತೆ ಇತ್ಯಾದಿಯಾದ ಅದರ ಸಂಕೇತಶಾಸ್ತ್ರದಲ್ಲಿ ಕಾವ್ಯವಿದೆ; ಅರ್ಥಮಾಡುವ ಚತುರತೆಯಿದೆ. ಶುಚಿರ್ಭೂತರಾಗಿದ್ದರೆ ದುಃಸ್ವಪ್ನ ಗಳು ಬೀಳುವದಿಲ್ಲ, ಬಿದ್ದರೂ ದುಷ್ಟ ಫಲಗಳನ್ನು ಕೊಡುವದಿಲ್ಲ ಎಂಬ ಮಾತು ವಿವೇಕಿಗಳಿಗೂ ಒಪ್ಪಿಗೆಯಾಗಬಹುದು. ತಲೆಗಿಂಬಿಗೆ ಮೊಚ್ಚೆ ಕೆರಹುಗಳನ್ನಿಟ್ಟರೆ ದುಃಸ್ವಪ್ನಬಂಧವಾಗುವದೆಂದೂ, ಕೆಲವು ಸ್ತೋತ್ರಗಳನ್ನು ಪಠಿಸಿದರೆ ದುಃಸ್ವಪ್ನ ನಾಶನವೂ ಅದರ ನಿವಾರಣೆಯೂ ಆಗುವದೆಂಬ ಮಾತು ಯಂತ್ರಮೋಹನ ಶಾಸ್ತ್ರಗಳಿಗೆ ಸೇರಿದ್ದು. ಅದು ಭಾವನೆಯ ಪ್ರಭಾವ. ಕನಸಿನ ವಿಷಯದ ಈ ತಿಳುವಳಿಕೆಗಳೆಲ್ಲಾ ಹಳೆಯ ಶಾಸ್ತ್ರದ ಗಸಿಯೆಂದಾ ಗಲಿ, ಉಳಿಗಾಳೆಂದಾಗಲಿ ತಿಳಿಯಬಹುದು. ಅದರಲ್ಲಿ ಹೊಸ ಕಸಿರೂ ಕಸವೂ ಕೂಡಿರಬಹುದು.

ನಮ್ಮ ಶಾಸ್ತ್ರಗಳಲ್ಲಿಯೇ ಸ್ವಪ್ನಗಳ ಬಗ್ಗೆ ಏನು ಪ್ರಮೇಯಗಳು ಇವೆ ಎಂಬದನ್ನು ತಿಳಿಯುವದಗತ್ಯ. ಕನಸಿಗೂ ನಿದ್ರೆಗೂ ಕೂಡಿಯೇ ಸ್ವಪ್ನ ಎಂಬ ಶಬ್ದವು ಸಂಸ್ಕೃತದಲ್ಲಿದ್ದುದು ಅವುಗಳ ನಿಕಟಸಂಬಧವನ್ನು

ತೋರಿಸುವದು. ಕನಸಿಲ್ಲದ ನಿದ್ರೆಯಿದೆಯೆಂದೂ ನಮ್ಮ ಶಾಸ್ತ್ರಜ್ಞರು ನಂಬಿದ್ದಾರೆ; ಅದನ್ನು ಸುಷುಪ್ತಿಯೆಂಬ ಪ್ರತ್ಯೇಕ ಅವಸ್ಥೆಯಾಗಿ ಪರಿಗಣಿಸಿದ್ದಾರೆ. ಜಾಗ್ರತಿ, ಸ್ವಪ್ನ, ಸುಷುಪ್ತಿ ಇವು ಮೂರು ಚಿತ್ತದ ಅವಸ್ಥೆಗಳು. ಜಗತ್ತಿನ ಜ್ಞಾನವಿರುವದೇ ಜಾಗ್ರತಿ; ಜಗತ್ತಿನ ಏನೇನೂ ಜ್ಞಾನವಿಲ್ಲದಿರುವದೇ ಸುಷುಪ್ತಿ. ಜಗತ್ತಿಲ್ಲದಿದ್ದರೂ ಅದರಂತೆಯೇ ಒಂದು ರೂಪಸೃಷ್ಟಿಯಲ್ಲಿ ವಿಹರಿಸುವದೇ ಸ್ವಪ್ನ. ಸ್ವಪ್ನವು ಒಂದು ಚಿತ್ತದ ವೃತ್ತಿಯೆಂದೂ ಬೇಕಾದರೆ ಹೇಳಬಹುದು. ಪ್ರತಿಕ್ಷಣಕ್ಕೆ ಚಿತ್ತವು ಪ್ರತ್ಯಕ್ಷ ಜಗತ್ತಿನ ಚಿತ್ರಗಳನ್ನೊ ಮಾನಸಿಕವಾದ ವಿಪರ್ಯಸ್ತ ಚಿತ್ರಗಳನ್ನೊ, ಇಚ್ಛಾನಿರ್ಮಿತ ವೈಕಲ್ಪಿಕ ಚಿತ್ರಗಳನ್ನೊ, ಅನುಭೂತಜ್ಞಾನಛಾಯಾರೂಪಗಳಾದ ಸ್ಮೃತಿಚಿತ್ರಗಳನ್ನೊ ನೋಡುತ್ತಲೇ ಇರುವದು. ಚಿತ್ರಗಳಿಲ್ಲದ ವಿಚಾರವೇ ಇಲ್ಲ. ವಿಚಾರವೆಂದರೆ ಮೂರ್ತತೆ, ಸಾಕಾರತೆ. ಅದಕ್ಕೆ ರೂಪವಿಲ್ಲದೇ ಇಲ್ಲ. ಬರಿ ಭಾವವಾಚಕಗಳಿಂದಲೇ ತುಂಬಿದ ಎಂಥ ವಿಚಾರದಲ್ಲಿಯೂ ಹೋಲಿಕೆಯಿಂದಾದರೂ ಚಿತ್ರವುಂಟಾಗದೆ ಹೋಗದು; ಅದರ ಸರಣಿಸಂಬಂಧಗಳಿಂದ ಒಂದು ಆಕೃತಿಯ ಕಲ್ಪನೆ ಬರುವದು. ಕನಸಿನ ರಾಜ್ಯವು ಪ್ರತ್ಯಕ್ಷದ ಸಾದೃಶ್ಯಚಿತ್ರಗಳ ಈ ತುದಿಯಿಂದ ನಿರಾಕಾರದ ಆ ತುದಿಯವರೆಗೆ ಹಬ್ಬಿಕೊಂಡಿದೆ. ಅಂತೆಯೇ ಅಂತರ್ಲೋಕ ಬಹಿರ್ಲೋಕದ ಹೊಸ್ತಿಲದಂತೆ ಸ್ವಪ್ನಸೀಮೆಯಿದೆ ಎಂದೂ ನಿದ್ರೆ-ಎಚ್ಚರಗಳ ಸಂಗಮದಲ್ಲಿ ಕನಸು ಈಸಾಡುವದೆಂದೂ ಋಷಿಗಳು ತಿಳಿದಿದ್ದರು. 'ಸ್ವಪ್ನೇ ಮಹಿಮಾನಮನುಭವತಿ' ಸ್ವಪ್ನದಲ್ಲಿ ಸೃಷ್ಟಿಯನ್ನೂ ಪ್ರತಿಸೃಷ್ಟಿಯನ್ನೂ ಮಾಡುವ ಶಕ್ತಿಯು ಚಿತ್ತಕ್ಕುಂಟಾಗುವದಾಗಿಯೂ ಅವರು ಉಲ್ಲೇಖಿಸಿದ್ದಾರೆ. 'ಸ್ವಪ್ನ' ಶಬ್ದದ ಔಪನಿಷದಿಕ ನಿರುಕ್ತವು ಸರಿಯಿರಲಿ, ಇರದೆ ಇರಲಿ, ತನ್ನ ತಾನು ಪಡೆಯುವ, ತಿಳಿಯುವ ಮಾರ್ಗಗಳಲ್ಲಿ ಕನಸೂ ಒಂದು ಎಂದು ಅವರು ಕಂಡುಹಿಡಿದಿದ್ದರು. ಇನ್ನೇನು, ಜಗತ್ತನ್ನೇ ಮಾಯೆಯೆಂದು ತಿಳಿಯುವ ವೇದಾಂಗಗಳಿದ್ದಲ್ಲಿ ಕನಸು ಯಾವ ಗಿಡದ ತೊಪ್ಪಲು ? ಆದರೂ 'ದುಃಸ್ವಪ್ನವು ಮಿಥ್ಯಾಭೂತವಾದಗುಂ ವ್ಯವಹಾರದೊಳು ಸತ್ಯಫಲವಂ ಕೊಡುವದು, ಜನಾನುಭವಸಿದ್ಧಮಪ್ಪುದರಿಂ' ಎಂದು ನಿಜಗುಣ ಶಿವಯೋಗಿಗಳು ಸೂತಸಂಹಿತೆಯ ಮತವನ್ನು ಎತ್ತಿ ಹೇಳಿದ್ದಾರೆ.

ಹೀಗಾಗಿ ವ್ಯವಹಾರದಲ್ಲಿ ಅರಸರಿಂದ ಆಳುಗಳವರೆಗೂ ಕನಸಿನ ಆಸೆ ಅಂಜಿಕೆಗಳು ಅನುಭವಸಿದ್ಧವಾಗಿ ಶುಭಾಶುಭವನ್ನೂ ರೋಗಮರಣಗಳ ಬರವನ್ನೂ ತಿಳಿದುಕೊಳ್ಳಲು ಕನಸುಗಳನ್ನು ಉಪಯೋಗಿಸುವದು ರೂಢಿಯಾಗಿತ್ತು. ಇಂಥ ನೈಮಿತ್ತಿಕ ಪ್ರಕರಣಗಳಲ್ಲಿ ಸ್ವಪ್ನಮೀಮಾಂಸೆಯು ಸಿಗದಿದ್ದರೂ ಅದೊಂದು ಗತಾನುಭವ ಸಂಗ್ರಹವಿರಬೇಕೆಂದು ತೋರುವದು. ಒಂದು ರಾತ್ರಿಯಲ್ಲಿ ಎರಡು ಕನಸು ಬಿದ್ದರೆ ಕೊನೆಗೆ ಬಿದ್ದದ್ದೆ ಫಲದಾಯಕ. ರಾತ್ರಿಯ ಪ್ರಥಮಯಾಮದಲ್ಲಿ ಬಿದ್ದ ಕನಸು ಒಂದು ವರ್ಷಕ್ಕೆ ಪರಿಣಾಮ ತೋರಿಸುವದು; ದ್ವಿತೀಯ ಯಾಮದ ಕನಸು ಆರು ತಿಂಗಳಲ್ಲಿ, ತೃತೀಯ ಯಾಮದ ಕನಸು ಮೂರು ತಿಂಗಳುಗಳಲ್ಲಿ, ಚತುರ್ಥ ಯಾಮದ ಕನಸು ಹದಿನೈದು ದಿನಗಳಲ್ಲಿ, ತೀರ ಅರುಣೋದಯದಲ್ಲಿ ಬಿದ್ದ ಕನಸು ಹತ್ತು ದಿನಗಳಲ್ಲಿ ಫಲ ಕೊಡುವದೆಂದು ಕನಸಿಗೂ ಅದರ ಕಾಲಪರಿಪಾಕಕ್ಕೂ ಇರುವ ಸಂಬಂಧ ಹೇಳಿದ್ದಾಗಿದೆ. ' ಶೋಭನೇ ಸ್ವಪ್ನೆ ಪಶ್ಚಾತ್ ಸ್ವಾಪೋ ನ ಶಸ್ಯತೇ ' ಒಳ್ಳೇ ಕನಸು ಬಿದ್ದಮೇಲೆ ನಿದ್ದೆ ಮಾಡಬಾರದು. ಕೆಟ್ಟ ಕನಸು ಬಿದ್ದರೆ ಹಿಂದಿನ ಸ್ವಪ್ನದ ಹಸುಳು ಕೆಡುವದೆಂದೂ ಕೆಟ್ಟ ಕನಸು ಬಿದ್ದ ಮೇಲೆ ನಿದ್ದೆ ಮಾಡಬೇಕು, ಇನ್ನೊಂದು ಒಳ್ಳೇ ಕನಸು ಬಿದ್ದರೆ ಒಳ್ಳೇದು, ಎಂದು ಯುಕ್ತಿಯನ್ನೂ ತಿಳಿಸಿದೆ. ಶುಭಾಶುಭ ಸ್ವಪ್ನಗಳಲ್ಲಿ ಕೆಲವು ಯಾಕೆ ಶುಭ, ಯಾಕೆ ಅಶುಭ ಎಂಬುದು ಸ್ಪಷ್ಟವಾಗಿಯೇ ತಿಳಿಯುವದು. ಆದರೆ ' ನರ್ತನಂ ಹಸನಂ ಚೈವ ವಿವಾಹೋ ಗೀತಮೇವಚ ' ಇವು ಅಧನ್ಯ ಸ್ವಪ್ನಗಳೇಕೆ ಎಂಬುದಾಗಲೀ, ' ದರ್ಶನಂ ರುಧಿರಸ್ಯಾಪಿ ಸ್ನಾನಂ ವಾ ರುಧಿರೇಣ ಚ ' ಇದು ಶುಭಸ್ವಪ್ನವೇಕೆ ಎಂಬುದಾಗಲಿ ಅಷ್ಟು ಸ್ಪಷ್ಟವಲ್ಲ. ಎಷ್ಟೋ ಜನರ ಅನುಭವವು ಹಾಗೆ ಬಂದದ್ದೆ ಆ ತಿಳುವಳಿಕೆಗೆ ಆಧಾರವಿರಬೇಕು.

ಇಂದು ಮತ್ತೆ ಹೊಸ ಸ್ವಪ್ನವಿಜ್ಞಾನವು ಪ್ರಾರಂಭವಾಗಬೇಕಾಗಿದೆ. ಆದರೆ ತುಣುಕು ರೊಟ್ಟಿಗೂ ತೊಟಕು ಮಾನಕ್ಕೂ ಪಶುಗಳಂತೆ ಸಂಕಟಪಡಬೇಕಾದ ಈ ಕಾಲದಲ್ಲಿ ಕನಸಿನ ಆಕಾಶಕುಸುಮವನ್ನು ಕೊಯ್ಯುವರಾರು? ಮಾಲೆ ಕಟ್ಟುವರಾರು? ಮನಸ್ಸಿನ ಸುಪ್ತ, ಜಾಗ್ರತ ವಿರಹಿತ, ನಿಗೂಢಭಾವಗಳ ಬಗ್ಗೆ ಹೊಸ ಚಿಕಿತ್ಸೆ ಮೀಮಾಂಸೆಗಳು ಅನ್ನದ ಕಾಟ

ವಿಲ್ಲದ ಪಾಶ್ಚಿಮಾತ್ಯ ದೇಶಗಳಲ್ಲಿ ಹುಟ್ಟಿವೆ. 'ಕನಸಿಲ್ಲದ ನಿದ್ರೆಯೆ ಇಲ್ಲ' ವೆಂದೊಬ್ಬರೂ, 'ನಾವು ಕನಸಿನಲ್ಲಿ ಕಂಡ ಸ್ವರ್ಗ ನರಕಗಳ ನೆನವು ಜಾಗೃತ ಬುದ್ಧಿಯು ಹೊರಲಾರದ ಭಾರ. ಅಂತೆಯೇ ಅದರ ಅನುಭವ ಬಂದೂ ಅದರ ಸ್ಮೃತಿಯು ನಿಚ್ಚಳವಾಗಿ ಉಳಿಯುವದಿಲ್ಲ' ವೆಂದಿನ್ನೊಬ್ಬರೂ, 'ಕನಸಿನ ಸ್ವರ್ಗ, ನರಕಗಳೆಲ್ಲಾ ಕಾಮಾಹಂಕಾರಗಳ ಕಣ್ಣು-ಮುಚ್ಚಾಟ, ಹುಡುಗ ಬುದ್ಧಿಯ ಸುಳ್ಳು-ಪಳ್ಳಾಟ, ಮನೋರಾಜ್ಯದ ನಾಟಕ' ವೆಂದು ಮತ್ತೊಬ್ಬರೂ ಹೇಳುವರು. ಆದರೆ ಮನುಷ್ಯನಿಗೆ ಎಷ್ಟು ಪ್ರವೃತ್ತಿಗಳಿ ವೆಯೋ ಅಷ್ಟು ಬಗೆಯ ಕನಸುಗಳೂ ಇರಬೇಕೆಂದು ತೋರುವದು. ಸ್ತ್ರೀ-ಪುರುಷರಲ್ಲಿ ಪರಸ್ಪರರ ಬಗ್ಗೆ ಅದಮ್ಯವಾದ ಆಕರ್ಷಣವಿರುವದು ಸ್ವಾಭಾವಿಕವಾಗಿದೆಯಾದರೂ ಕಾಮವೊಂದೇ ಅವರ ಪುರುಷಾರ್ಥವಲ್ಲ. ಮೈಥುನ ವಷ್ಟೇ ಅವರ ಪ್ರವೃತ್ತಿಯಲ್ಲ. ಹಣ, ಅನ್ನ, ಆಯುಷ್ಯ, ಆರೋಗ್ಯ, ಸಂತತಿ, ಪ್ರತಿಷ್ಠೆ, ಅಸಾಧ್ಯಸಾಧನಪ್ರಯತ್ನ, ಕಾರುಣ್ಯ, ಜಯ, ಶಾಂತಿ, ಚಿಂತಾವಿಸರಣ, ಸೌಂದರ್ಯಪ್ರೀತಿ, ಆಟದ ಆನಂದಗಳೂ ಅವರನ್ನು ಪ್ರತಿಕ್ಷಣಕೂ ಕಾಮದಷ್ಟೇ ಆಕರ್ಷಿಸುತ್ತಿರುವವು. ಇವುಗಳ ಪ್ರವಾಹ ಪ್ರತಿಬಿಂಬಗಳು ಕನಸಿನಲ್ಲಿ ಮೂಡದೆ ಹೋಗಲಾರವು. ಮಲೆನಾಡಿನ ಹಳ್ಳಿಗಳಲ್ಲಿ ಎಲ್ಲ ಚಿಂತೆ, ಕಷ್ಟ, ರೋಗ ಮರಣ, ಲಾಭ, ಜಯಗಳಿಗೆ ದೆವ್ವಗಳೇ ಕಾರಣ ಗಳೆಂದು ಅದರ ಆರಾಧನೆ ಸಂತರ್ಪಣಗಳೇ ನಡೆದಿರುವಂತೆ ಪಾಶ್ಚಿಮಾತ್ಯ ದೇಶೀಯರು ಕಾಮಭೂತಕ್ಕೆ ಅತಿ ಮಹತ್ವವನ್ನು ಕೊಟ್ಟಿದ್ದಾರೆ. ಮಲೆನಾಡಿನವರ ಸಿದ್ಧಾಂತವು ಸುಳ್ಳೂ ಇರಬಹುದು. ಆದರೆ ಅದನ್ನು ನಿಜವೆಂದೇ ತಿಳಿದು ಮಾಡಿದ ನಿದಾನ ಚಿಕಿತ್ಸೆಗಳಿಗೆ ಫಲ ಬಂದಿದೆಯಲ್ಲ ಎಂದರೆ– ಮನಸುಗೊಟ್ಟು ಮಾಡಿದ ಎಲ್ಲ ಚಿಕಿತ್ಸೆಗೂ ಏನಾದರೂ ಫಲ ಬರಲೇಬೇಕು. ಅಥವಾ ಅವರ ಸಿದ್ಧಾಂತವು ಸತ್ಯವಿದ್ದಮಟ್ಟಿಗೆ ಫಲವೂ ಬರುತ್ತಿರಬೇಕು. ಹೀಗಾದಷ್ಟಕ್ಕೆ ಅವರ ಇಡೀ ಸಿದ್ಧಾಂತವು ಸತ್ಯವಾಗಲಾರದು, ಅಥವಾ ಅದೊಂದೇ ಸಿದ್ಧಾಂತವೆಂಬ ಮಾತೂ ಸರಿಯಾಗಲಾರದು. ಫ್ರಾಯಿಡನ ಕಾಮಪ್ರಮೇಯವೂ, ಆಡ್ಲರನ ಪ್ರತಿಷ್ಠಾಪ್ರಮೇಯವೂ ಅಂತರಂಗದ ನೆಲೆ ಹುಡುಕುವ ಒಂದೊಂದು ವಿಧಾನಗಳಾಗಬಲ್ಲವಲ್ಲದೆ, ಅದೊಂದೆ ಸತ್ಯ ಉಳಿದುದು ಮಿಥ್ಯೆಯೆಂಬ ಮಾತು, ತತ್ತ್ವಜಿಜ್ಞಾಸುಗಳಿಗೆ ಮಾರ್ಗದರ್ಶಕ

ವಾಗಲಾರದು. 'ಆಹಾರ ನಿದ್ರಾಭಯ ಮೈಥುನ'ಗಳು ತಮ್ಮ ತಮ್ಮ ಉದ್ದೀಪನ, ರತಿ, ಶಾಂತಿಗಳ ಕನಸುಗಳನ್ನು ಹುಟ್ಟಿಸುವವೆಂದೇ ಹೇಳಬೇಕು. ಎಲ್ಲ ಕನಸುಗಳನ್ನು ಲೈಂಗಿಕ ಪರಿಭಾಷೆಯಲ್ಲಿ ಬಿಡಿಸಿ ಹೇಳುವುದಾಗಲಿ, ಎಲ್ಲ ಮಾತುಗಳಿಗೂ ಬೀಭತ್ಸ ಲೈಂಗಿಕ ಅರ್ಥವನ್ನು ಸಾಲೆಯ ತುಂಟ ಹುಡುಗರು ಕಲ್ಪಿಸುವಂತೆ ಮಾಡುವದಾಗಲಿ ಬಹಳ ಬಿಗಿಯಾದ ಕೆಲಸವಲ್ಲ. ಆದರೆ ಅದರಿಂದ ಬಹಳ ಪ್ರಯೋಜನವಿಲ್ಲ. ನಮ್ಮ ಅಜ್ಜಿಯ ಕನಸಿನಲ್ಲಿ ಒಂದು ಕರಿಯ ಬೆಕ್ಕು ಬಂದಿತ್ತು. ಅದರ ಅರ್ಥವೇನೆಂದು ಒಬ್ಬ ಕಣಿ ಹೇಳುವ ಮುದುಕಿಗೆ ಕೇಳಲಾಗಿ— ಅದು ವಿಷ್ಣು, ಅವನು ನಿಮ್ಮ ಸಂರಕ್ಷಣೆ ಮಾಡುತ್ತಿದ್ದಾನೆ— ಎಂದು ಆಕೆ ಹೇಳಿದಳು. ಇದರಿಂದ ನಮ್ಮ ಅಜ್ಜಿಗೂ ಸಮಾಧಾನವಾಗಿರಬೇಕು; ವಿಷ್ಣುದೇವರ ಸಂರಕ್ಷಕದೃಷ್ಟಿ ಯಾರಿಗೆ ಬೇಕಾಗಿಲ್ಲ? ಈ ಘಟನೆ ನಡೆದಾಗ ನಾನಿನ್ನೂ ಚಿಕ್ಕವನಿದ್ದು ಕನ್ನಡ ಸಾಲೆಯಲ್ಲಿ ಕಲಿಯುತ್ತಿದ್ದೆ; ಅಂದೂ ನನ್ನ ಬಾಲಮನಸ್ಸಿಗೆ ಈ ಭಾಷ್ಯಾರ್ಥವು ಸರಿಬರಲಿಲ್ಲವಷ್ಟೆ ಅಲ್ಲ, ನಗೆಯುಂಟುಮಾಡಿತು. ರೋಗನಿದಾನದಲ್ಲಿ ಫ್ರಾಡನ ವಿಧಾನವೂ, ಸಾಮಾಜಿಕ ಶೀಲಸಂವರ್ಧನೆಯಲ್ಲಿ ಆಡ್ಲರನ ತಂತ್ರವೂ ಕೆಲಮಟ್ಟಿಗೆ ಪರಿಣಾಮಕಾರಕಗಳಾಗಿರಬಹುದು. ಅಷ್ಟರಮಟ್ಟಿಗೆ ಜನರು ಅವರಿಗೆ ಕೃತಜ್ಞರೇ ಸರಿ. ಆದರೆ ಮನಸಿನಲ್ಲಾಗಲಿ ಕನಸಿನಲ್ಲಾಗಲಿ ಇದಕ್ಕೂ ಹೆಚ್ಚು ಇನ್ನೇನೂ ಇಲ್ಲವೆಂಬ ಅವರ ಖಂಡಿತ ವಾದವು ಜ್ಞಾನಪ್ರಾಪ್ತಿಯೊಳಗಿನ ಎಲ್ಲ ಖಂಡಿತ ವಾದಗಳಂತೆ ಅವರವರ ಅಜ್ಞಾನದ ಸೀಮೆಯನ್ನು ತೋರಿಸುವದು, ಅಷ್ಟೇ! ಕನಸಿನ ಸಹಾಯದಿಂದ ಮನಸಿನ ಅಂತರಂಗವನ್ನು ಹೊರಪಡಿಸಿಕೊಳ್ಳುವದು ಸಾಧ್ಯವಿರಲಾರದೇ ? ಜಾಗ್ರತೆಯಲ್ಲಿ ಸ್ವಪ್ನಾನುಭವವು ಕೆಲಮಟ್ಟಿಗೆ ಉಳಿದು ಬಂದೂ ಜಾಗೃತಿಗೆ ತೆರೆದು ತೋರುವ ಸೃಷ್ಟಿಯೇ ಬೇರೆ ಇರುವಂತೆ, ಸ್ವಪ್ನದಲ್ಲಿ ಜಾಗೃತಿಯ ಅನುಭವ ಸಂಸ್ಕಾರಗಳಿದ್ದೂ ಸ್ವಪ್ನಕ್ಕೇ ಸಹಜವಾದ ಬೇರೊಂದು ನಿಜಸೃಷ್ಟಿಯೇ ಅಲ್ಲಿ ಇರಲಾರದೇ ? ಜಾಗೃತ ದೃಷ್ಟಿಗಿಂತ ಸ್ವಪ್ನದೃಷ್ಟಿಯ ಶಕ್ತಿಯೇ ಬೇರೆಯಾಗಿಲ್ಲವೇ ?

ಸ್ವಪ್ನದ ಸ್ಥಲನಿಯಮ, ಕಾಲನಿಯಮ, ಪಾತ್ರನಿಯಮಗಳೇ ಬೇರೆಯಾಗಿ ತೋರುವವು. ಜಾಗೃತಿಯಲ್ಲಿ ಎಷ್ಟೋ ಹೊತ್ತು ಹಿಡಿಯುವ

ಸಂಗತಿಯು ಸ್ವಪ್ನದಲ್ಲಿ ಒಂದು ಕ್ಷಣದಲ್ಲಿ ಆಗಿಹೋಗುವದು. ಸ್ವಪ್ನದಲ್ಲಿಯ ಪಾತ್ರಗಳು ನಮ್ಮ ಜಾಗೃತ ಅಥವಾ ಸ್ವಪ್ನ ಇಚ್ಛೆಯಂತೆ ನಡೆಯುವವು ನಿಜ. ಆದರೆ ಎಷ್ಟೋ ಸಲ ಅವು ತಮ್ಮ ಸ್ವತಂತ್ರ ಬುದ್ಧಿಯಿರುವಂತೆ ನಡೆಯುವದರ ಗುಟ್ಟೇನು? ಮೋಡಗಳು ತಮ್ಮ ರೂಪಗಳನ್ನು ಎಷ್ಟೇ ಬೇಗ ಬದಲಿಸಿದರೂ ಸ್ವಪ್ನದ ಸ್ಥಲಸ್ಥಿತ್ಯಂತರ ಶಕ್ತಿಯು ಅವಕ್ಕಿಲ್ಲ. ಚಲಚ್ಚಿತ್ರಗಳ ಸ್ವೇಚ್ಛಾಸ್ಥಿತ್ಯಂತರ ಸ್ವಾತಂತ್ರ್ಯವು ಸ್ವಪ್ನದ ಛಾಯೆ ಮಾತ್ರ. ಪ್ರಾಣಪಟದ ಮೇಲೆ ಚಿತ್ಪ್ರಕಾಶದಿಂದ ನಡೆದ ಚಲಚ್ಚಿತ್ರ ಪ್ರದರ್ಶನವೇ ಸ್ವಪ್ನಮಾಲೆಯೆಂದು ನಾವು ತಿಳಿದರೂ, ಅಲ್ಲಿಯ ಕಥಾನಕಗಳನ್ನು ರಚಿಸುವರಾರು? ಪ್ರದರ್ಶಿಸುವ ಉದ್ದೇಶವೇನು? ಪ್ರದರ್ಶಕರಾರು? ಅಲ್ಲಿಯ ಕಲಾವಂತರು ಎಲ್ಲಿಯವರು? ಇದರ ಯಂತ್ರಶಾಲೆಯೆಲ್ಲಿದೆ? ಅಯ್ಯೋ! ಸ್ವಪ್ನದಂಥ ಹುಡುಗಾಟಕ್ಕೆ ಇಷ್ಟೆಲ್ಲ ಮೀಮಾಂಸೆಯೇ ಎನ್ನಬಹುದು. ಆದರೆ ಜ್ಞಾನವು ಬೆಳೆಯುವದೇ ಈ ಹಾದಿ ಶಾಸ್ತ್ರ ಕಟ್ಟುವದೇ ಈ ರೀತಿ. ಸಾಮಾನ್ಯರಿಂದ ಶಾಸ್ತ್ರ ಹುಟ್ಟಿಲ್ಲ, ಜ್ಞಾನ ಬೆಳೆದಿಲ್ಲ. ಅವರು ಶಾಸ್ತ್ರಗಳ ವಿಷಯ ಹಾಗು ಉಪಭೋಕ್ತೃಗಳು. ವಿಶೇಷ ಜನರ ವಿಷ ಅನುಭವದಿಂದಲೂ, ಸಾಮಾನ್ಯ ಜನರ ಅನುಭವ ಸಾಮಾನ್ಯತೆಗೆ ಇರುವ ಆದರ ಸಾದೃಶ್ಯದಿಂದಲೂ ಶಾಸ್ತ್ರಕ್ಕೆ ಹಾದಿಯಾಗುವದು. ಸ್ವಪ್ನಗಳನ್ನು ಸಾಂಗೋಪಾಂಗವಾಗಿ ನೆನಪಿಡುವ ಸೂಕ್ಷ್ಮಸ್ಮೃತಿ, ಸ್ವಪ್ನಪ್ರಮಾಣಗಳ ಸಂಗ್ರಹ, ಪ್ರಕೃತ ಸೃಷ್ಟಿಜ್ಞಾನದೊಡನೆ ಅದರ ಸಾಮ್ಯ-ವೈಷಮ್ಯ, ಅವುಗಳ ಸಾಮಾನ್ಯ ಹಾಗೂ ವಿಶೇಷಧರ್ಮಗಳ ನಿಶ್ಚಯ, ಅದರಿಂದ ಜಾಗೃತ ಜೀವನಕ್ಕೆ ಕೊಡಬಹುದಾದ, ಬರಬಹುದಾದ ಸಂಸ್ಕಾರ, ಅದರಿಂದ ಸೃಷ್ಟಿಯ ಬಗ್ಗೆಯೇ ಬದಲಾಗಬಹುದಾದ ನಮ್ಮ ದೃಷ್ಟಿ ಇತ್ಯಾದಿ ವಿಷಯಗಳನ್ನು ಕುರಿತು ಸ್ವಪ್ನವಿಜ್ಞಾನಿಗಳು ಚಿಕಿತ್ಸೆಮಾಡಬೇಕಾಗಿದೆ. ಪ್ರಪಂಚದಲ್ಲಿ ಸಾಮಾಜಿಕ ರಾಜಕೀಯ ಸಮಸ್ಯೆಗಳ ಕತ್ತೆಯು ಸತ್ತು ಬಿದ್ದಿರುವಾಗ ಕನಸಿನ ನೊಣಗಳನ್ನು ನೋಡುವವರಾರು? ಅದು ನಿಜವೇ! ಆದರೂ ಯಾರ ಹಾದಿಯಲ್ಲಿ ಯಾವುದು ಹೆಚ್ಚಾಗಿ ಬರುವದೋ ಅದರ ವಿಚಿಕಿತ್ಸೆ ನಡೆಸದೆ ಅವರಿಗೆ ಗತಿಯಿಲ್ಲ. ಹೀಗಾಗಿಯೇ ಜ್ಞಾನವು ಕಣಕಣವಾಗಿ ರಾಶಿಗೂಡುವದು. ಜ್ಞಾನವು ತಾತ್ಕಾಲಿಕ ವ್ಯವಹಾರಿಕ ಉಪಯೋಗಕ್ಕಾಗಿ ಹೆಚ್ಚಾಗಿ ಬೆಳೆ

ಯುದು. ಜೀವಜೀವಗಳ ಮಾನಸಿಕ ಸಮಸ್ಯೆ, ಕುತೂಹಲ, ಸಾಪೇಕ್ಷ್ಯ-ದಾನಂದ ಸಂಶೋಧನ ಸಾಹಸಗಳಿಂದ ಅದು ವೃದ್ಧಿಯಾಗುವದು.

ಸ್ವಪ್ನವು ಒಂದು ರೂಪಸೃಷ್ಟಿ. ಚರ್ಮಚಕ್ಷು ಗೋಚರವಾದ ಪ್ರಕಾಶಕ್ಕೂ ವಸ್ತು ವಸ್ತುಗಳ ರೂಪಕೃತಿಗಳನ್ನು ವಿಕಿರಿಸುವ ಶಕ್ತಿ ಯಿದೆ. ಯಾಂತ್ರಿಕ ಯುಕ್ತಿಯಿಂದಲೂ ರಾಸಾಯನಿಕ ಶಕ್ತಿಯಿಂದಲೂ ಆ ರೂಪಾಕೃತಿಗಳನ್ನು ಹಿಡಿದಿಡಬಹುದು. ಭಾವಚಿತ್ರಯಂತ್ರದ ಕೆಲಸವೇ ಅದು. ನಮ್ಮ ಚರ್ಮಚಕ್ಷುವೂ ಮಿದುಳೂ ಅದೇ ಬಗೆಯ ಕೆಲಸ ಮಾಡುವವು. ಆದರೆ ಭಾವಚಿತ್ರಯಂತ್ರ ಕಾರ್ಯದಲ್ಲಿ ಒಬ್ಬ ಸಜ ಶಿಲ್ಪಿಯು ಕಾರ್ಯಮಾಡುತ್ತಿರುವಂತೆ, ಕಣ್ಣುಮಿದುಳುಗಳ ಸಹಾಯ್ಯ ದಿಂದ ಚಿತ್ರ ಸಂಗ್ರಹ ಮಾಡಿ ಸ್ಮೃತಿಮುದ್ರಣಾಲಯದಲ್ಲಿ ಅದರ ಪ್ರತಿ ಗಳನ್ನು ತೆಗೆದುಕೊಡುವ ಶಿಲ್ಪಿಯು ಒಳಗಾರಿರಬಹುದು? ಸ್ಮೃತಿಚಿತ್ರ ಗಳ ಸಂಸ್ಕಾರದಿಂದ ಕೃತಿಚಿತ್ರಗಳನ್ನೂ ನಿರ್ಮಿಸುವ ಚಿತ್ರಕಾರನೊಬ್ಬನು ಬೇರೆಯಿರಬಹುದೇ? ಸ್ವಪ್ನಚಿತ್ರಪಟಗಳನ್ನು ಮೂಡಿಸಿ ತೋರಿಸುವ ಬೇರೊಬ್ಬನು ಇವರ ಸಹೋದರನೇ ಆಗಿರಬಹುದೇ? ಸ್ಮೃತಿಯು ಜಗ ಜ್ಜನಿತ ಚಿತ್ರಗಳಲ್ಲ, ಕೃತಿಯು ಸ್ವೇಚ್ಛಾಜನಿತ ಚಿತ್ರಗಳಲ್ಲ, ಸ್ವಪ್ನದ ಸ್ವೇಚ್ಛಾಜನಿತ ಚಿತ್ರಗಳಲ್ಲ, ದೃಷ್ಟಾಂತ ಧ್ಯಾನಗಳ ಪರೇಚ್ಛಾಪರಲೋಕ ಜನಿತ ಚಿತ್ರಗಳನ್ನೂ ನೋಡಬಲ್ಲ ಯೋಗದೃಷ್ಟಿಯ ಯೋಗಿಯೊಬ್ಬನು ಇವರೆಲ್ಲರ ಅಗ್ರಜನಿರಲಾರನೇ? ಅಯ್ಯೋ, ಇವೆಷ್ಟು ಪ್ರಕಾರಗಳು? ಮನೋರಾಜ್ಯದೊಳಗಿನ ಮಾನಸಿಕ ಪ್ರಕಾರಗಳಿವು ಎಂದು ಒಟ್ಟಾರೆ ಎಂದರೆ ಕೆಟ್ಟುಹೋಗುವದಾದರೂ ಏನು? ಸರಿ. ವನದಲ್ಲಿ ಹುಟ್ಟಿದ್ದೆಲ್ಲ ವನಸ್ಪತಿ; ತಿನ್ನಲು ಯೋಗ್ಯವಾದದ್ದೇ ರಸ, ಇಲ್ಲದ್ದು ವಿಷ, ಉಳಿದದ್ದು ಕಸ-ಎಂಬ ವಿಂಗಡವು ರೂಢಿಗೆ ಸಾಗಬಹುದು; ಜಿಜ್ಞಾಸೆಯು ಪ್ರಥಕ್ಕರ ಣಕ್ಕೆ ಸಾಕಾಗಲಾರದು. ಕಲಾವಂತರ ಪ್ರತಿಭೆಯ ಉಗಮದ ವಿಜ್ಞಾನ ವಿರಲಿ, ಸಾಮಾನ್ಯ ಸ್ಮೃತಿಯ ತಂತ್ರಜ್ಞಾನವೂ ಆಗಿಲ್ಲ ಮಾನಸ ಶಾಸ್ತ್ರಜ್ಞ ರೆನಿಸಿಕೊಳ್ಳುವವರಿಗೆ. ಸ್ಮೃತಿಯ ಯಂತ್ರದ ಕೀಲಕಾರ್ಯಗಳ ಅಭ್ಯಾಸ ವನ್ನೇ ಅವರು ಹೆಚ್ಚಾಗಿ ಮಾಡುತ್ತಿದ್ದಾರೆ. ಸ್ವಪ್ನದೃಷ್ಟಾಂತಗಳ ಉಗಮ

ವಿರುವ ಉನ್ನತ ಶಿಖರಗಳ ಕಡೆಗೆ ಅವರ ಆಕಾಶಯಾನಗಳು ಈಗೀಗ ಹೋಗುತ್ತಿವೆ. ಫೋಟೋಗ್ರಾಫಿ, ಗ್ರಾಮಫೋನ, ವಾಯರಲೆಸ್, ರೇಡಿಯೋ ಬ್ರಾಡ್‌ಕಾಸ್ಟಿಂಗ, ಟಾಕಿ, ಟೆಲಿವ್ಹಿಜನ ಮೊದಲಾದ ಯಂತ್ರರಚನೆಗಳಿಂದಲೇ ಅದ್ಭುತದ ಗಿರಿಗಹ್ವರಗಳು ತೆರೆದು ತೋರುತ್ತಿರುವಾಗ ತತ್ಸದೃಶ ಮಾನಸಿಕ, ಅಂತರ್ವೈಜ್ಞಾನಿಕ ಶಕ್ತಿಗಳ ಶೋಧಬೋಧಗಳಾದರೆ, ಎಂಥ ಸಿದ್ಧಿಯಾಗಲಾರದು? ಸ್ಮೃತಿ, ಪ್ರತಿಭೆ, ಸ್ವಪ್ನ, ದರ್ಶನ, ಸಮಾಧಿಗಳು, ಜ್ಞಾನದ ಪಂಚನೇತ್ರಗಳು. ಒಂದೊಂದಕ್ಕೆ ಕಾಣುವ ಪ್ರಪಂಚವೇ ಒಂದೊಂದು ಬಗೆಯಾಗಿದೆ. ಈ ಪ್ರಪಂಚವಲ್ಲಿ, ಪರಸ್ಪರ ಸಂಬಂಧವಿದೆ; ಸಾದೃಶ್ಯವಿದೆ; ಒಂದನ್ನೊಂದ ಸಂಸ್ಕರಿಸುವ ಶಕ್ತಿಯಿದೆ, ಒಂದರಲ್ಲೊಂದು ಸಂಕರಸಂಸೃಷ್ಟಿಯಾಗುವ ಸಂಭವವಿದೆ. ಪಾಶ್ಚಿಮಾತ್ಯ ಶಾಸ್ತ್ರಜ್ಞರು ಕಲ್ಲು-ಮಣ್ಣುಗಳ ಅಭ್ಯಾಸದಲ್ಲಿ ತೋರಿಸುವ ಅವಲೋಕನದ ಸಮಗ್ರತೆ, ಪ್ರಯೋಗ ಪ್ರಾಮಾಣ್ಯದ ಏಕಾಗ್ರತೆ, ಅನುಮಾನಗಳನ್ನು ಕಟ್ಟುವ ಜಾಣ್ಮೆ ಜಾಗರೂಕತೆಗಳು ಮನೋವ್ಯಾಪಾರಗಳೆಂದೆನಿಸಿಕೊಳ್ಳುವ ಈ ಸ್ವಪ್ನಾದಿಗಳ ಅಭ್ಯಾಸದಲ್ಲಿ ಬೇಕಾಗಿರಲಾರವೇ? ಅಜ್ಜಿಯರ ಕನಸಿನ ಶಾಸ್ತ್ರದಿಂದ ಅಜ್ಞೇಯವಾದಿಗಳ ಕನಸಿನ ನಿರಸನಕ್ಕೇ ಹಾರುವ ಅಗತ್ಯವಿಲ್ಲ.

ಹಿಂದುಸ್ಥಾನದಲ್ಲಿಯೂ ಅಲ್ಲಲ್ಲಿ ಸ್ವಪ್ನವಿಜ್ಞಾನವು ಸಾಗಿದೆ. ಶ್ರೀ. 'ಜಡಭರತ'ರು ತಮ್ಮ ಆಯ್ದ ಸ್ವಪ್ನಗಳ "ಪಾವನಪಾವಕ" ವೆಂಬ ಸಂಗ್ರಹವನ್ನು ಪ್ರಕಟಿಸಿದ್ದಾರೆ. ಅಲ್ಲಿ ಮೂರು ಕನಸು ಒಂದು ಕಣಸು ಸಂಗ್ರಹಿತವಾಗಿವೆ. ಈ ಸಂಗ್ರಹ ನಾಟಕಗಳ ಮಟ್ಟಿಗೆ ನಮ್ಮ ದೃಷ್ಟಿ ಸಾಹಿತ್ಯಿಕವಾಗಿದೆ. ಆ ಸ್ವಪ್ನಗಳನ್ನು ಕೃತಿಗಳೆಂದು ತಿಳಿದರೂ ತಪ್ಪಿಲ್ಲ. ಅವುಗಳಲ್ಲಿ ಅಷ್ಟು ತಿರುಳಿದೆ. ಒಡಗಥೆಗಳಂತಿರುವ ಅವರ ಸ್ವಪ್ನಗಳ ವಿಷಯವಿನ್ಯಾಸದಲ್ಲಿ ವೇಧಕತೆಯಿದೆ; ಆ ದೃಷ್ಟಿಯಲ್ಲಿ ಭೇದಕತೆಯಿದೆ. ಶೋಧಕತೆಯಿದೆ. ಬೋಧಕತೆಯಿದೆ. ಸಾಹಿತ್ಯಕ್ಕೆ ಹೆಚ್ಚೇನು ಬೇಕು? ಶ್ರೀ. ರಂ. ಶ್ರೀ. ಮುಗಳಿಯವರು ಈ ಸ್ವಪ್ನಚಿತ್ರಗಳಲ್ಲಿ ತಮ್ಮ ಗೆರೆಗಳನ್ನೆಳೆದು ಅಲ್ಲಲ್ಲಿ ಇನ್ನೊಂದು ಅರ್ಥವ್ಯಕ್ತಿಯನ್ನು ಕಲ್ಪಿಸಿಕೊಟ್ಟಿದ್ದಾರೆ. ಇದೊಂದು ಸಾಹಿತ್ಯಪ್ರಕಾರವನ್ನು ಮೊತ್ತದಲ್ಲಿ ತಂದು ಈಗಿನ ಕನ್ನಡ ಸವಿನುಡಿಗೆ ಇನ್ನೊಂದು ರುಚಿಯನ್ನು ಸೇರಿಸಿದ್ದಕ್ಕಾಗಿ ರಸಿಕರು ಅವರಿಗೆ ಉಪಕೃತ

ರಾಗದೆ ಇರರು. ಕಥೆ ಕವನಗಳಲ್ಲಿ ಸ್ವಪ್ನಾನುಭವಗಳನ್ನೂ, ಸ್ವಪ್ನೋಕ್ತಿಗಳನ್ನೂ, ಬಳಸಿಕೊಂಡವರಿದ್ದರು; ಆದರೆ ಈ ವಿಸ್ತಾರೋನ್ನತಿಗಳು ಬೇರೆಡೆಗೆ ಇಷ್ಟು ವ್ಯಕ್ತವಾಗಿ ಬಂದಿರಲಿಲ್ಲ. ಈ ಸ್ವಪ್ನಗಳ ಆದರ್ಶವಾದಿತ್ವವು ಇವುಗಳ ಒಳ್ಳೆ ಗುಣಗಳಲ್ಲೊಂದು. 'ಜಡಭರತ' ರಿಗೆ ಜಾಗೃತಿಯಲ್ಲಿರದ ಕೃತಿಸಾಮರ್ಥ್ಯವು ಸ್ವಪ್ನದಲ್ಲಿ ಲಭಿಸಿದ್ದುದು ಅವರ ಭಾಗ್ಯ. ವ್ಯವಹಾರ ಸಂಕೋಚದಿಂದ ಬಂದ ಅಲ್ಪತ್ವವು ಅಲ್ಲಿ ಮಾಯವಾಗಿ ಎಲ್ಲ ಸಾಹಿತಿಗಳಲ್ಲಿರಬೇಕಾದ ದಾರ್ಶನಿಕಶಕ್ತಿಯು ಅವರಿಗೆ ಮೈದುಂಬಿ ಬರುವದು. ಕಥೆ ಯಾವ ರೂಪ ಧರಿಸಿದರೇನು, ಅದಕ್ಕೆ ಜ್ಞಾನದ ಕಾಂತಿಯಿದೆ. ಇದಕ್ಕೂ ಹೆಚ್ಚು ಏನು ಬೇಕು ?

---

# ವ್ಯಕ್ತಿ

## ೧. ಶ್ರೀ. ರಾಮಕೃಷ್ಣ ಮನನ

ಶ್ರೀ ರಾಮಕೃಷ್ಣರ ಜನ್ಮದಿಂದ (ಕ್ರಿ. ಶ. ೧೮೩೬) ಪ್ರಾರಂಭವಾದ ಶತಮಾನದಲ್ಲಿ ಭರತಭೂಮಿಯಲ್ಲಿ ಆತ್ಮಗಂಗಾವತರಣವು ತೆರೆತೆರೆಯಾಗಿ ಬಂದಿದೆ. ಶ್ರೀ. ರವೀಂದ್ರರು (೧೮೬೧) ಶ್ರೀ. ಗಾಂಧಿಯವರು (೧೮೬೯) ಶ್ರೀ. ಅರವಿಂದ ಘೋಷರು (೧೮೭೨) ಶ್ರೀ. ರಮಣ ಮಹರ್ಷಿಗಳು (೧೮೭೯) ಶ್ರೀ. ಕೃಷ್ಣಮೂರ್ತಿಗಳು (೧೮೯೫) — ಈ ಐದು ಪ್ರವಾಹಗಳು ಇನ್ನೂ ಹರಿಯುತ್ತಲಿವೆ. ಸಾಗರಾಂತ ಪೃಥ್ವಿಯನ್ನು ನೀರುಣಿಸಿ ಫಲವತ್ತಾಗಿ ಮಾಡುತ್ತಲಿವೆ. ಷಟ್ಖಂಡದ ಜನರು ಜಾತಿ, ಮತ, ಕುಲ, ವರ್ಣಭೇದಗಳಿಲ್ಲದೆ ಇವುಗಳಲ್ಲಿ ನೀರು ಕುಡಿದು, ಮಿಂದು ತಮ್ಮ ತಾಪವನ್ನು ಕಳೆದುಕೊಂಡು ತೃಪ್ತಿಯನ್ನು ಪಡೆಯುತ್ತಿದ್ದಾರೆ.

ಶ್ರೀ ರಾಮಕೃಷ್ಣ ವಿವೇಕಾನಂದ ಮಿಶನ್ನಿನ ಕಾರ್ಯವು ಭೂಪಟದಂತೆ ಭೂಮಿಯನ್ನು ಸುತ್ತಿ ಹಬ್ಬಿದೆ. ಶ್ರೀ ರಾಮಕೃಷ್ಣಮನ್ವಂತರವು ಮಾನವ-ಧರ್ಮವನ್ನು ಪ್ರಾರಂಭಿಸಿದೆ. ಶ್ರೀ ರಾಮಕೃಷ್ಣರು ಆದರ ಮನುವು.

ಮಾನವಧರ್ಮವು ಹೊಸ ಧರ್ಮವಲ್ಲ. ಮತಗಳಲ್ಲಿ ಹೊಸದು ಹಳೆಯದು ಇರಬಹುದು. ಧರ್ಮ ಹಾಗಲ್ಲ. ದೇಶ ಬೇರೆ ಬೇರೆಯಾದರೂ 'ಧಾರಿಣಿ'ಯೇ ಬೇರೆ ಎನ್ನಬಹುದೇ? ಧಾರಿಣಿಯು ಒಂದು; ಧಾರಣಾತ್ಮಕ ವಾದ ಧರ್ಮವೂ ಒಂದು. ಧರ್ಮಸ್ಥಾಪನೆಗಾಗಿ ಇದುವರೆಗಾದ ಅನೇಕ ಪ್ರಯತ್ನಗಳು ಮತಗಳ ಮಳಲಾಗಿ ಧರ್ಮಸಾಗರದ ಸುತ್ತಲೂ ಒಟ್ಟಿ ಕೊಂಡಿವೆ. ವಾದಿಗಳ ಮೂಲಕ ಧರ್ಮವು ಮತಾಹಂಕಾರವಾಗಿ ಬಿಡು ವದು; ಅನುಭಾವಿಗಳಿಂದ ಮಾತ್ರವೂ ಧರ್ಮವಾಗುವದು. ಎಲ್ಲ 'ಧರ್ಮ'ಗಳ ದುರ್ವಿಪಾಕದ ಇತಿಹಾಸವು ಇಷ್ಟರಲ್ಲಿ ಅಡಕವಾಗಿದೆ. ಎಲ್ಲ ಮತ ಪಂಥಗಳ ಧರ್ಮ ಸ್ವರೂಪವನ್ನು ಪ್ರಕಾಶಗೊಳಿಸಲು ಶ್ರೀ ರಾಮಕೃಷ್ಣರ ಅವತಾರ ವಾಯಿತು. ಆ ಧರ್ಮವು ಮಾನವನು ದೇವನಾಗುವ ಧರ್ಮ. ಧರ್ಮವು ಅನುಭಾವದ ಮಾತು; ಮತವು ಬುದ್ಧಿಯದು. ಒಂದು ಜೀವದ ಜೀವ ನಾಂತರ; ಇನ್ನೊಂದು ಕರ್ಮದ ಹೊಸ-ನಾಟಕ. ಒಂದು ತನ್ನನ್ನೇ ತಾನರಿ ಯಲು ತಪ ಮಾಡುವದು; ಇನ್ನೊಂದು ಬೇರೆಯವರ ಬುದ್ಧಿಯನ್ನು ಬದಲು ಮಾಡಲು ತಿಣಕಾಡುವದು. ಮತವು ದೇಶ ಭೇದವನ್ನಿಟ್ಟು ದಿಗ್ವಿಜಯಕ್ಕೆ ಹೊರಟು ಏಕ ಛತ್ರಾಧಿಪತ್ಯಕ್ಕೆ ಜಗದ್ಗುರುತ್ವಕ್ಕೆ ಹೊಂಚುಹಾಕುವದು. ಧರ್ಮಕ್ಕೆ ಸರ್ವಂ ಸಹೆಯಾದ ಧಾರಿಣೀಯೇ ಏಕಪೀಠ; ಅದು ತೋರಿದಲ್ಲಲ್ಲಿ ದಿಗ್ದೇಶಗಳಿಂದ ತಾನಾಗಿ ಕಾಣಕೆ ಬರುವವು. ದೇಶಗಳಂತೆಯೆ ಪ್ರಾಕೃತಿಕ ಭೇದ ಮಾತ್ರವಾದದ್ದೆ ಮತವು. ಮತವು ಸಾಧನೆ; ಧರ್ಮವು ಸಿದ್ಧಿ. ಮತ ದಲ್ಲಿ ಮನುಷ್ಯನು ಹುಟ್ಟಬಹುದು; ಧರ್ಮವನ್ನು ಅವನು ಪಡೆಯಬೇಕಾಗು ತ್ತದೆ. ಮತವು ಪ್ರಕೃತಿಯು; ಧರ್ಮವು ಸಂಸ್ಕೃತಿಯು; ಮಾನವನ ಏಕದೇಶ ತ್ವವು ಆಚರಣೆಯಲ್ಲಿ ಬರುವವರೆಗೆ ಮತಗಳ ಕಲಹ ನಡೆಯತಕ್ಕದ್ದೇ. ಮತವು ನೆನೆಗುದಿಗೆ ಬೀಳತಕ್ಕದ್ದೇ. ಶ್ರೀ ರಾಮಕೃಷ್ಣರಿಂದ ಪ್ರಾರಂಭವಾದ ಈ ಗುರುಮಾಲಿಯು ಭೂಮಿಯನ್ನು ಒಂದು ಅಪ್ಪುಗೆಯಲ್ಲಿ ಹಿಡಿದು ಮಾನ ವರನ್ನು ಒಂದು ಜಾತಿಗೆ ತರಲು ತವಕಪಡುತ್ತಿದೆ.

ಮಾನವನೊಂದು ಕುರುಕ್ಷೇತ್ರ; ದೇವಾಸುರರ ಯುದ್ಧಭೂಮಿ, ಮಾನವನ ದೇಹ, ಪ್ರಾಣ, ಮನ, ಬುದ್ಧಿಗಳು, ಪಶುಪ್ರಕೃತಿ ದೇವಪ್ರಕೃತಿಯ ತಮುಲ ಯುದ್ಧ ನಡೆದ ಒಂದು ರಣಾಂಗಣ. ದಿನವೂ ಸೋಲು ಗೆಲುವು ನಡೆದಿದೆ. ಮಹಾ ಯುದ್ಧವೂ ಇವರ ಮುಂದೆ ಒಂದು ಬೀದಿಯ ಜಗಳ ಮಾತ್ರ. ಪಶುಸಂಹಾರ, ಪಶುಪಾಲನ, ಪಶುಯಜ್ಞ, ಪಶುವಾಹನ, ಪಶುಶ್ರಮ ಪಶುಭಕ್ಷಣದಿಂದ ಬೆಳೆದ ಮಾನವ ಜಾತಿಯು ಪಶುವಿನ ಆವೇಶವನ್ನು ತನ್ನ ಆಚರಣೆಯಲ್ಲಿ ಪ್ರಕಟಿಸಿದರೆ ಆಶ್ಚರ್ಯವಲ್ಲ. ಆದರೆ ಆ ಸತ್ತ ಪಶುಗಳು ಸೇಡು ತೀರಿಸಿಕೊಳ್ಳಲೊ ಏನೊ ಎಂಬಂತೆ ಮಾನವರನ್ನು ಪಶುಗಳಂತೆ, ತಂತಮ್ಮಲ್ಲಿ ಕಾದಾಡಹಚ್ಚಿದುದು ಪಶುಗಳ ವಿಜಯವೆಂದೇ ಹೇಳಬಹುದು. ನಮ್ಮ ರಕ್ತದಲ್ಲಿ ವೀರ್ಯದಲ್ಲಿ ಪಶುಸಾರವು ತುಂಬಿದೆ. ಜ್ಞಾನಕ್ಕೆ ಮುತ್ತಿಗೆ ಹಾಕಿರುವ ಕಾಮ ಕ್ರೋಧವ ರಹಸ್ಯವೆ ಇದು. ಮಾನವನ ಪೂರ್ವಜರು ಋಷಿಗಳೋ ಪಶುಗಳೋ? ತನ್ನ ದೇಹ ಪ್ರಾಣ ಮನಗಳ ಆಹುತಿ ಕೊಟ್ಟು ಜ್ಞಾನ ಜ್ಯೋತಿಯನ್ನು ಪಡೆಯಲು ತಪಿಸುವ ಋಷಿಗಳ ದೇವ ಸಂಪ್ರದಾಯವು ಒಂದು; ಇನ್ನೊಬ್ಬರ ದೇಹಪ್ರಾಣ ಮನಗಳನ್ನು ತಿಕ್ಕಿಮುಕ್ಕಿ ಬೆಳೆದ ಕೊಬ್ಬಿನಿಂದ ಬೊಕ್ಕಹಚ್ಚುವ ಪ್ರತಾಪವನ್ನು ಪಡೆಯುವ ಸಂಪ್ರದಾಯ ಇನ್ನೊಂದು. ಒಂದು ಋಷಿಗಳ ದೇವ ಮಾನವಜಾತಿ; ಇನ್ನೊಂದು ಪಶುಗಳ ಅಸುರ ಮಾನವ ಜಾತಿ. ಶ್ರೀ ರಾಮಕೃಷ್ಣ ವಿವೇಕಾನಂದರು ನರ-ನಾರಾಯಣ ಪರಂಪರೆಯ ಋಷಿಗಳು. 'ಪ್ರಾಣಕ್ಕೆ ಒದ್ದಾಡಿ ಪಶುಗಳಾಗಬೇಡಿ; ಜೀವನದ ಕರೆಗೆ ಓಗೊಟ್ಟು ದೇವರಾಗಿರಿ' ಎಂದು ಅವರು ತಮ್ಮ ವಿದ್ಯುತ್ ಸಂದೇಶವನ್ನು ಕಳಿಸಿದಂದಿನಿಂದ ಆಕಾಶ ವಾಣಿಯಂತೆ ಅದು ಎಲ್ಲ ವಿದ್ಯುತ್ ದೇಹಗೇಹಗಳಲ್ಲಿ ತನ್ನ ಮೇಘ ಗರ್ಜನೆಯನ್ನು ಮಾಡುತ್ತಿದೆ. ಪಶುವು ಒಗರು-ಕಾಯಿ; ಮಾನವನು ಹುಳಿ-ಕಾಯಿ, ದೇವನು ಹಣ್ಣು, ಈ ಪಕ್ವತೆಯ ಪರಿಣಾಮಕ್ಕೆ ಭಾರತದ ಧೀರ ವಾಣಿಯು ಭೂಮಂಡಲದ ಮಾನವ ಕೋಟಿಯನ್ನು ಕರೆಯುತ್ತಿದೆ.

ಕವೀಂದ್ರ ರವೀಂದ್ರರ ಕಾವ್ಯದ ತಿಳಿವು; ಮಹಾತ್ಮಾಗಾಂಧಿಯವರ ಕರ್ಮದ ಪರಿಪಾಕ; ರಮಣ ಮಹರ್ಷಿಗಳ ಅನುಭಾವದ ಸ್ವಾರಸ್ಯ; ಗುರು ಅರವಿಂದರ ತಾತ್ವಿಕ ಜೀವನ, ಕೃಷ್ಣಮೂರ್ತಿಗಳ ಸಹವಾಸದ ಸಹಜಸಾಮ

ರಸ್ಯ; ರಾಮಕೃಷ್ಣ ವಿವೇಕಾನಂದ ಸಂಘದ ದೀನ ಮಾನವ ಸೇವೆ— ಇವೆಲ್ಲ ಒಕ್ಕೊರಲಿನಿಂದ 'ಮತಗಳ ಭೇದ ಧರ್ಮದಲ್ಲಿ ಲಯವಾಗಲಿ; ಜಾತಿಗಳ ಭೇದ ಜೀವನದಲ್ಲಿ ಲಯವಾಗಲಿ; ದೇಶಗಳ ಭೇದ ಧಾರಿಣಿಯಲ್ಲಿ ಲಯವಾಗಲಿ' ಎಂದು ಕೂಗಿ ಹೇಳುತ್ತಿವೆ. ಆದರೆ ಇದು ವೈಲಕ್ಷಣ್ಯವದೇನು? ಇದು ಪ್ರಚಾರದಿಂದಾಗಲಿ, ಒತ್ತಾಯದಿಂದಾಗಲಿ ಆಗುವ ಕೆಲಸವಲ್ಲ. ಮತಗಳನ್ನು ದುರ್ಲಕ್ಷಿಸುವದು ಧರ್ಮವನ್ನು ಸಾಧಿಸಲಾರದು; ಒಂದು ಮತವು ಇನ್ನೊಂದು ಮತವನ್ನು ಹೊಡೆದು ಹಾಕುವ ಡೊಣ್ಣೆಯೂ ಆಗಬಾರದು. ಮತಾಚಾರದಿಂದ ಆತ್ಮದೃಷ್ಟಿ ಬರಬೇಕು. ಜಾತಿ ವರ್ಣಗಳ ಸಾಂಕರ್ಯದಿಂದ ಜೀವನವು ಸುಗಮವಾಗಲಾರದು; ಒಂದು ಜಾತಿ ವರ್ಣವು ಇನ್ನೊಂದರ ವೈರಿಯಲ್ಲ. ವರ್ಣಗಳು ತಮ್ಮ ಪುರುಷಾರ್ಥದಿಂದ ಆತ್ಮವನ್ನು ಮುಕ್ತಗೊಳಿಸುವ ಮಾರ್ಗಗಳಾಗಬೇಕು. ದೇಶಗಳನ್ನು ಪಾದಾಕ್ರಾಂತಮಾಡಿ ಧಾರಿಣಿಯ ಒಕ್ಕಟ್ಟು ಸಾಧಿಸದು; ದೇಶದ ಒಡಕು ಧರ್ಮದ ಒಡಕೂ ಆಗದು. ದೇಶ ಅಂದರೆ ದೇಹ; ದೇಶ ಎಂದರೆ ಅನ್ನಕೋಶ. ಅದು ಧರ್ಮಸಾಧನೆಯ ಪ್ರಥಮ ಸಂಪತ್ತು. 'ವಿಭಕ್ತವಿದ್ದಲ್ಲಿಯೂ ಅವಿಭಕ್ತವನ್ನು ಕಾಣುವದು ಸಾತ್ವಿಕ ಬುದ್ಧಿಯ ಲಕ್ಷಣ.' ಈ ಸತ್ತ್ವದ ಸಾತ್ವಿಕತೆಯನ್ನು ಸ್ಥಾಯಿಯಾಗಿ ನಿಲ್ಲಿಸಲು ಶ್ರೀ ರಾಮಕೃಷ್ಣರೇ ಮೊದಲಾದ ಮಹಾತ್ಮರಂಥ ಮಹಾಸತ್ವಗಳು ಕ್ಷಣಕ್ಷಣಕ್ಕೂ ಅಭ್ಯಾಸ ಮಾಡಿ ಮಾಡಿಸುವವು.

ಎಚ್ಚರದಲ್ಲಿದ್ದ ಅರಿವು ಕನಸಿನಲ್ಲಿಲ್ಲ; ಕನಸಿನಲ್ಲಿದ್ದದ್ದು ನಿದ್ರೆಯಲ್ಲಿಲ್ಲ ಇಂಥ ಅರೆಮರುವಿನ ಮಾನವತೆಯು ಶ್ರೀ ರಾಮಕೃಷ್ಣರದಲ್ಲ. 'ಅರಿತರೆ ಶರಣ, ಮರೆತರೆ ಮಾನವ, ಇಚ್ಛಾ— ಜ್ಞಾನ— ಕ್ರಿಯೆಗಳಲ್ಲಿ ಎಳೆದ ಟೊಳಜಗಳವಿದ್ದ ಜಾತಿಯು ಅವರದಲ್ಲ. ಮಾತು-ಮೈಯು ಮನಸ್ಸನು ಮೂರ್ತಿಮಾಡಿ ತೋರಿಸಿದಂತೆ ಇಂಥವರ ಜೀವನ. ಶಾಂತಿಯು ಇವರ ನೆಲೆ; ಮೈತ್ರಿಯು ಇವರ ಜೀವನ; ಕರುಣೆಯು ಇವರ ಭಾಷೆ ಮುದಿತೆಯು ಇವರ ಅನುಭಾವ. ಈ ಭಾವ ರಸಾಯನವು ದೇಹವನ್ನು ರಕ್ತದಂತೆ ಅಭಿಸರಣ ಮಾಡಬೇಕಾದರೆ ಆತ್ಮರತಿಯ ಅನಿರುದ್ಧ ವಿದ್ಯುತ್ ಪ್ರವಾಹವೇ ಬೇಕು. ಅದು ಅದ್ವೈತ ಸಿದ್ಧಿಯಿಂದಲೂ ದ್ವೈತ ಸಾನಿಧ್ಯದಿಂದಲೂ ಆಗಬೇಕಲ್ಲದೆ ಬೇರೆ ಯಾತರಿಂದಲೂ ಸಾಧ್ಯವಲ್ಲ. ಇದು ಕೆಲವರಿಗೆ ಮಾನವ

ಸಹಧರ್ಮದ ರಸಜ್ಞತೆಯಿಂದಲೂ; ಕೆಲವರಿಗೆ ಸತ್ಯ ಅಹಿಂಸೆಗಳ ಸಂತತ ಸಾಧನೆಯಿಂದಲೂ, ಇನ್ನೂ ಕೆಲವರಿಗೆ ವಿಜ್ಞಾನ ಸಿದ್ಧಿಯಿಂದಲೂ; ಮತ್ತೆ ಕೆಲವರಿಗೆ ಅಹಮಾತ್ಮ ಭಾವದ ಅರಿವಿನಿಂದಲೂ; ಕೆಲವರಿಗೆ ಜೀವನ ಶಕ್ತಿಗಳ ಸುಮಾದಿ ಸಾಮರಸ್ಯದಿಂದಲೂ ಸಾಧಿಸಬಹುದು. ಆದರೆ ಮಾನವನ ಜೀವನ ಸ್ಥಾಯಿಯೇ ಬೇರೆಯಾಗದೆ; ಜಗತ್ತಿನ ಇತಿಹಾಸವು ಬೇರೆಯಾಗಲಾರದು. ಪುನರಪಿ ಜನನಂ ಪುನರಪಿ ಮರಣಂ ಎಂದು ಮೃತ್ಯು ಸಂಸಾರ ಸಾಗರದ ಎಲ್ಲ ಸುಸ್ಕೃತಿಗಳನ್ನು ನಾಗರಿಕತೆಗಳನ್ನು ನಾಮಶೇಷ ಮಾಡುವದು. ಮನದ ತತ್ತಿಯೊಡೆದು ಜ್ಞಾನದ ಹಕ್ಕಿ ಹಾರುವವರೆಗೆ; ಪಶು ಧರ್ಮದ ಗುರುತ್ವಾಕರ್ಷಣವನ್ನು ಪ್ರಾಣವು ಮೀಕ್ಕುವವರೆಗೆ ರಾತ್ರಿಯನ್ನರಿಯದ ನಿತ್ಯ ಪ್ರಭಾತ, ನಿತ್ಯ ದಿವಸವನ್ನನುಭವಿಸುವ ಧ್ರುವ ಪ್ರದೇಶದ ಸೌಭಾಗ್ಯವನ್ನು ಜೀವವು ಪಡೆಯುವ ವರೆಗೆ— ಎಲ್ಲ ಅವತಾರಗಳು ಗಾಳಿ ಬಂತು ಗಾಳಿ ಹೋಯಿತು ಎಂದೆನ್ನುವ ರೀತಿ ಸಾರ್ಥಕತೆ ಕಾಣವು. ಆತ್ಮದ ಅರಿವು ಮೈಗೊಂಡು ನಿಲ್ಲಬೇಕು. ಇದು ಸೇವೆ, ಸಹಾನುಭೂತಿ ಸಮಾನತೆಗಳ ಸಂಸ್ಕಾರದಿಂದ ಕಣ್ತೆರೆಯುವದೇನೋ ನಿಜ. ಆದರೆ ಕೆಚ್ಚಿನಲ್ಲಿ ಆತ್ಮದ ಕೆಚ್ಚಲು ತೊರೆಬಿಡದೆ ಹೊಸ ಜೀವನವೆಂಬುದು ಹುಸಿ ತೋರಿಯಿದ್ದಂತೆಯೆ ಸರಿ.

ವಿಶ್ವಕುಟುಂಬ, ಸಹಧರ್ಮ, ದೇವಲೋಕಗಳನ್ನು ರಚಿಸಬಂದ ಶ್ರೀರಾಮಕೃಷ್ಣರಂಥ ಆತ್ಮಶಿಲ್ಪಿಗಳು ಅಪರೂಪ. ಸ್ಪರ್ಶಮಣಿಯ ಸಾಮರ್ಥ್ಯವು ಅವರಿಗಿರುತ್ತದೆ. ಅಂಥವರ ಜೀವನದ ಶ್ರವಣ, ಮನನ, ನಿಧಿಧ್ಯಾಸವು ತಾರಕ ಮಂತ್ರವಾಗುವದು. ಶ್ರೀರಾಮಕೃಷ್ಣ ರಸಾಯನವು ನರಲೋಕದ ವಿವೇಕವನ್ನೆ ಬೆಳಗಿ ಆನಂದ ಸಾಮ್ರಾಜ್ಯದ ಜಯಭೇರಿಯನ್ನು ಎಲ್ಲೆಡೆಯಲ್ಲು ಮೊಳಗಿಸಲಿ. ಓಂ ಶಾಂತಿಃ, ಶಾಂತಿಃ, ಶಾಂತಿಃ.

---

## ೨. ಶ್ರೀರಾಮಕೃಷ್ಣರು.

ಶ್ರೀರಾಮಕೃಷ್ಣ ಪರಮಹಂಸರ ಚರಿತ್ರೆಯು ಲೌಕಿಕ ರೀತಿಯಿಂದ ಸಾಮಾನ್ಯ ಚರಿತೆಯಾಗಿ ತೋರುವವು. ಹುಟ್ಟಿದ ಮನೆಯೇನು ಬಹಳ ದೊಡ್ಡವರ ಮನೆಯಲ್ಲ. ದುಡ್ಡಿನಿಂದಲೂ ದೊಡ್ಡವರದಲ್ಲ. ಗುರುತ್ವದಿಂದಲೂ ದೊಡ್ಡವರದಲ್ಲ. ಆದರೂ ಮಾನ ಕಾಯ್ದುಕೊಂಡು ಬಾಳಿದ ಮಧ್ಯಮಸ್ಥಿತಿಯವರ ಮನೆ. ತಂದೆ ಖುದೀರಾಮನು ಶಿಷ್ಟಾಚಾರವನ್ನು ಪಾಲಿಸುತ್ತ ಬಂದ ಶ್ರದ್ಧಾವಂತ ಗೃಹಸ್ಥ; ತಾಯಿ ಚಂದ್ರಮಣಿಯು ಮೋಹ, ನಿಷ್ಠೆ, ಭಕ್ತಿ, ಭಾವಿಕತೆಗಳಿಂದ ಕೂಡಿದ ಆರ್ಯ ಸಾಧ್ವಿಮಣಿಯರಂತಹ ಸಾಧು ಸ್ವಭಾವದ ಗೃಹಿಣಿ. ಇಂತಹವರ ಹೊಟ್ಟೆಯಲ್ಲಿ ಹುಟ್ಟಿದ ಈ ಮಗುವು ಮನೆಯಲ್ಲಿ ವಯಸ್ಸಿನಿಂದ ಹಿರಿಯನಂತೂ ಇರಲಿಲ್ಲ; ವಿದ್ಯೆಯಿಂದಲೂ ಬಹಳ ಹಿರಿಯನೆಂದೇನೂ ಎನ್ನಿಸಿಕೊಂಡಿರಲಿಲ್ಲ. ಆದರೂ ಬಾಲ್ಯದಲ್ಲಿ ತನ್ನ ಮಧುರ ಸ್ವಭಾವದಿಂದಲೂ ಕುಶಲ ಬುದ್ಧಿಯಿಂದಲೂ ತನ್ನ ಓರಿಗೆಯ ಹುಡುಗರಿಗೂ ಹುಡಿಗೆಯರಿಗೂ, ಹೇಗೊ ಹಾಗೆ ಹಿರಿಯರಿಗೂ ಬೇಕಾಗಿದ್ದನು. ಸಾಮಾನ್ಯರಿಗೆ ಬರುವ ಆಪತ್ತು ಇವನಿಗೂ ಬಂದವು. ಇವನ ಚಿಕ್ಕಂದಿನಲ್ಲಿಯೆ ತಂದೆ ತೀರಿಕೊಂಡರು. ಕೆಲಮಟ್ಟಿಗೆ ಹೊಟ್ಟೆಗಾಗಿಯೂ, ಕೆಲಮಟ್ಟಿಗೆ ಬೇರೆ ಕೆಲಸವೇನೂ ಇರಲಿಲ್ಲವೆಂದೂ, ಕೆಲಮಟ್ಟಿಗೆ ಬ್ರಾಹ್ಮಣರಿಗೆ ಸಹಜ ಕೆಲಸವೆಂದೂ, ಕೆಲಮಟ್ಟಿಗೆ ದೈವಾಯತ್ತವಾಗಿಯೂ ಇವನಿಗೆ ಕಲಕತ್ತೆಯ ದಕ್ಷಿಣೇಶ್ವರದ ಕಾಲಿಯ ಪೂಜಾರಿಯ ಕೆಲಸವು ಪಾಲಿಗೆ ಬಂತು. ಇವನು ಬಾಳಿದ್ದುದು ಐವತ್ತು ವರ್ಷ ಮಾತ್ರ; ಶತಾಯುವೂ ಕೂಡ ಆಗಲಿಲ್ಲ. ಇವನು ವಯಸ್ಸಿಗೆ ಬಂದ ಮೇಲೆ ಮನೆಯವರು ಇವನ ಮದುವೆ ಮಾಡಬೇಕೆಂದರು. ಇವನು ಆಗಿನ ಕಾಲಕ್ಕೆ ಸರಿಯಾಗಿ ಒಂದು ಐದು ವರ್ಷದ ಕೂಸನ್ನ ಮದುವೆಯಾದನು. ಈ ಹುಡಿಗೆಯೂ ಪ್ರಾಪ್ತ ವಯಸ್ಕಳಾದ ಮೇಲೆ ಗಂಡನ ಕಡೆಗೆ ಇರಲು ಬಂದಳು. ಪುಣ್ಯವಂತ ಗ್ರಹಸ್ಥರಂತೆ ಇವನೂ ಹೆಂಡತಿಯನ್ನು ಪಾಲಿಸಿಕೊಂಡೇ ಕೊನೆಯವರೆಗೂ ಇದ್ದನು. ತನಗೆ ಬೇಕಾದ ವಿದ್ಯೆಯನ್ನು ಅನೇಕ ಜನರ ಕೈಯಿಂದ ಕಲಿತನು. ತಾನು ಕಲಿತದ್ದನ್ನು ಅನೇಕರಿಗೂ ಹೇಳಿದನು. ಯೋಗ್ಯತೆಯುಳ್ಳವರಲ್ಲಿ ಅತಿ ಮಮತೆಯನ್ನೂ ತೋರಿಸಿದನು. ಇಡಿ ಆಯುಷ್ಯದಲ್ಲಿ ಬಹಳ ದೇಶಗಳನ್ನೇನೂ ಕಂಡಿರಲಿಲ್ಲ.

ತನ್ನ ಹುಟ್ಟೂರು, ಕಾಮಾರಪುಕರ, ತಾನು ವಾಸವಾದೂರು ಕಲಕತ್ತೆ, ಒಮ್ಮೆ ತಮ್ಮ ಗುಡಿಯ ಯಜಮಾನರೊಂದಿಗೆ ಉತ್ತರ ಹಿಂದುಸ್ಥಾನದೊಳಗಿನ ಕ್ಷೇತ್ರಯಾತ್ರೆ. ಇದಿಷ್ಟು ದೇಶಜ್ಞಾನ ಇವನಿಗೆ. ಇವನಿಗೆ ಬಂಗಾಲಿಯ ಹೊರ್ತು ಭಾಷೆ ಬರುತ್ತಿರಲಿಲ್ಲ; ವ್ಯುತ್ಪತ್ತಿ ಸಂಸ್ಕಾರಗಳು ಸುಮಾರು ಒಳ್ಳೆಯ ಪುರಾಣಿಕರಿಗೂ ಹರಿಕಥೆಯವರಿಗೂ ಇರುವಷ್ಟು. ಹಾಡುವದರಲ್ಲಿ ಮಾತನಾಡುವದರಲ್ಲಿ, ದೊಡ್ಡವರನ್ನು ನೋಡುವದರಲ್ಲಿ, ವಿನೋದದಲ್ಲಿ ಕಥಾನಿರೂಪಣದಲ್ಲಿ ತುಂಬ ಮಮತೆ. ಮಾತಾಡಿ ಮಾತಾಡಿ ಇವನಿಗೆ ಕೊನೆಗೆ ಕಂಠರೋಗ ಬಂದಿತು. ಹೆಂಡತಿಯನ್ನು ಹಿಂದೆ ಬಿಟ್ಟು ಇವನು ತೀರಿಕೊಂಡನು. ಇಂಥ ಒಬ್ಬನು ಅವತಾರಿಕನಿದ್ದನೆಂದರೆ, ಬರಲಿರುವ ಮುನ್ನೂತರದ ಮನುವೆ ಇವನು ಎಂದು ಹೇಳಿದರೆ ಆಂಗ್ಲವಿದ್ಯಾ ಕಲುಷಿತರಿಗಿರಲಿ, ಸಂಸ್ಕೃತ ವಿದ್ಯಾವಿಭೂಷಿತರಿಗೂ ಸ್ವಲ್ಪ ಅನುಮಾನವೇ ಉಂಟಾಗುವಂತಿದೆ

ಅನೇಕ ಗೃಹಸ್ಥ ಸಾಧುಗಳಂತೆ ರಾಮಕೃಷ್ಣರ ಸಾಮಾನ್ಯ ಜೀವನದಲ್ಲಿದ್ದ ಅಸಮಾನ್ಯತೆಯೂ ಸ್ವಲ್ಪ ಸಾಮಾನ್ಯವಾಗಿಯೇ ಇದ್ದಿತು. ಮಹರ್ಷಿಯೆನಿಸಿಕೊಂಡ ದೇವೇಂದ್ರನಾಥ ಠಾಕೂರರಿಗೂ, ವಿದ್ಯಾಸಾಗರನೆನಿಸಿದ ಈಶ್ವರಚಂದ್ರರಿಗೂ, ನವಯುಗ ಸಾಹಿತ್ಯಾಚಾರ್ಯರಾದ ಬಂಕೀಮಚಂದ್ರರಿಗೂ ಇವರ ಬ್ರಹ್ಮವಿದ್ಯಾ ವೈಭವವು ಸಾಕಷ್ಟು ಕಣ್ಣಿಗೆ ಬೀಳಲಿಲ್ಲ. ಇವರ ವಚನಾಮೃತದ ಬೆಂಬಲಕ್ಕೆ ಇವರ ಅದ್ವಿತೀಯವಾದ ಅಧ್ಯಾತ್ಮ ಚಾರಿತ್ರ್ಯ ವಿರದಿದ್ದರೆ ಇವರ ವಚನಗಳನ್ನು ಯಾವ ಬಾಯಿಬಡುಕ ವಾದಿಯೂ, ಸಾಂಪ್ರದಾಯಿಕ ಭಕ್ತನೂ ಹೇಳಬಹುದಾಗಿತ್ತು. ಇವರ ಲೀಲಾ ಪ್ರಸಂಗಗಳು ಯಾವ ನಾಡಾಡಿ ಸಾಧುಗಳ ಚರಿತ್ರದಲ್ಲಿಯೂ ದುರ್ಲಭವಲ್ಲ ಎನಿಸುವಂತಿವೆ. ಕೆಲವರಂತೂ ಇವರಿಗಿಂತಲೂ ವೈಭವಯುಕ್ತರಾಗಿರುತ್ತಾರೆ. ವಿವೇಕಾನಂದನ ಫಲವು ಇವರ ಜೀವನ ವೃಕ್ಷಕ್ಕೆ ಬಂದಿರದಿದ್ದರೆ ಇವರ ಜೀವನವು ಜಗತ್ತಿನ ಅವತಾರಿಕರ ಮಾಲಿಕೆಯಲ್ಲಿ ಸೇರದೆ ಬಂಗಾಲದ ಪ್ರಾಂತೀಯ ಸಾಧುಗಳ ಪಟ್ಟಿಯಲ್ಲಿ ಅಡಗಿಕೊಂಡು ಕೂಡಬಹುದಾಗಿತ್ತು. ಇಂಥವರ ಚಾರಿತ್ರ್ಯವನ್ನು ಹೇಳುವದರಿಂದ ಆಗುವ ಲಾಭವಾಗಲಿ, ಉಪಯೋಗವಾಗಲಿ ಆನಂದವಾಗಲಿ ಏನು ಎಂದು ತೋರಿದರೆ ತಪ್ಪೇನು?

ಶ್ರೀರಾಮಕೃಷ್ಣರ ತೀರ ಲೌಕಿಕ ಚರಿತ್ರವು ತೀರ ಸಾಮಾನ್ಯವಾಗಿದೆ ಆದರೆ ಅವರ ಜೀವನದೊಳಗಿನ ಪ್ರತ್ತಿ ಕೆಲವು ಘಟನೆಗಳಿಂದ ಧ್ವನಿತವಾಗುವ ಚಾರಿತ್ರ್ಯವೂ, ಆ ಚಾರಿತ್ರ್ಯವೇ ಆಗಾಗ್ಗೆ ತಲೆಯೆತ್ತಿ ಮತ್ತೆ ಮುಕ್ತಿ ವ್ಯೆಗೊಂಡು ನಿಂತಾಗ್ಗೆ ಅನುಭವಕ್ಕೆ ಬರುವ ಅಲೌಕಿಕತೆಯೂ ಅಸಾಮಾನ್ಯವಾಗಿವೆಯೆಂದೇ ಹೇಳಬೇಕು. ಮೊಟ್ಟಮೊದಲಿನ ಮಾತೇದೇ ಹೇಳಬೇಕಾದರೆ— ಪ್ರಪಂಚದಲ್ಲಿ ಕಾಮಕ್ರೋಧಗಳ ನೆಲೆಯೆಂದು ಪ್ರಸಿದ್ಧವಾಗಿರುವ ಇಂದ್ರಿಯ ಮನಸ್ಸು ಬುದ್ಧಿಯೇ ಇವರಲ್ಲಿ ತೀರ ಬೇರೆ ಜಾತಿಯದಾಗಿತು. ಕಾಮ ಕ್ರೋಧಾದಿಗಳನ್ನು ವ್ಯಕ್ತ ಮಾಡುವ ಶಕ್ತಿಯೇ ಬದಲಾಗಿ ಅಲ್ಲಿ ಆತ್ಮರತಿಗೂ ದೇವಕಾಮವೂ ನೆಲಿಗೊಂಡು ನಿಂತು ದಿವ್ಯವತೆಯನ್ನೆ ಉಸಿರಾಡಿಸುತ್ತಿತ್ತು. ಯಾವ ದೇವರ ನಾಮವೂ ಅವರಿಗೆ ಆ ರೂಪ ಸಾಕ್ಷಾತ್ಕಾರವನ್ನು ಕೊಟ್ಟು, ಅದರೊಂದಿಗೆ ದೇಹವಿಸ್ಮೃತಿಯನ್ನು ತರುತ್ತಿತ್ತು; ರತಿಕ್ರೀಡಾದರ್ಶನವು ಪುರುಷಪ್ರಕೃತಿ ಐಕ್ಯವನ್ನು ಅನುಭವಕ್ಕೆ ತರುತ್ತಿತ್ತು, ವೇಶ್ಯೆಯ ಸ್ಪರ್ಶವೂ ಶ್ಯಾಮಾಮಾತೆಯಲ್ಲಿ ತಲ್ಲೀನತೆಗೆ ಹಾದಿಯಾಗುತ್ತಿತ್ತು; ಅವರ ಜೀವದ ಜೇಡಹುಳವು ದೇಹ ಪ್ರಾಣ ಮನಗಳನ್ನು ದಾಟಿ ತನ್ನ ಬಲೆಯನ್ನು ಜ್ಞಾನಶರೀರದಲ್ಲಿ ಕಟ್ಟಿಕೊಂಡಿತ್ತು. ಅವರ ಈ ಅನುಭವಕ್ಕೆ ಸರಿಯಾಗಿ ಅವರ ಜ್ಞಾನವಿರದಿದ್ದರೆ, ಯೋಗ್ಯರಾದ ಬೇರೆ ಜೀವರುಗಳಲ್ಲಿ ಸ್ಪರ್ಶಮಾತ್ರದಿಂದ ಸ್ವಸದೃಶ ಶಕ್ತಿಯನ್ನು ಉದ್ದೀಪನಗೊಳಿಸುವ ಪ್ರಚೋದಕತನವಿರದಿದ್ದರೆ ಅವರ ಈ ವ್ಯೆಮರೆವು ಮಲರೋಗವೆಂದೋ ನರಗಳ ಜಾಡ್ಯವೆಂದೋ ಹೇಳಬಹುದಾಗಿತ್ತು. ಅವರ ಜೀವನವೇ ಒಂದು ಮಹಾ ಕೃತಿಯಾಗಿತ್ತು. ಅವರು ಬೇರೆ ಕೃತಿ ಮಾಡುವ ಅಗತ್ಯವಷ್ಟಿರಲಿಲ್ಲ. ಅವರ ಇರುವಿಕೆಯೆ ಜಾತಿಯೆ! ಹೊಸ ಜಾತಿ, ತರ್ಕಬುದ್ಧಿಯ ಬೇಲಿಯನ್ನು ಕಟ್ಟಿಕೊಂಡು ಬದುಕಿದವರಿದ್ದಾರೆ, ಪವಾಡಗಳಿಂದ ದಿಕ್ಕು ತಪ್ಪಿಸಿ ಪಾರಾದವರಿದ್ದಾರೆ, ಆಧ್ಯಾತ್ಮಿಕ ರಾಜ್ಯದೊಳಗಿನ ಯೋಧರು, ತುಂಟರು, ರಾಸಪುತೀನರೂ ಇದ್ದಾರೆ. ಆತ್ಮಸ್ಪರ್ಶದಿಂದ, ಕಲ್ಲಾದವರನ್ನೂ, ಹುಡುಗತನಕ್ಕಿಳಿದವರನ್ನೂ, ಹುಚ್ಚು ತಲೆಗೇರಿದವರನ್ನೂ, ಬ್ರಹ್ಮಜ್ಞಾನಿಗಳೋ ಬ್ರಹ್ಮಪಿಶಾಚಿಗಳೋ ಎಂದು ನಿಶ್ಚಯಿಸಲು ಬರದವರನ್ನೂ ಆಗೀಗ ಕಾಣಬಹುದು, ಆದರೆ ಅಧ್ಯಾತ್ಮವನ್ನೇ ಜೀವನೋಪಾಯವನ್ನಲ್ಲ, ಜೀವನವನ್ನೇ ಮಾಡಿಕೊಂಡ ಸಭ್ಯಗೃಹಸ್ಥನನ್ನೂ, ಅಧ್ಯಾತ್ಮಿಕೆಯ ಆರೋಗ್ಯವನ್ನು ಕೊಡಲು, ಹಾಗು ಅದರ ರೋಗಗಳನ್ನು ಹೊಡೆದು ಹಾಕಲು

ಆಧ್ಯಾತ್ಮಿಕತೆಯು ಸಕಲ ಧರ್ಮ ಮತ ಪಂಥಗಳ ಸಾಧನಗಳನ್ನು ಆತ್ಮೀಕರಿಸಿದ ದೇವ ಜೀವನನ್ನು ಕಾಣುವವು ದುರ್ಲಭವೆಂದೇ ಹೇಳಬೇಕು. ಈ ಮಾತಿನಲ್ಲಿಲ್ಲಿಯೆ ಈ ಚರಿತ್ರವು ಶ್ರವಣೀಯ ಪಾವನೀಯವೂ ಜಗದ್ವಿಲಕ್ಷಣವೂ ಆಗಿದೆ.

ಇತ್ತೀಚೆ, ರವೀಂದ್ರರ ಜೀವನ ದೇವತೆಯು ರೂಪಿಸಿದ ಕವನಗಳನ್ನು ನಾವು ಓದಿದ್ದೇವೆ, ಮಹಾತ್ಮ ಮೋಹನದಾಸರ ಸತ್ಯ ಪ್ರಯೋಗಗಳಲ್ಲಿ ಅವರ 'Inner Voice' 'ಹೃದಯಾಂತರಾಳದ ಧ್ವನಿ'ಯು ಮಾಡುವ ಮಾರ್ಪಾಡುಗಳನ್ನು ಕಂಡಿದ್ದೇವೆ, ಜೆ. ಕೃಷ್ಣಮೂರ್ತಿಯವರ ಉಪನ್ಯಾಸಗಳಲ್ಲಿ ಅವರ ಆಧ್ಯಾತ್ಮ ಜೀವನದ ಸಂಗಡಿಗನಾದ ಪ್ರಿಯಸಖನ ಮಾತನ್ನು ಕೇಳಿದ್ದೇವೆ, ಅರವಿಂದರ ಜೀವನ ಸಾಧಕದಲ್ಲಿ ನಾರಾಯಣನ ಹಾಗು ಜಗನ್ಮಾತೆಯ ಸ್ಥಾನವೂ ಅಚಲವಾದುದೆಂದೂ ಕಾಣುತಲಿದ್ದೇವೆ. ಆದರೆ ನವಭಾರತದ ನೂತನ ಆಧ್ಯಾತ್ಮ ಮಹಾಭಾರತದಲ್ಲಿ ಇಂಥ ಸಾಧನೆಯ ಅಧ್ಯಾಯಗಳಲ್ಲಿ ಓಂ ಪ್ರಥಮಾಧ್ಯಾಯವು ಶ್ರೀರಾಮಕೃಷ್ಣ ಪರಮಹಂಸರದು, ಆಮೇಲೆ ಗುರುವನ್ನೇ ದೈವವನ್ನು ಮಾಡಿಕೊಂಡ ಅವರ ಶಿಷ್ಯರತ್ನನಾದ ವಿವೇಕಾನಂದರದು ಸಾಮಾನ್ಯರ ಜೀವನವು ಹೊಟ್ಟೆಯ ಕೆಳಗೆ ನಾಲ್ಕು ಬೊಟ್ಟು, ಮೇಲೆ ನಾಲ್ಕು ಬೊಟ್ಟು ಇಷ್ಟರಲ್ಲಿ ಸುತ್ತಾಡುವದು. ಮೇಲೆ ಬಂದರೆ, ಹೃದಯದ ಪ್ರಕಾರ ವಿಕಾರಗಳ ಮಡುವಿನಲ್ಲಿ ಬೀಳುವದು. ತಮ್ಮ ತಲೆಯಲ್ಲಿ ಸ್ಥಿರಾಸನವನ್ನು ಹಾಕಿ ತಮ್ಮ ಜ್ಞಾನೇಂದ್ರಿಯಗಳಿಂದಲೇ ಬಾಳುವ ಜನರು ತೀರ ವಿರಳ. ಆದರೆ ತಮ್ಮ ತಲೆಯ ಮೇಲೂ ನಾಲ್ಕು ಬೊಟ್ಟಿನ ಮೇಲಿರುವ ತಮ್ಮ ಶಿಖಾರತ್ನ ಪ್ರಭೆಯಲ್ಲಿಯೇ ದೇಹಾದ್ಯಂತವ್ಯವಹಾರವನ್ನು ನಡೆಸುವವರು ಈ ಭೂಮಿಗೇ ಹೊಸಬರು. ಇಂಥವರಲ್ಲಿ ಬೆಳಕಿರುವದೆನ್ನುವದಕ್ಕಿಂತಲೂ ಬೆಳಕಿನಲ್ಲಿಯೆ ಇವರಿರುವರು ಎನ್ನಬೇಕು. ಈ ಆಧ್ಯಾತ್ಮ ವಿದ್ಯಜ್ಜೀವಿಗಳಿಗೆ ರಕ್ತಮಾಂಸದ ದೇಹವು ಆಧ್ಯಾತ್ಮ ಪ್ರವಾಹ ವಾಹಕ ಯಂತ್ರ ಮಾತ್ರ. ಶ್ರೀರಾಮಕೃಷ್ಣರ ಆಧ್ಯಾತ್ಮಸ್ಪರ್ಶಕ್ಕೆ ಅನೇಕರು ತತ್ತರಿಸಿದರು, ಕೆಲವರು ಎಚ್ಚರಾದರು, ಕೆಲವರು ಚೇತನಗೊಂಡರು. ಕೆಲವರಲ್ಲಿಯ ಶಕ್ತಿಯನ್ನೇ ಇವರು ಹೀರಿಕೊಂಡರು. ಕಲಿಸಬಂದವರಿಗೆ ತಿರುಗಿ ಕಲಿಸಿದರು. ಜ್ಞಾನಿಗೆ ಭಕ್ತಿಯನ್ನು ಕಲಿಸಿದರು, ಭಕ್ತನಿಗೆ ಜ್ಞಾನವನ್ನು ಕಲಿಸಿದರು. ನಾಡಾಡಿ ಜ್ಞಾನಿಭಕ್ತರುಗಳಿಗಲ್ಲ. ತೋತಾಪುರಿ ಭೈರವ ಬ್ರಾಹ್ಮಣಿ

ಯಂಥ ಆ ಮಾರ್ಗದೊಳಗಿನ ಸಿದ್ಧರಿಗೆ ನಿಜವಾದ, ನಿರಂತರವಾದ, ಅಪಾರವಾದ ಅಧ್ಯಾತ್ಮದ ಹಸಿವಿದ್ದ ಕೇಶವಚಂದ್ರಸೇನರಿಗೂ ವಿವೇಕಾನಂದರಿಗೂ ತಮ್ಮ ನಿಲುವನ್ನು ತೋರಿದರು.

ಅವತಾರಿಗಳು ಹೇಗೂ ಕರ್ತುಂ ಅಕರ್ತುಂ ಅನ್ಯಥಾಕರ್ತುಂ ಸಾಮರ್ಥ್ಯವಂತರು ಎಂಬ ಮಾತುಗಳು ಕೆಲವರಿಗೆ ಸಮಾನಾರ್ಥಕವಾಗಿ ತೋರುವವು. ಮುಟ್ಟಿದ್ದೆಲ್ಲ ಚಿನ್ನ ಮಾಡಬಹುದಾದ ಮಿಡಾಸನಂತೆ ಇಂಥವರು ಜಗತ್ತಿನ ಜನರನ್ನೆಲ್ಲ ಉದ್ಧಾರ ಮಾಡುವ ಸಾಮರ್ಥ್ಯವಂತರೆಂಬ ನಂಬಿಕೆಯೊಂದಿದೆ. ಶ್ರೀರಾಮಕೃಷ್ಣರು ಕಾಲ, ಬಲ, ಪ್ರಕೃತಿಯನ್ನು ನೋಡಿಕೊಂಡು ಫಲಗಳನ್ನು ಪಕ್ವತೆಗೆ ತರುವ ಸೂರ್ಯನಾರಾಯಣನಂತೆ ಪ್ರತಿಯೊಂದು ಜೀವನಕ್ಕೂ ತನ್ನ ಸ್ವತಂತ್ರವಾದ ಪರಿಪಾಕ ಶಕ್ತಿಯೊಂದಿದೆ. ಎಂಬುದನ್ನು ತಿಳಿದು ಅವರವರ ಪರಿಣತಿಗೆ ತಮ್ಮ ಅಧ್ಯಾತ್ಮ ಪ್ರಕಾಶವನ್ನು ಕೊಟ್ಟು ತಮ್ಮ ತಮ್ಮ ಸಾಧನೋತ್ಸಾಹದ ಉಸಿರಿನ ಗಾಳಿಯಿಂದಲೇ ಅವರು ಬಾಳಿ ಬೆಳೆಯಲೆಂದು ಬಿಟ್ಟು, ತಾಯಿಯ ಅಪಾರ ಕರುಣಾಜಲಧಿಯ ಅಮೃತವಾರಿಯನ್ನು ತಮ್ಮ ಪ್ರಾರ್ಥನಾ ತಪದಿಂದ ಎತ್ತಿ ತಂದು ತಮ್ಮ ಪಾದಗಳ ಮೇಲೆ ಮಳೆಗರೆಯಲು ಬಿಡುತ್ತಿದ್ದರು. ಕಾಳಿಮಾತೆಯ ಇಚ್ಛೆಯರಿಯದೆ ಇರವೆ ತಮ್ಮದಾಗಲೀ ಶಿಷ್ಯರದಾಗಲಿ, ಜಗತ್ತಿನದಾಗಲಿ ಯಾವ ಅಧ್ಯಾತ್ಮ ಹಿತವನ್ನುಂಟುಮಾಡಲು ಅವರು ಅಹಂಕಾರದಿಂದ ಮುಂದರಿಯುತ್ತಿದ್ದಿಲ್ಲ. ಕಾಳಿಮಾತೆಯನ್ನೇ ಅವರು ತಮ್ಮ ಅಹಂಕಾರದ ಜಗಲಿಯಲ್ಲಿ ಪ್ರತಿಷ್ಠೆಮಾಡಿಬಿಟ್ಟಿದ್ದರು.

ಹೀಗೆ ಯಾರ ಅಹಂಕಾರವು ದೇವಪಾದಲೀನವೋ, ಯಾರ ಧರ್ಮಜಿಜ್ಞಾಸೆಯು ನಿಃಸೀಮವೋ, ಯಾರ ಸಾಧನೋತ್ಸಾಹವು ಅಪಾರವೋ, ಯಾರ ಮಾನವ ಸಿದ್ಧಿಗಳು ಅಪೂರ್ವವೋ ಅಂಥ ಜೀವಕ್ಕೆ ಅವತಾರವೆಂಬ ಹೆಸರಿರಲಿ ಇರದಿರಲಿ ಅದು ನಮಗೂ ಜಗತ್ತಿಗೂ ಬೇಕಾದ ಜೀವ ಯಾಕೆಂದರೆ ದಿವ್ಯಪಥದಲ್ಲಿ ಮಾನವನು ಇಡಬೇಕಾದ ಮುಂದಡಿಯನ್ನು ಅದು ಅಚಲವಾಗಿಟ್ಟು, ಬನ್ನಿ ನೀವೆಲ್ಲರೂ ಹಿಗೆಯೇ ಹಜ್ಜೆಯನ್ನು ಇಡಬಹುದು. ಜಗನ್ಮಾತೆಯ ಇಚ್ಛೆಯದು. ನಿಮ್ಮೆಲ್ಲರ ಧರ್ಮಸಾಧನೆಯ ಪರಿಪಾಕವದು ಎಂದು ಜಗತ್ತಿಗೆ ಆ ಜೀವ ಸಾರುತ್ತಿದೆ.

---

*

## ಅರವಿಂದರು

ಅರವಿಂದರ ಪರಿಚಯ ಮಾಡಿಕೊಡುವುದು ಸುಲಭವಾದ ಕೆಲಸವಲ್ಲ ನನಗೆ ಅರವಿಂದರ ಪರಿಚಯ ಅವರ ಗ್ರಂಥಗಳ ಮೂಲಕ, ಅವರ ಮೇಲೆ ನನಗಿರುವ ಭಕ್ತಿ, ಅವರ ಗ್ರಂಥಗಳ ವಾಚನದಲ್ಲಿರುವ ಆಸಕ್ತಿ, ಇವೇ ನಾನು ಅವರ ಪರಿಚಯ ಮಾಡಿಕೊಡಲು ನನಗೆ ಇರುವ ಅಧಿಕಾರ.

ಅರವಿಂದರು ೧೯೧೦ರಲ್ಲಿ ರಾಜಕೀಯ ರಂಗವನ್ನು ತ್ಯಾಗಮಾಡಿ. ಸಾಮಾಜಿಕ ವ್ಯವಹಾರದಿಂದ ಹೊರಬಿದ್ದು ಪಾಂಡಿಚೆರಿಯನ್ನು ಸೇರಿದರು ಅಂದು ಕೈಕೊಂಡ ಅವರ ಅಜ್ಞಾತವಾಸ ಇನ್ನೂ ಕೊನೆಗಂಡಿಲ್ಲ. ಆ ಊರಿನಲ್ಲಿ ಇರುವ ಮನೆ ಬಿಟ್ಟು ಸಹಾ ಹೊರಕ್ಕೆ ಬರುವುದಿಲ್ಲ. ದರ್ಶನಕಾತುರರಾದ ಭಕ್ತರಿಗೆ ವರ್ಷಕ್ಕೆ ಮೂರು ಬಾರಿ ದರ್ಶನ ಲಾಭ. ಇದಕ್ಕೆ ಕಾರಣ ಅರವಿಂದರಿಗೆ ಜನರ ಜಾಲದಲ್ಲಿ ತೊಡಗುವುದು ಬೇಡವಾಗಿರುವುದು. ಅವರು ಪರಿಚಯಾಭಿಲಾಷಿಗಳಲ್ಲ. ಇತರರೂ ತಮ್ಮ ವಿಷಯವಾಗಿ ಹೆಚ್ಚು ಹೇಳುವುದಾಗಲಿ, ಒರೆಯುವುದಾಗಲಿ ಅವರಿಗೆ ಸೇರುವುದಿಲ್ಲ. ಇದಕ್ಕೆಂದೇ ಅರವಿಂದರ ಕೀರ್ತಿಯನ್ನು ಜಗತ್ತಿಗೆ ಸಾರುತ್ತಿದ್ದ 'ಸಂಡೆ ಟೈಮ್ಸ್' ಪತ್ರಿಕೆಗೆ ಹಾಗೆ ಮಾಡಕೂಡದೆಂದು ಎಚ್ಚರಿಸಿದರು. ಇದಕ್ಕೆ ಕಾರಣ, ಜಗತ್ತು ತಮ್ಮನ್ನು ಮರೆಯಬೇಕೆಂದಲ್ಲ. ಈ ಸಂಸಾರ ಆಶ್ರಮಕ್ಕೆ ಅಹಿತಕಾರಕ; ಈ ವ್ಯಾವಹಾರಿಕ ಕೀರ್ತಿ ಅವರಿಗೆ ಬೇಡವಾಗಿದೆ. ಅಲ್ಲದೆ ಅದು ಅಧ್ಯಾತ್ಮಿಕ ಜೀವನಕ್ಕೆ ತುಂಬಾ ವಿರೋಧಿ. ಈ ವಂದಿಮಾಗಧ ವೃತ್ತಿಗೆ ಒಪ್ಪಿ ತಲೆಯಲ್ಲಾಡುಸುವುದು ಬಾರೆಂದು ಕರೆಯುವ ಸಾವಿನ ಬಳಿ ಸಾರಿದುತೆ, ಪತನಹೇತು, ಈ ಧ್ಯೇಯ, ಭಾವ, ಆಶ್ರಮದ ಬಾಳಿನಲ್ಲೂ ಒಡಮೂಡಿ ಕಾಣಿಸುತ್ತದೆ. ಅವರ ಪ್ರಾರ್ಥನಾಮಂದಿರ, ಅವರ ಮೌನಮಂದಿರ, ಅಲ್ಲಿ ಗುರು ಶಿಷ್ಯರ ಭೇಟಿ ಇಲ್ಲ. ಮೌನದಿಂದಲೇ ಮಾತು ಕಥೆ, ಇದು ಅವರ ಸಂಬಂಧ, ಅರವಿಂದರ ಬಾಳಿನವು ಈ ವೈಚಿತ್ರ್ಯ. ಇದರಿಂದಾಗಿ ಅರಿತವರೊಬ್ಬರು ಅವರ ಪರಿಚಯವನ್ನು ಮಾಡಿಕೊಡುವುದು ಅಗತ್ಯವಾಗಿದೆ. ಅವಿಂದರರ ತತ್ವ ಅವರ ಬಾಳಿನಂತೆ ತುಂಬಾ ಗಹನ, ಅರಿಯುವುದು ಅಸಾಧ್ಯವಲ್ಲವಾದರೂ ದುಸ್ಸಾಧ್ಯ. ಅವರ ಲೇಖನಗಳು 'ಆರ್ಯ', ಎಂಬ ಪತ್ರಿಕೆಯಲ್ಲಿ ಬರುತ್ತಿದ್ದವು. ೧೯೨೧ ರಲ್ಲಿ

ಈ ಪತ್ರಿಕೆ ನಿಂತಿತು. ಅದರಲ್ಲಿ ಬರುತ್ತಿದ್ದ ಅವರ ತಾತ್ವಿಕ ಲೇಖನಗಳನ್ನು ಓದುವುದೆಂದರೆ ತಲೆನೋವು ಬರುತ್ತಿತ್ತು. ಶೈಲಿಯ ದೋಷ, ವಿಷಯದ ಗಹನತೆ, ಇವುಗಳಿಂದ ಒಂದೇ ಬಾರಿಗೆ ಮೂರೇ ಪುಟ ಓದುವುದಾದರೂ ಅಸಾಧ್ಯವಾಗುತ್ತಿತ್ತು; ಅಷ್ಟು ಕಠಿಣ, ತತ್ವದರ್ಶನ ಕಠಿಣವಾದರೂ, ಅರವಿಂದರ ವ್ಯಕ್ತಿತ್ವ ಅಯಸ್ಕಾಂತದಂತೆ ದೂರ ಹೋದವರನ್ನು ಹತ್ತಿರ ಸೆಳೆಯುತ್ತಿದೆ. ಹತ್ತಿರ ಬಂದರೆ ಇಡಿಯ ವ್ಯಕ್ತಿ ಮಸಕು ಮಸಕು. ಇದು ಅವರ ಬಾಳಿನ ಸಮಸ್ಯೆ.

ಅರವಿಂದರು ಜನಿಸಿದ್ದು ದೊಡ್ಡ ಮನೆತನದಲ್ಲಿ. ಇವರ ತಾಯಿ ರಾಜನಾರಾಯಣ ಬೋಸರ ಮನೆತನದವರು. ಇವರ ತಂದೆ ಡಾ॥ ಘೋಷ್ ಒಳ್ಳೆಯ ವೈದ್ಯರು, ಇಂಗ್ಲೆಂಡಿನಲ್ಲಿ ವೈದ್ಯಕಲಿತ ಕೈ. ಹೇರಳವಾಗಿ ಹಣಗಳಿಸಿದರೂ ಕುಡಿತದ ಚಟಕ್ಕಾಗಿ ಬೇಕಾದಷ್ಟು ಹಾಳು ಮಾಡಿದರು. ಅದಕ್ಕಿಂತ ಹೆಚ್ಚಾಗಿ ಅವರ ಉದಾರ ಜೀವ ಬಡಬಗ್ಗರಿಗೆ ದಾನ ಕೊಡುವುದರಲ್ಲಿ ಆ ಗಳಿಕೆಯನ್ನು ವಿನಿಯೋಗಿಸಿತು. ಈ ಸ್ಥಿತಿಯಲ್ಲಿ ಮಕ್ಕಳ ಯೋಗಕ್ಷೇಮ ಸರಿಯಾಗಿ ನಡೆಯಲಿಲ್ಲ. ಅರವಿಂದರು ೧೮೭೨ರಲ್ಲಿ ಹುಟ್ಟಿದರು. ಒಡಹುಟ್ಟಿದವರು ನಾಲ್ಕು ಜನ; ಇಬ್ಬರು ಅಣ್ಣಂದಿರು, ಒಬ್ಬ ತಮ್ಮ, ಒಬ್ಬಾಕೆ ತಂಗಿ. ಇವರಣ್ಣ ಪ್ರೊ॥ ಮನಮೋಹನ್ ಘೋಷ್, ಇಂಗ್ಲೀಷ್ ಭಾಷೆಯಲ್ಲಿ ಕವನಗಳನ್ನು ರಚಿಸಿದ್ದಾರೆ. ಇವರ ತಮ್ಮ ಬಾಂಬಿನ ಇತಿಹಾಸದಲ್ಲಿ ಪ್ರಸಿದ್ಧನಾದ ಬಾರೀಂದ್ರನಾಥ, ಇವರ ಇನ್ನೊಬ್ಬ ಅಣ್ಣ, ತಂಗಿ ಸರೋಜಿನಿ ಅಷ್ಟು ಹೆಸರುವಾಸಿಯಾಗಿಲ್ಲ.

ಅರವಿಂದರ ಅಕ್ಷರಾಭ್ಯಾಸ ತಾಯಿನುಡಿ ಬಂಗಾಲಿಯಲ್ಲಲ್ಲ, ಇಂಗ್ಲೀಷಿನಲ್ಲಿ. ಮನೆಮಾತಾದ ಬಂಗಾಲಿ ಕಲಿತದ್ದು ೨೦ನೆಯ ವಯಸ್ಸಿನಲ್ಲಿ. ಇವರ ವಿದ್ಯಾಭ್ಯಾಸ ನಡೆದದ್ದು ಇಂಗ್ಲಾಂಡದಲ್ಲಿ. ಇವರ ತಂದೆಗೆ, ತನ್ನ ಮಕ್ಕಳನ್ನು 'ಸಾಹೇಬ'ರನ್ನಾಗಿ ಮಾಡಬೇಕೆಂಬಾಸೆಯ ಫಲ ಇದು. ಈ ವಿಷಯದಲ್ಲವರ ತಂದೆಗೆ ಹಣವೊದಗಿಸುವುದಾಗದಿದ್ದರೂ ಅದೊಂದು ಹುಚ್ಚು ಹಟ. ಅರವಿಂದರು ತಾವೇ ತಮ್ಮ ವಿದ್ಯಾಭ್ಯಾಸಕ್ಕೆ ಹಣ ದೊರಕಿಸಿಕೊಳ್ಳಬೇಕಾಯಿತು. ಉದ್ದಕ್ಕೂ ವಿದ್ಯಾರ್ಥಿವೇತನ ದೊರಕಿಸಿಕೊಂಡು ವಿದ್ಯಾಭ್ಯಾಸ ಮಾಡಿದರು. ೧೮ನೆಯ ವಯಸ್ಸಿಗೆ ಐ. ಸಿ. ಎಸ್. (I. C. S.) ಪರೀಕ್ಷೆಯಲ್ಲಿ ಗ್ರೀಕ್ ಭಾಷೆ

ಯನ್ನು ಐಚ್ಛಿಕವಿಷಯವಾಗಿ ತೆಗೆದುಕೊಂಡು ಮೊದಲನೆಯವರಾಗಿ ಜಯ ದೊರಕಿಸಿದರು. ಮುಂದೆ ಇವರ ಮೇಲೆ ಬಾಂಬು ಖಟ್ಲೆ ನಡೆದಾಗ್ಗ ನ್ಯಾಯಾಧಿಪತಿಯಾಗಿದ್ದ ಬೀಚ್‌ಕ್ರಾಫ್ಟ್ ಎಂಬಾತ ಈ ಪರೀಕ್ಷೆಯಲ್ಲಿ ಎರಡನೆಯವನಾಗಿದ್ದ. ಆದರೂ ಅರವಿಂದರು ದೊರಕಿಸಿದ ಜಯ ಕೈಗೂಡಲಿಲ್ಲ. ಕುದುರೆ ಸವಾರಿ ಬರಲಿಲ್ಲವೆಂದು ನಪಾಸಾದರು, ಇದು ಒಂದು ರೀತಿಯಲ್ಲಿ ಒಳ್ಳೆಯದೇ ಆಯಿತು. ಪಾಸಾಗಿದ್ದರೆ ಏನಾಗುತ್ತಿದ್ದರೋ ಏನೋ? ಇಂಗ್ಲೆಂಡಿನಿಂದ ಮರಳಿದ ಬಳಿಕ ಅರವಿಂದರು ೧೮೯೩ರಲ್ಲಿ ಬಡೋಡೆಯ ಕಾಲೇಜಿನಲ್ಲಿ ಸೇರಿದರು. ನಿವೃತ್ತರಾಗುವ ವೇಳೆಗೆ ವೈಸ್‌ಛಾನ್ಸಲರ್ ಪದವಿ ಇವರದಾಗಿತ್ತು. ೧೯೦೬ರಲ್ಲಿ ಅಲ್ಲಿಂದ ಹೊರಬಿದ್ದರು. ಅಲ್ಲಿರುವಾಗ ಅರವಿಂದರು ಮರಾಟಿ, ಗುಜರಾತಿ, ತಮಿಳು, ತೆಲಗು ಮೊದಲಾದ ಭಾಷೆಗಳನ್ನು ಕಲಿತರು. ಆ ಕಾಲದಲ್ಲಿ ಅವರು 'ಇಂದು ಪ್ರಕಾಶ' ಎಂಬ ಪತ್ರಿಕೆಯಲ್ಲಿ ಬರೆದ ಜೋರದ ಲೇಖನವಾಲೆ ಆಗಿನ ಕಾಂಗ್ರೆಸ್ ಮುಖಂಡರಾದ ರಾನಡೆಗೆ ತುಂಬಾ ಮೆಚ್ಚಿಗೆಯಾಯಿತು. ಅವರು ಅರವಿಂದರನ್ನು ಕಂಡನೇಳಿ, ಅರವಿಂದರಿಗೆನಿಸಿತು; ಆಡುವುದಕ್ಕಿಂತಲೂ ಮಾಡಿತೋರಿಸುವುದು ಮೇಲೆಂದು. ಪರೋಪದೇಶ ಪಾಂಡಿತ್ಯಕ್ಕೆ ಅಂದೇ ತಿಲಾಂಜಲಿಯಾಯಿತು. ಆಗ ಅವರ ಬಗೆಗಣ್ಣು ಬಿಟ್ಟಿತು. ವಿಚಾರಮಥನ ನಡೆದು ಚಾಕರಿಗೆ ಶರಣುಹೊಡೆದು ದೇಶಸೇವೆಯ ಕಂಕಣಕಟ್ಟಿದರು.

ಅರವಿಂದರಿಗೆ ಈ ಮಧ್ಯೆ ಲಗ್ನವಾಯಿತು. ಇವರ ಪತ್ನಿ ಶ್ರೀಮಂತರ ಮನೆಯವರು. ಈಕೆ ಸಂಕುಚಿತ ಸ್ವಭಾವದ ಹೆಣ್ಣು, ತನ್ನ ಗಂಡ ಎಂದರೆ ಏನೋ ಇಂಗ್ಲೆಂಡಿನಿಂದಿಳಿದ ಸಾಹೇಬನೆಂದೇ ಭಾವನೆಯಿತ್ತು. ಬ್ರಹ್ಮಸಮಾಜದ ಸುಳಿಗೆ ಸಿಕ್ಕಿ ಹಿಂದೂ ಸಂಸ್ಕೃತಿಯನ್ನು ಅಚ್ಚವಾಗಿ ಉಳಿಸಿಕೊಂಡ ಪ್ರತಿಭಾವಂತರು ಬಹಳ ಕಡಿಮೆ. ದೇವೇಂದ್ರನಾಥರ ಉಪನಿಷತ್ಪ್ರೀತಿ ರವೀಂದ್ರರ ಪಾಲಿಗೆ ಆ ಭಾಗ್ಯಕೂಟ್ಟಿತು. ಅರವಿಂದರ ಪೂರ್ವಸಿದ್ಧಿಯೋ ಏನೋ ಬ್ರಹ್ಮಸಮಾಜದ ಸಂಸ್ಕೃತಿಯೂ ಮೈಯೊಗ್ಗಿರಲಿಲ್ಲ. ಪಾಶ್ಚಾತ್ಯ ಸಂಸ್ಕೃತಿಯ ನಕಲಾಗುವುದು ಅವರಿಗೆ ಬೇಕಿರಲಿಲ್ಲ. ಹಿಂದೂ ಸಂಸ್ಕೃತಿಯ ಚಿಲುಮೆಯನ್ನೇ ನಂಬಿದರು. ದೇಶ, ದೇಶವೆಂದು ಒದ್ದಾಡುವ ತನ್ನ ಗಂಡನನ್ನು ಕಂಡು ಅವರ ಹೆಂಡತಿಗೆ ಬೇಸರ ಬಂತು. ದಾಂಪತ್ಯ ಇಜ್ಜೋಡಿ

ಯಾಯಿತು. ತಮ್ಮ ದೇಶ ಸೇವೆಯ ಬಗ್ಗೆ ಕೀಳು ಭಾವವನ್ನು ತಾಳಿದ ಪತ್ನಿಗೆ ಅರವಿಂದರು ಒಂದು ಪತ್ರ ಬರೆದು, ಅದರಲ್ಲಿ ತಮ್ಮ ಭಾರತ ಭೂಮಿಯ ಅಭಿಮಾನವನ್ನು ಸ್ಪಷ್ಟವಾಗಿ ಸಾರಿಹೇಳಿದ್ದಾರೆ. 'ಪೃಥ್ವಿ ಜಡವಲ್ಲ, ದೇವಾಂಶ. ತಾಯಿ ಇದ್ದಷ್ಟೇ ಆತ್ಮೀಯಳು ನೆಲದಾಯಿ. ಈ ದೇಹ ಅನ್ನ, ನೀರುಗಳಿಂದ ಪೋಷಿತವಾಗಿ ವರ್ಧಿತವಾಗಿದೆ. ಈ ನೆಲದಾಯಿಯ ಸೇವೆಗಾಗಿ ಈ ದೇಹ ಸದ್ವಿನಿಯೋಗವಾಗಬೇಕು. ಇಲ್ಲದಿದ್ದರೆ ಜನ್ಮವು ವ್ಯರ್ಥ.' ಇದರಿಂದ ಪತಿ-ಪತ್ನಿಯರ ನಡುವೆ ಇದ್ದ ಅಂತರವೇನೂ ಕಡಮೆಯಾಗಲಿಲ್ಲ.

೧೯೦೫ನೆಯ ಇಸವಿ ಬಂಗಾಲದಲ್ಲಿ ಕ್ರಾಂತಿಯ ಕಾಲ. ದೇಶದಲ್ಲಿ ಸ್ವದೇಶಿ ಚಳುವಳಿಯ ಜೋರು. ಬರೋಡೆಯಲ್ಲಿದ್ದ ಚಾಕರಿಗೆ ಶರಣು ಹೊಡೆದು ಬಂದ ಅರವಿಂದರು 'ರಾಷ್ಟ್ರೀಯ ಶಿಕ್ಷಣ ಸಮಿತಿ'ಗೆ (National Council of Education) ಸೇರಿ ೧೫೦ ರೂ. ಸಂಬಳದ ಮೇಲೆ ಶಿಕ್ಷಕರಾದರು. ಅದೇ ಕಾಲದಲ್ಲಿ 'ವಂದೇಮಾತರಂ' ಪತ್ರಿಕೆ ಆರಂಭವಾಯಿತು. ಅದಕ್ಕೆ ಹೆಸರಿಗೆ ಬಿಪಿನ್ ಚಂದ್ರಪಾಲರು ಸಂಪಾದಕರಾದರೂ, ಅನಾಮಿಕ ಸಂಪಾದಕರು ಅರವಿಂದ ಘೋಷ್. ಈ ಪತ್ರಿಕೆಯಲ್ಲಿ ಕಲಕತ್ತೆಯ ಬಾಂಬಿನ ಕೇಸಿನ ವಿಚಾರವಾಗಿ ಲೇಖನಗಳು ಬಂದುದರಿಂದ ಅಧಿಕಾರಿಗಳ ವಕ್ರದೃಷ್ಟಿ ಅರವಿಂದರ ಮೇಲೆ ಬಿತ್ತು, ಕೈಸೆರೆಯಾಯಿತು. ಇವರ ಪರವಾಗಿ ವಾದಿಸಲು ಯಾರು ಬರಬೇಕು? ವಕೀಲರಿಗೆ ಕೊಡಲು ಅರವಿಂದರ ಬಳಿ ಹಣವಿರಲಿಲ್ಲ. ಇಂಗ್ಲೆಂಡಿನಲ್ಲಿದ್ದಾಗ, ಇವರ ಗೆಳೆಯರಾಗಿದ್ದ ಚಿತ್ತರಂಜನದಾಸ್ ಕೇಸು ನಡೆಸಲು ಇವರ ಪರ ವಕೀಲರಾದರು. ಬಾಂಬಿನ ಖಟ್ಲೆ ನಡಿಸಿ ಬಿಟ್ಟ ಬ್ಯಾರಿಸ್ಟರ್! ಅರವಿಂದರಿಗೆ ಬಂಧನದಿಂದ ಬಿಡುಗಡೆಯಾಯಿತು. ಇದೇ ರೀತಿ ಮತ್ತೆ ರಡು ಸಲ ಕಾರಾಗೃಹದ ನೆರಳಿನ ಸವಿ ದೊರಕಿತ್ತು.

ಈ ವೇಳೆಗೆ ಅರವಿಂದರ ಯೋಗಭ್ಯಾಸ ಆರಂಭವಾಗಿತ್ತು. ಅರವಿಂದರ ಯೋಗಾಭ್ಯಾಸಕ್ಕೆ ಉಪದೇಶ ಕೊಟ್ಟ ಗುರು ಮಹಾರಾಷ್ಟ್ರದ ಲೇಲೆಯವರು. ನಿರ್ಜನ ಸ್ಥಳವೊಂದರಲ್ಲಿ ಲೇಲೆಯವರು ಅರವಿಂದರಿಗೆ ನಿಷ್ಕಾಮ ಕರ್ಮ ಉಪದೇಶ ಮಾಡಿದರಂತೆ. ಇದರಿಂದ ಅರವಿಂದರಿಗೆ 'ಬೇರೆ ಪರಲೋಕ ರಾಜ್ಯದ ಬಾಗಿಲು ತೆರೆಯಿತು.' ಅರವಿಂದರು ಸಾಧಕರಾದರು. ಅರವಿಂದರ ಯೋಗ ಸಾಧನೆಯ ಮೊದಲ ಮೆಟ್ಟಲು 'ಕಡ್ಡಿಯಲ್ಲಾಡುವುದು ದೈವದ ಕೈವಾಡ

ದಿಂದ] ಎಂಬ ತತ್ತ್ವ. ಈ ಭಾವ, ಅನುಭವವನ್ನು ಅರವಿಂದರು ತಮ್ಮ 'ಉತ್ತರ ಪಾರಾ' ಭಾಷಣದಲ್ಲಿ ವಿವರಿಸಿದ್ದಾರೆ. ಈ ರೀತಿಯ ಜೀವನದ ಫಲವಾಗಿ 'ಕರ್ಮಯೋಗಿನ್' ಎಂಬ ಪತ್ರಿಕೆ ಹೊರಟು ಒಂದು ವರ್ಷಕಾಲ ನಡೆದು ನಿಂತುಹೋಯಿತು. ಇದಾದಮೇಲೆ 'ಧರ್ಮ' ಎಂಬ ಪತ್ರಿಕೆಯಲ್ಲಿ ಕೆಲವು ಲೇಖನಗಳು ಬೆಳಕು ಕಂಡವು. ಇವೆಲ್ಲದರ ಪರಿಣಾಮ ಯಾರ ಮೇಲೆ ಏನೇ ಆಗಲಿ, ಸಾಮಾನ್ಯ ಜನರು ಇವರನ್ನು ದೊಡ್ಡ ಸಾಧು ಎಂದು ಭಾವಿಸು ವಂತಾಯಿತು. ಜನರ ಭಾವನೆಯಲ್ಲಿ ಸಾಧು ಎಂದರೆ ಒಬ್ಬ ಮಂತ್ರವಾದಿ. ಅವನು ಮಾತಿನ ಮಂತ್ರ ದಂಡವಾಡಿಸಿದರೇ ಸಾಕು ನೆನೆಸಿದ ಕಾರ್ಯ ಸಫಲ ವಾಗುವುದು. ಹೀಗಾಗಿ ಅರವಿಂದರ ಒಗ್ಗೆ ನೂರಾರು ಕತೆಗಳು ಹುಟ್ಟಿ ಕೊಂಡವು. ಇದು ಯಾವ ಮಹಾತ್ಮನ ಬೆನ್ನನ್ನು ಬಿಡದ ಬೇತಾಳ! ಇವರಿಗೆ ಬೇಡವಾದರೂ ಜನ ಇವರ ಸುತ್ತ ಗಟ್ಟಲಾರಂಭಿಸಿದರು, ಈ ಕತೆಗಳು ಹರ ಡಲು, ಇವರ ತಮ್ಮ ಬಾಂಬಿನ ಬಹದ್ದೂರ್ ಬಾರೀಂದ್ರ ಒಬ್ಬ ಕಾರಣ. ಒಮ್ಮೆ ಹೀಗೆ ಅಹಿಂಸೆಯ ಮಾತು ಹೊರಟಾಗ ಅರವಿಂದರು ಹೇಳಿದರು 'ದೇವರಿಟ್ಟಂತಾಗುವುದು.' ಅರವಿಂದರು ಈ ಮಾತನಾಡಿದ್ದ ಭಾವ 'ಪಾಶವೀ ಶಕ್ತಿಯೆನ್ನೆದುರಿಸಲು ಪಾಶವೀ ಬಲದ ಪ್ರಯೋಗ ಬೇಡ ಒಂದದ್ದೆಲ್ಲಾ ಬರಲಿ, ಗೋವಿಂದನ ದಯೆಯಿರಲಿ' ಎಂಬರ್ಥದಲ್ಲಿ. ಜನ ಇದರರ್ಥವನ್ನು ಬೇರೆ ರೀತಿಯಲ್ಲಿ ಮಾಡಿದರು. ನಾವು ಮಾಡಿದ್ದೆಲ್ಲ ಸರಿ; ಅದಕ್ಕೆ ದೇವರ ಒಪ್ಪಿಗೆ, ಅವನ ರುಜು ಇದೆ. ಇದು ಜನತೆ ಮಾಡಿದ ಅಪಾರ್ಥ. ಬಾರೀಂದ್ರ ಕ್ರಾಂತಿಕಾರ-ಸ್ವಪ್ನಜೀವಿ. ಕ್ರಾಂತಿಯಿಂದಲೇ ಭಾರತದ ಬಂಧವಿಮೋಚನೆ ಎಂದು ನಂಬಿದಾತ. ಜನತೆಯ ಅಪಾರ್ಥವನ್ನೇ ಅತನೂ ನಂಬಿ ದೇವರ ಸಹಿ ದೊರಕಿಸಲು ಹಿಮಾಲಯಕ್ಕೆ ಪಯಣ ಬೆಳಸಿದ.

ಇದೆಲ್ಲದರಿಂದ ಅರವಿಂದರಿಗೆ ಕ್ರಾಂತಿಕಾರರೆಂಬ ಕೀರ್ತಿ ಗಂಟು ಬಿತ್ತು. ಮೊದಲೇ ಒಂದೆರಡು ಸಾರಿ ಸೆರೆಮನೆ ಕಂಡವರು. ಸರಕಾರಕ್ಕೆ ಇವರು ತಮ್ಮ ಹಾದಿಯಲ್ಲಿನ ಮುಳ್ಳು ಎಂದು ದೃಢವಾಯ್ತು. ಮತ್ತೆ ಕಾರಾಗೃಹ ಯಾತ್ರೆ ಮಾಡಿಸಲು ಯೋಚಿಸಿದರು. ಈ ಯೋಜನೆ ಕಾರ್ಯರೂಪಕ್ಕೆ ಬರುವ ದಕೆ ಮುಂಚೆ ಸೋದರಿ ನಿವೇದಿತಾಗೆ ಇದು ಗೊತ್ತಾಯಿತು. ಅರವಿಂದ ರಿಗ ಎಚ್ಚರಿಕೆ ಕೊಟ್ಟರು. ಅರವಿಂದರು ಹೇಳಿ ಕೇಳಿ ಜಗತ್ತನ್ನೆ ತ್ಯಜಿಸಿದ

ಸಾಧಕರು. ಅವರಿಗೆ ಹೆದರಿಕೆ ಎಲ್ಲಿಯದು. ಅವರಿಗೆ ಅಪ್ಪಣೆ ಮಾತ ಬಲ್ಲವನು 'ಆತ' ನೊಬ್ಬನೇ. 'ತೇನ ವಿನಾ ತೃಣಮಪಿ ನ ಚಲತಿ' ಎಂದು ನಂಬಿದವರು. ಸೋದರಿ ನಿವೇದಿತಾಗೆ ಉತ್ತರ ಕೊಟ್ಟರು. 'ಯಾರ ಆಜ್ಞೆ ಬಂದಾಗ ಹೋಗಬೇಕೋ ಅವರ ಆಜ್ಞೆ ಬಂದರೆ ಹೋಗುತ್ತೇನೆ. ಹಿಡಿದೊಯ್ಯುವವರು ಹಿಡಿದೊಯ್ಯಲಿ.' ಇಷ್ಟರಲ್ಲೇ 'ಆತನ' ಆಜ್ಞೆ ಬಂತು ಕಲ್ಕತ್ತಾ ತ್ಯಜಿಸಿ, ಫ್ರೆಂಚರಿಗೆ ಸೇರಿದ ಚಂದ್ರ ನಗರಿಗೆ ಹೋಗಿ, ಅಲ್ಲಿಂದ ಮದರಾಸು, ಮದರಾಸಿನಿಂದ ಹೊರಟು ಪಾಂಡೀಚೇರಿ ಸೇರಿದರು. ಸರಕಾರ ಹಾಸ್ಯಮಾಡಿತು. 'ಹೇಳದೆ ಕೇಳದೆ ತಪ್ಪಿಸಿ ಕೊಂಡೇಕೆ ಓಡುತ್ತೀ' ಎಂದು. ಅರವಿಂದರು ಹೇಳಿದರು: ತಪ್ಪಿಸಿಕೊಳ್ಳುವ ಕೆಲಸ ನನ್ನದು. ಹಿಡಿಯುವ ಕೆಲಸ ನಿಮ್ಮದು. ನಿಮ್ಮದು ನಿಮಗೆ, ನನ್ನದು ನನಗೆ.' ಸಾಮ್ರಾಜ್ಯ ಶಾಹೀ ಈ ಪ್ರಶ್ನೆಗೆ ಏನು ಉತ್ತರ ಹೇಳಿತೊ! ಇದು ನಡೆದದ್ದು ೧೯೧೦ರ ಸುಮಾರಿನಲ್ಲಿ. ಅಂದು ಪಾಂಡಿಚೇರಿ ಸೇರಿದ ಅರವಿಂದರು ಇಂದಿನ ವರೆಗೂ ಅಲ್ಲಿಂದ ಹೊರಟಿಲ್ಲ. ಊರು, ಮನೆ ಬಿಟ್ಟು ಬರುವುದಿರಲಿ, ಕುಳಿತ ಅಟ್ಟ ಬಿಟ್ಟು ಕೆಳಗಿಳಿದಿಲ್ಲ!

ಪಾಂಡೀಚೆರಿ ಅರವಿಂದರಿಗೆ ಪರಿಚಯವಿಲ್ಲದ ಸ್ಥಳ. ಹೊಸ ಊರು; ಹೊಸ ಜನ. ಅರವಿಂದರು ನಾಲ್ಕು ಜನರಲ್ಲಿ ಎದ್ದು ಕಾಣಿಸುವಂತಹರಲ್ಲ. ಅವರದು ತುಂಬಾ ಸರಳ ಜೀವನ. ಒಮ್ಮೆ ಯಾರೋ 'ಹೀಗೇಕೋ?' ಎಂದು ಕೇಳಿದ್ದಕ್ಕೆ ಹೇಳಿದ್ದರು, 'ನನ್ನ ತಾಯಿ ಬಡತಾಯಿ. ಅವಳ ಮಗ ನಾನು. ಇನ್ನು ಹೇಗಿರಲಿ?' ಇಂಥವರು ಹೋದ ತಕ್ಷಣ ಹೊಸ ಊರಿನಲ್ಲಿ ಹೇಗೆ ಸ್ಥಾನ ಪಡೆಯಬೇಕು? ಕೆಲವು ದಿನ ಅನಾಮಿಕರಾಗಿ ಕಾಲ ಕಳೆದರು. ಇಷ್ಟರಲ್ಲಿ ಒಂದು ಅದ್ಭುತ ನಡೆಯಿತು.

ಫ್ರಾನ್ಸ್‌ನಿಂದ ಪಾಂಡಿಚೇರಿಗೆ ಇಬ್ಬರು ಪಂಡಿತರು ಬಂದರು. ಒಬ್ಬಾತ ಪಾಲ್ ರಿಚರ್ಡ್; ಮತ್ತೊಬ್ಬಾಕೆ ಮಿರ್ರಾ ರಿಚರ್ಡ್. ಇವರಿಬ್ಬರು ಸಂಬಂಧದ ಬಗ್ಗೆ ಅನೇಕ ವಿಧವಾಗಿ ಹೇಳುತ್ತಾರೆ. ಅವರಂತೂ ಯಾವ ಹೇಳಿಕೆಯನ್ನೂ ಅಲ್ಲಗಳೆದಿಲ್ಲ; ಯಾವುದನ್ನೂ ದೃಢಪಡಿಸಿಯೂ ಇಲ್ಲ. ಹಾರಿಕೆ ಸುದ್ದಿಗಂತೂ ರೆಕ್ಕೆಗಳೇ ಇವೆ! ಮಿರ್ರಾ ರಿಚರ್ಡ್‌ಗೆ, ಫ್ರಾನ್ಸಿನಲ್ಲಿದ್ದಾಗ, ಅರವಿಂದರು ಕನಸಿನಲ್ಲಿ ಕಂಡ ದೃಷ್ಟಾಂತವಾಯಿತಂತೆ. ಎಲ್ಲೆಲ್ಲೂ

ಅವರನ್ನು ಅರಿಸಿ, ಅಲೆದು, ಅವರು ಪಾಂಡಿಚೇರಿಗೆ ಬಂದಿದ್ದರು. ಇವರಿಗೆ ಅರವಿಂದರ ಪ್ರಥಮ ಪರಿಚಯವಾದದ್ದು ಪಾಂಡಿಚೆರಿಯ ಹೋಟೆಲೊಂದರ ಮೂಲೆಯಲ್ಲಿ. ಇದು ನಡೆದದ್ದು ೧೯೧೦-೧೨ರ ಸುಮಾರಿನಲ್ಲಿರಬೇಕು. ಅಂದಿನಿಂದ ಇವರಿಬ್ಬರೂ ಅರವಿಂದರ ಶಿಷ್ಯರಾಗಿದ್ದಾರೆ. ಮಿರ್ರಾ ರಿಚರ್ಡ್ ಅರವಿಂದರ ಆಶ್ರಮದ ಮಾತೃದೇವಿ. (Mother). ಈ ಇಬ್ಬರು ಶ್ರೀಮಂತರ ಹಣ ಅರವಿಂದರ ಯೋಗಾಶ್ರಮಕ್ಕೆ ಮೀಸಲಾಗಿದೆ. ಪಾಂಡಿಚೆರಿಯಲ್ಲಿ ಅರವಿಂದರು ೧೯೧೨-೧೪ರ ಸುಮಾರಿಗೆ 'ಆರ್ಯ' ಎಂಬ ಪತ್ರಿಕೆಯನ್ನು ಹೊರಡಿಸಿದರು. ಅದೂ ಕೆಲವು ದಿನ ನಡೆದು ನಿಂತುಹೋಯಿತು. ಅರವಿಂದರು ಬ್ರಿಟಿಷ್ ರಾಜ್ಯ ಬಿಟ್ಟಿದ್ದರೂ, ೧೯೨೬ರ ವರೆಗೆ ಬ್ರಿಟಿಷ್ ರಾಜಕೀಯ ಬೆನ್ನು ಬಿಟ್ಟಿರಲಿಲ್ಲ. ಹಲವಾರು ಜನ ರಾಜಕೀಯ ಮುಖಂಡರ ಸಂಬಂಧ ವಿದ್ದೇ ಇತ್ತು. ೧೯೨೬ನೆಯ ನವೆಂಬರ್ ೨೪ನೆಯ ತಾರೀಖು ಅರವಿಂದರ ಯೋಗ ಜೀವನದ ಸಿದ್ಧಿ ದಿವಸ. ಅಂದಿನಿಂದ ಅರವಿಂದರು ೩೨ ವರ್ಷ ಗಳ ಕ್ಷೇತ್ರ ಸನ್ಯಾಸ ಕೈಗೊಂಡಿದ್ದಾರೆ. ಇವರ ದರ್ಶನ ವರ್ಷಕ್ಕೆ ಮೂರು ದಿವಸ ಬಿಟ್ಟರೆ ಮತ್ತೆ ವರ್ಷವೆಲ್ಲಾ ದರ್ಶನದ ಸುದ್ದಿಯಿಲ್ಲ. ದರ್ಶನ ವೆಂದರೆ ನಿಜವಾಗಿ ಬರಿಯ ದರ್ಶನ

ಅರವಿಂದರ ಬಳಿ ಹಲವು ಜಾತಿಯ ಶಿಷ್ಯರಿದ್ದಾರೆ. ಮೊನ್ನೆ ಮೊನ್ನೆ ತೀರಿಹೋದ ಹೈದರಾಬಾದಿನ ಸರ್ ಅಕ್ಬರ್ ಹೈದರಿಯವರು ಅರವಿಂದರ ಶಿಷ್ಯರಲ್ಲೊಬ್ಬರು. ಅರವಿಂದರ ಆಶ್ರಮ ಹಲವರ ಸ್ವತ್ತಲ್ಲ, ಆಶ್ರಮದ ಎಲ್ಲ ಅಧಿಕಾರ ಅರವಿಂದರದು, ಅದು ಚಳವಳಿಯ ಸಂಸ್ಥೆಯಲ್ಲ; ಒಂದು ಯೋಗ ಶಾಲೆ, ಯೋಗದ ಮಾರುಕಟ್ಟೆ. ಕೊಳ್ಳಬಂದವರ ಬೆಲೆಗನುಸಾರವಾಗಿ ಮಾಲು, ಎಲ್ಲ ತರಹದ ಜನರು ಅಲ್ಲಿ ಸೇರುತ್ತಾರೆ. ಅನೇಕರು ಕೇಳಿದ್ದಾರೆ; 'ಎಲ್ಲ ಸರಿ ಇದುವರೆಗೂ ಆಶ್ರಮದಲ್ಲಿ ಕುಳಿತು ಅರವಿಂದರೇನು ಸಾಧಿಸಿ ದ್ದಾರೆ? ಅವರ ತತ್ವ ಕಾರ್ಯವೇನು?' ಎಂದು. ಅರವಿಂದರು ಮಾಡಿ ರುವ ಕಾರ್ಯ ಅಗಾಧವಾದದ್ದು, ಅದ್ಭುತವಾದದ್ದು.

ಅರವಿಂದರು ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. ಅವರ ಗ್ರಂಥಗಳ ಲ್ಲೆಕಿ ಮುಖ್ಯವಾದದ್ದು 'ದಿವ್ಯಜನ್ಮ' (Divine Life) ಇದು ೧೮೦೦ ಪುಟಗಳ ಬೃಹದ್ಗ್ರಂಥ, ಬರೆಯಲಿಕ್ಕೆ ೫ ವರ್ಷಗಳ ಕಾಲ ಹಿಡಿಯಿತು. ಇನ್ನೊಂದು ಗ್ರಂಥ 'ಯೋಗಸಮನ್ವಯ' (Synthesis of Yoga),

ಇದು ದಿವ್ಯ ಜೀವನದ ಹಾದಿ, ಮತ್ತೊಂದು 'ವೇದರಹಸ್ಯ' Secret of Vedas ). ಇದರಲ್ಲಿ ಅರವಿಂದರು ವೇದಗಳು ಬ್ರಹ್ಮವಿದ್ಯೆಯ ಯೋಗ ಶಾಸ್ತ್ರವೆಂದು ಪ್ರತಿಪಾದಿಸಿದ್ದಾರೆ. ಅಲ್ಲದೆ ಗೀತೆಗೆ ಭಾಷ್ಯ ಬರೆದಿದ್ದಾರೆ. ಅರವಿಂದರಗೆ ಅನೇಕ ವಿಷಯುಗಳ ಮೇಲೆ ಹಿಡಿತವಿದೆ. ನಮ್ಮ ಮತಸ್ಥಾಪಕ ರಾದ ಆಚಾರ್ಯರು ರಚಿಸಿದಂತೆ ಅರವಿಂದರೂ 'ಗ್ರಂಥಪಂಚಕ'ಗಳನ್ನು ರಚಿಸಿದ್ದಾರೆ. 'ಯೋಗ ಪಂಚಾಂಗವನ್ನೂ ರಚಿಸಿದ್ದಾರೆ. ಹಿಂದಿನ ಗುರು ಗಳೆಲ್ಲ ಪ್ರಸ್ಥಾನತ್ರಯಕ್ಕೆ ತಮ್ಮ ತಮ್ಮ ವ್ಯಾಖ್ಯಾನ ಬರೆದು ತನ್ನ ಉಪ ದೇಶಕ್ಕೆ ಮೊದಲಿಟ್ಟರು. ಅರವಿಂದರೂ ಪ್ರಸ್ಥಾನತ್ರಯ ಭಾಷ್ಯ ಬರೆದಂತಾ ಗಿದೆ. ಪೂರ್ವಸಿದ್ಧತೆ ಮೊದಲೇ ಆಗಿದೆ ಅಷ್ಟೇ ಅಲ್ಲ, ಹೊಸಯುಗದ ಉಪನಿಷತ್ತೊಂದನ್ನು ಬರೆದಿದ್ದಾರೆ. ಇವರ 'ಮಾತೃದೇವಿ (the Mother) ಹೊಸ ಕಾಲದ ಹೊಸ ಉಪನಿಷತ್ತು. ಕೇನ, ಈಶ ಉಪನಿಷತ್ತುಗಳ ಭಾಷ್ಯ ಬರೆದಿದ್ದಾರೆ. (Psychology of Social Reconstructions) ಸಮಾಜ ಶಾಸ್ತ್ರ.

ಪಾಶ್ಚಾತ್ಯರು ಇಂದು ತಾವೇ ಕಂಡುಹಿಡಿಯಲು ಮೊದಲಿಗ ರೆಂದು ಕೊಚ್ಚಿಕೊಳ್ಳುತ್ತಿರುವ ಉತ್ಕ್ರಾಂತಿ ತತ್ವ (Evolution) ಭಾರತೀ ಯರಿಗೆ ಹೊಸದಲ್ಲ, ಹಳೆಯ ವೇದ ಉಪನಿಷತ್ತುಗಳಲ್ಲಿದೆ ಎಂದು ಅರವಿಂದರು ತೋರಿಸಿದ್ದಾರೆ. ಉತ್ಕ್ರಾಂತಿ ಅಚೇತನ, ಜೀವಕಣ, ಎಂಬತ್ತುನಾಲ್ಕು ಯೋನಿಗಳನ್ನು ದಾಟಿ ನರಜನ್ಮಕ್ಕೆ ಬಂದ ಕ್ರಿಯಾ ಪರಂಪರೆ, ಎಂದು ಅರವಿಂದ ರೆನ್ನುತ್ತಾರೆ. ಆ ಪರಂಪರೆ ಅಲ್ಲಿಗೇ ನಿಲ್ಲುವುದಿಲ್ಲ. ಮಾನವನು ದೇವನಾಗಬಲ್ಲ, ಅವನಿಗೆ ಆ ಯೋಗ್ಯತೆ ಸಂಪಾದಿಸಿ ಕೊಡಲೇ ನಾನಿಲ್ಲಿಗೆ ಬಂದಿದ್ದೇನೆ, ಹಳೆಯ ತತ್ವಗಳ ಮಥನದಿಂದ ವಿಜ್ಞಾನ ಹುಟ್ಟಿಬರುತ್ತದೆ. ವಿಜ್ಞಾನದ ಅಮೃತ ವೃಷ್ಟಿಯಾದಾಗ ಭೂಮಿಯ ಮೇಲೆ ರಾಮರಾಜ್ಯ Millenium ಸೃಷ್ಟಿಯಾಗುತ್ತದೆ.

ಬಂಗಾಲಿ ಪುಸ್ತಕವೊಂದರಲ್ಲಿ ಗಾಂಧೀಜಿಯ ಬಗ್ಗೆ ಅರವಿಂದರು ಹೇಳಿದ ಮಾತು ಹೀಗಿದೆ : 'ಇದು ಗಾಂಧಿಯುಗ, ಆತನ ಕಾಲ, ಆ ಮನುಷ್ಯ ಗುಡ್ಡಗಳು ಅಡ್ಡಬಂದರೂ, ಅವನ್ನು ಕಸಗೂಡಿಸಿದಂತೆ ಗೂಡಿಸಿಕೊಂಡು

ಮುಂದೆ ಸಾಗಬಲ್ಲ. ಅಂಥ ಶಕ್ತಿ ಅದು.' ಇದನ್ನು ದಿವ್ಯ ದೃಷ್ಟಿಯಿಂದ ಅರಿತ ಅರವಿಂದರು ಈ ಯುಗದಲ್ಲಿ ತೀರ ಮೌನ ತಾಳಿದ್ದಾರೆ. ಗಾಂಧೀ ಯುಗ ಪ್ರಾರಂಭವಾಗುವ ಹೊತ್ತಿಗೆ ಅವರ ಬರವಣಿಗೆ ಕೂಡ ನಿಂತು ಹೋಯಿತು. ಅರವಿಂದರ ಕಾಲ ಬೇಗ ಬರಲಿ; ಈ ಹೊಸ ಜಗದ್ಗುರುವಿನ ಧರ್ಮ ಎಲ್ಲೆಡೆ ಹರಡಲಿ!

---

## ಮಾಸ್ತಿ 'ಶ್ರೀನಿವಾಸ' ರು

ಸಣ್ಣ ಕತೆಗಳ 'ಶ್ರೀನಿವಾಸ' ರ ಪರಿಚಯವು ಯಾರಿಗಿಲ್ಲ? ಸದ್ಯದ ಕನ್ನಡ ಸಾಹಿತ್ಯದಲ್ಲಿ ಆಚಾರ್ಯ ಪದವಿಯುವರದು. ಸಣ್ಣಕತೆಗಳನ್ನು-ದೊಡ್ಡಕತೆಗಳನ್ನು, ಚಿಕ್ಕದೃಶ್ಯಗಳನ್ನು-ದೊಡ್ಡ ನಾಟಕಗಳನ್ನು ಅವರು ಬರೆದಿದ್ದಾರೆ; ಬಿನ್ನಹ, ಅರುಣ, ತಾವರೆ, ಚೆಲುವು ಈ ಕವನ ಸಂಗ್ರಹ ಗಳನ್ನು ಪ್ರಕಟಿಸಿದ್ದಾರೆ. ವಿಮರ್ಶೆಗಳನ್ನೂ ವಿಮರ್ಶಾತತ್ತ್ವಗಳನ್ನೂ ವಿವರಿಸಿದ್ದಾರೆ. ಕನ್ನಡ ಸಂಸ್ಕೃತಿಯ ವಿಚಾರವನ್ನು ಮಾಡಿದ್ದಾರೆ. ಸಾಹಿತ್ಯಸಮ್ಮೇಲನಕ್ಕೆ ಅಧ್ಯಕ್ಷಪದವಿಯಲ್ಲಿ ನಿಂತು ಮಾರ್ಗವನ್ನು ತೋರಿಸಿದ್ದಾರೆ. ಉಪನ್ಯಾಸಗಳಿಂದ ಸಾಹಿತ್ಯಪ್ರಚಾರವನ್ನು ಮಾಡಿ ದ್ದಾರೆ. ಹಿರಿಯರಲ್ಲಿ ಆದರವನ್ನೂ ಕಿರಿಯರಲ್ಲಿ ವಿಶ್ವಾಸವನ್ನೂ ಇಟ್ಟು, ಹಳೆಯದರ ಗುಣಗ್ರಾಹಕತೆಯನ್ನೂ, ಹೊಸದರ ಗುಣವಿಮರ್ಶೆಯನ್ನೂ ಮಾಡಿ, ತಮ್ಮ ಸಮತೂಕವನ್ನು ಬಿಟ್ಟಿಲ್ಲ. ಭಿನ್ನ ಸಾಹಿತ್ಯಗಳ ಪರಿಚಯ ವಿದ್ದರೂ ಇವರ ಸಾಹಿತ್ಯವು ಅವುಗಳಿಂದ ಉಪಜೀವನವನ್ನು ನಡೆಸಿಲ್ಲ. ಸಾಹಿತಿಗಳು ಜೀವವನ್ನು ಬಣ್ಣಿಸುತ್ತಲೆ ಅಸಾರ ಸಂಸಾರವು ಸಸಾರ ವಾಗುವುದು. ಇವರ ಕತೆಗಾರಿಕೆಯಿಂದ ಕನ್ನಡ ಜೀವನಕ್ಕೆ ಜೀವಕಳೆ ಬಂದಿದೆ. ಇವರ ವಿಮರ್ಶಾಪದ್ಧತಿಯಿಂದ ಕಾಣದ ಬೆಲೆಗಳು ತೋರಹತ್ತಿವೆ.

ಇವರ ಶೀಲದ ಶೈಲಿಯಿಂದ ಕನ್ನಡನಾಡು ಒಂದಾಗಿ ಹೊಂದಿಕೊಳ್ಳುತ್ತಲಿದೆ. ಇವರ ಆಚಾರ್ಯಪದವಿಯು ಹೆದರಿ ಕೊಟ್ಟದ್ದಲ್ಲ; ಗೌರವಾರ್ಥವಾಗಿ ಸಲ್ಲಿಸಿದ್ದಲ್ಲ; ಒಂದು ಕೂಟದವರ ಮಾಟವಲ್ಲ; ಕೋಮುವಾರು ಪ್ರಾಂತವಾರು ಪಾಲುಗಾರಿಕೆಯಲ್ಲಿ ಬಂದದ್ದಲ್ಲ. ಆಚಾರ್ಯರೆಂಬ ಗೌರವದಲ್ಲಿ ಇವರು ತಮ್ಮ ಆಶೀರ್ವಾದದ ಹಸ್ತದಿಂದ ಬೆಳೆಯುವವರನ್ನು ಕಗ್ಗಿಸಿಲ್ಲ, ಅಭಯಹಸ್ತದಿಂದ ಹೆದರಿಸಿಲ್ಲ, ವರದ ಹಸ್ತದಿಂದ ಬಾಗಿಸಿಲ್ಲ. ಹೊಟ್ಟೆಗಿಲ್ಲದವರು ಹೋರಾಡುವ ಕಣವಾಗಲಿ, ಬುದ್ಧಿಯಿಲ್ಲದವರು ಸುತ್ತಾಡುವ ಬಯಲಾಗಲಿ, ಕೆಲಸವಿಲ್ಲದವರು ಕೂಗಾಡುವ ಕೂಟವಾಗಲಿ, ಈ ಸಾಹಿತ್ಯ ಕ್ಷೇತ್ರವಲ್ಲವೆಂಬುದು ಕೆಲವು ಪದವೀಧರ ಮಹಾಶಯರುಗಳಿಗೆ ಇವರಂಥವರ ಉದಾಹರಣೆಗಳಿಂದ ಸ್ವಲ್ಪ ಹೊಳೆದಂತಾಗಿದೆ. ಇಂಥ ಜೀವಕ್ಕೂ ಜೀವನಕ್ಕೂ 'ಆಚಾರ್ಯ' ಎನ್ನದಿದ್ದರೆ 'ಆಚಾರ್ಯ' ಶಬ್ದದ ಅರ್ಥವನ್ನು ವ್ಯವಹಾರಕ್ಕೆ ಸರಿಯಾಗಿ ಬದಲಾಯಿಸಬೇಕಾಗಬಹುದು.

ಆದರೆ ಇವರ ಮೂರ್ತಿಯು ಇವರ ಗೌರವಕ್ಕೆ ವಿಸದೃಶ್ಯವಾಗಿ ಲಘುವಾಗಿದೆ. ಇವರ ಮಾಮೂಲಿಯ ಮಾತುಗಾರಿಕೆಯು, ಕತೆಗಾರನ ಸರಸತೆಯನ್ನು ನಗೆಯಾಡುವಂತೆ, ತಾತ್ತ್ವಿಕನ ನೀರಸ–ವಿರಸಗಳ ಮಾರ್ಗವಾಗಿ ರಸವರ್ಜ್ಯ ಸತ್ಯಲೋಕದ ಶುಭ್ರತೆಯನ್ನು ಸೇರುವದು. ಇವರ ಪತ್ರವ್ಯವಹಾರದಲ್ಲಿ ಸಾಹಿತಿಯ ಕುರುಹನ್ನೂ ಕಾಣುವದು ಬಿಗಿ. ಈ ರಸಿಕತೆಯ ಬಡತನಕ್ಕೆ ಕಾರಣವೇನೊ! ಪರಾಧೀನ ಬಾಲ್ಯಸಂಸ್ಕಾರವೋ? ಮಿತವ್ಯಯದ ಶೈಲಿಯೋ? ಕಾಲಭಕ್ಷಕವಾದ ಹೊಟ್ಟೆಯ ಹೋರೆಯ ಕೊರತೆಯೋ? ಏನು ಸತ್ಯಸೌಂದರ್ಯಗಳ ಏರಾಟದಲ್ಲಿ ಬಣ್ಣಕ್ಕಿಂತಲೂ ಕಣ್ಣೇ ಮೇಲು ಎಂಬ ಅನುಭವದ ಆಂತರಿಕ ನಿಗ್ರಹವೊ? ಇವರು ಸೌಂದರ್ಯಕ್ಕೆ ಕಡಿಮೆ ಬೆಲೆ ಕೊಡುತ್ತಿರಬಹುದೇ? ಇವರ ಪದ್ಯಗಳಲ್ಲಿ ಗದ್ಯಕ್ಕೂ ಆಭಾಸವೆನಿಸುವ ಸಾಲುಗಳು ತಲೆಯೆತ್ತುವದಕ್ಕೆ ಇದೇ ಕಾರಣವಿರಬಹುದೇ? ಹಾಗಿರಲಾರದು. ಅದ್ವೈತದ ಜನ್ಮಭೂಮಿಯಾದ ಶೃಂಗೇರಿಯಲ್ಲಿ ಋಷ್ಯಶೃಂಗನನ್ನು ಜನಪದ ಕಥೆಯ ಆಧಾರದಿಂದ ನಿಲ್ಲಿಸಿ–ಜಗತ್ತಿನ ಸೌಂದರ್ಯವು ಮಾಯೆಯಿರಲಾರದು–ಎಂದು ಆಡಿಸಿದ; ಸಂಸಾರದಲ್ಲಿಯೇ ಇದ್ದು ತತ್ತ್ವಚಿಂತನೆ ಮಾಡಿದರೆ ಕೊರತೆಯೇನು

ಎಂದು ಸಾವಿತ್ರಿಯಿಂದ ಯಮನಿಗೆ ಪ್ರಶ್ನೆ ಮಾಡಿಸಿದ; ಹೆಣ್ಣು ಸೂಜಿಗಲ್ಲು ಗಂಡು ಸೂಜಿ–ಎಂದು ಶ್ರೀಶಾರದಾಂಬೆಯಿಂದಲೆ ನುಡಿಯಿಸಿದ 'ಚೆಲುವಿ'ನ ಕವಿಗಳು ರೂಪವಿಲಾಸವು ಮೋಗರೆಯ ಸಿಂಗಾರವೆಂದು ತಿಳಿದಿರಲು ಸಾಧ್ಯವೇ? ಹಾಗೆ ತಿಳಿದಿರದಿದ್ದರೂ ಸತ್ಯವನ್ನು ಸೌಂದರ್ಯ ಸಾರವೆನ್ನುವದಕ್ಕಿಂತ ಸೌಂದರ್ಯವನ್ನೇ ಸತ್ಯದ ಆವಿಷ್ಕಾರವೆಂದು ತಿಳಿಯುವದು ಮೇಲೆಂದು ಇವರು ಬಗೆದಂತೆ ತೋರುವದು. ಅರಿವಿಗೂ ಇರುವು ಮೇಲು ಇವರಿಗೆ. 'ಒಂದು ಹಳೆಯ ಕಥೆ'ಗೂ 'ಇನ್ನೊಂದು ಹಳೆಯ ಕಥೆ'ಗೂ ಇರುವ ಅಂತರವೇ ಅದು. ಇವರ ಕತೆಗಾರಿಕೆಯ ಅಂತಃಸಾರವು ಜೀವರುಗಳ ಜೀವನದ ಸತ್ಯವನ್ನು ಚುಕ್ಕೆಯಂತೆ ಮಿನುಗಿಸುವದರಲ್ಲಿದೆ. ಜೀವನದ ಸ್ಥಾಯಿಯನ್ನು ಇವರು ಗುರುತಿಸಿದ್ದಾರೆ. ಅವರ ನಕ್ಕು ನಗಿಸುವ ನಗೆ, ಅವರ ಶೃಂಗಾರದ ಬಗೆ–ಇವು ಸಂಚಾರಿಗಳು. ಸಂಚಾರಿಯು ದೃಷ್ಟಿಯನ್ನೆಳೆಯುವಂತೆ ಸ್ಥಾಯಿಯು ಎಳೆಯುವದಿಲ್ಲ. ತಿರಗುವ ನಕ್ಷತ್ರಮಂಡಲವನ್ನು ಬಿಟ್ಟು ಧ್ರುವನನ್ನು ನೋಡುವವರಾರು? ಇವರ 'ರಂಗಪ್ಪ' 'ಸುಬ್ಬಣ್ಣ' 'ಇಂದಿರೆ' ಬೀದಿಯೊಳಗಿನ ನಾರಿ' 'ಕೃಷ್ಣಸ್ವಾಮಿ' ಮೊದಲಾದ ರಸಿಕರನ್ನು ತರುಣರು ಮರೆಯುವದು ಹೇಗೆ? 'ಆನಂದ'ರ ಕತೆಗಾರಿಕೆಯು ಈ ಸಿಂಗಾರದ ಬಂಗಾರದ ತಂತಿಯಿಂದಲೆ ತನ್ನ ಭೂಷಣಗಳನ್ನು ಇನ್ನೂ ಹೆಣೆದುಕೊಳ್ಳುತ್ತಲಿದೆ. 'ಶ್ರೀನಿವಾಸ'ರು ಕತೆಯ ಸ್ವಾರಸ್ಯವನ್ನು ಅಡ್ಡಕತೆಗಳಿಂದ ಹಿಗ್ಗಿಸುವದುಂಟು. ಆದರೆ ಅಡ್ಡಕತೆಯು ಉದ್ದ ಕತೆಯನ್ನು ತಿಂದು ಬಿಡಬಾರದು. ಶ್ರೀ. ಗೋರೂರ ರಾಮಸ್ವಾಮಿಯವರು ತಮ್ಮ ಹಳ್ಳಿಯ ರಸಿಕರ ಚಿತ್ರಗಳಲ್ಲಿ ಈ ತೊಡಕಿನಲ್ಲಿ ತೊಳಲಾಡುವದೂ ತೂಗಾಡುವದೂ ಉಂಟು. 'ಹಾವಿನ ಅಯ್ಯ'ನು 'ಮಲ್ಲಿಗೆ ಹಳ್ಳಿಯ ಬಯಲಾಟ'ದ ಶ್ರೀಕಂಠಾಚಾರ್ರು 'ನಮ್ಮ ಮೇಸ್ಟರು' ನಿಂತ ನೆಲೆಗೆ ಬರುವರೇ? ಶ್ರೀ. ಗೊರೂರು ರಾಮಸ್ವಾಮಿಯವರು ಸಹಜಹಾಸ್ಯದ ಸುಳಿಯನ್ನು ಕಂಡು ಹಿಡಿದಿದ್ದಾರೆ. ಆದರೆ ಆ ಹಾಸ್ಯದ ಬೆಳಕಿನಲ್ಲಿ ಮೂರ್ತಿಯು ಮುಕ್ಕಾಗಬಾರದು. 'ಆನಂದಕಂದ'ರ ಕತೆಗಳಲ್ಲಿ ಸ್ವಭಾವದ ಬಳ್ಳಿಯು ಹಬ್ಬಿಕೊಳ್ಳುವದು; ಆದರೆ ಸ್ವರೂಪದ ಹೂವನ್ನು ಅರಳಿಸುವದರಲ್ಲಿ ಕತೆಗಾರನ

ಸಾರ್ಥಕತೆಯಿದೆ. 'ಶ್ರೀನಿವಾಸ'ರು ವಿವಿಧ ಜೀವರುಗಳ ಸ್ವರೂಪವನ್ನು ಮೂಡಿಸಿದ್ದಾರೆ. 'ಆಯೇಷಾ' 'ಕಾಮನ ಹಬ್ಬ'ದ ಮುತ್ತೈದೆ ಲಲಿತಮ್ಮ' 'ಉಷಾ' ಒಂದೊಂದು ಜೀವ, ಒಂದೊಂದು ರೂಪ. ಇವರ ಪುರುಷ ಸೃಷ್ಟಿಗಿಂತ ಸ್ತ್ರೀಸೃಷ್ಟಿಯು ಮೇಲು—ಅಥವಾ ಇವರ ಸೃಷ್ಟಿಯೆ ಅದು. ಗಾಳಿಯಲ್ಲಿ ನೂಲು ತೆಗೆಯುವ 'ಕೃಷ್ಣಕುಮಾರ' ಹಾಗು 'ಪಿ. ಟಿ. ನರಸಿಂಹಾಚಾರ್ಯ'ರ ಶೈಲಿಯು ಬೇರೆ ಜಾತಿಯದು. ಅವರು ಸ್ವರೂಪಾವಿಷ್ಕರಣದಲ್ಲಿ 'ಕಣಭಕ್ಷಕ'ರು; ವಾಯುವಿಹಾರಗಳು. 'ಅ. ನ. ಕೃ' ಅವರೂ 'ಪ್ರಬುದ್ಧ ಕರ್ನಾಟಕ'ದೊಳಗಿನ ಕತೆಗಾರರೂ ತಮ್ಮ ತಮ್ಮ ಹಾದಿಗಳನ್ನು ಹುಡುಕಿಯೋ ಹುಡುಕುತ್ತಲೋ ಇದ್ದರೂ, 'ಶ್ರೀನಿವಾಸ'ರನ್ನು ಕತೆಗಾರರಿಗೆ 'ಆದ್ಯ'ರೆಂದು ತಿಳಿಯುತ್ತಿರುವಲ್ಲಿ ಸಂದೇಹವಿಲ್ಲ. ಹೀಗಾಗಿ ಕತೆಗಾರಿಕೆಯಲ್ಲಿ 'ಶ್ರೀನಿವಾಸ'ರ ಕೈಹಿಡಿಯುವವರಾಗಲಿ ಕೈಹಿಡಿಯದವರಾಗಲಿ ಕಡಿಮೆ. ಇವರ ಆಚಾರ್ಯತ್ವದ ಬೀಜವೇ ಇಲ್ಲಿದೆ. ಇವರ ಮೇಲ್ಮೆಯು ಕತೆಗಳ ಮೊತ್ತದಲ್ಲಲ್ಲ, ಕತೆಗಳ ಸತ್ತ್ವದಲ್ಲಿ ವಿಶ್ವಸಾಹಿತ್ಯದ ಯಾವ ಸಣ್ಣ ಕತೆಗೂ ಅವು ಎದೆಗೊಟ್ಟು ಹೆಗಲು ಹಚ್ಚಿ ನಿಲ್ಲಬಲ್ಲವು. ಇವರ ಕತೆಗಾರಿಕೆಯ ಒಲವು ಹೆಚ್ಚಿನದು. ಅದು ಕವನಗಳನ್ನೂ ತನ್ನ ಕಾಲಕ್ಕೆಳೆದಿದೆ. 'ಮದಲಿಂಗನ ಕಣಿವೆ'ಯೂ 'ಮಲ್ಲಮ್ಮ' 'ಮಾಂಬಿ ಮೊದಲಾದುವೂ ಅದಕ್ಕೆ ಉದಾಹರಣೆಗಳು.

ಒಂದು ಮಾತಿನಲ್ಲಿ ಇವರ ಎದೆಗಾರಿಕೆಯು ಎದ್ದು ತೋರುವದು. ಹೆಣ್ಣು ಎಂದರೆ ಕಣ್ಣುಬಿಡುವ ರಸಿಕತೆಗೆ ಇವರು ಒಳ್ಳೇ ಅಂಜನವನ್ನು ಹಾಕಿರುವರು. ಯಾವ ಮಾತು-ಸಂದರ್ಭಗಳಲ್ಲಿ ರೂಢಬುದ್ಧಿಗೆ ಅಶ್ಲೀಲತೆಯ ಧ್ವನಿಯು ಹುಟ್ಟಬಹುದೋ ಅಂಥ ಮಾತು-ಸಂದರ್ಭಗಳನ್ನು ಸಲೀಲವಾಗಿ ಸಾತ್ವಿಕಸುಖದ ಒಂದು ರಾಗದಿಂದ ರಂಜಿತವಾಗುವಂತೆ ಮಾಡುವ ಬುದ್ಧಿಯ ಸ್ಫೂರ್ತಿಯೂ ಮಾತಿನ ಜಾಣ್ಮೆಯೂ ಅವರದು. ಬರೆವಣಿಗೆಯಲ್ಲಷ್ಟೇ ಅಲ್ಲ, ಇವರ ಇರುವಳಿಕೆಯಲ್ಲಿಯೂ ಅದು ಮುದ್ರಿತವಾಗಿದೆ. ಅದು ಇವರಿಗೆ ಸ್ವಭಾವಸಿದ್ಧವೋ ಅಭ್ಯಾಸಸಿದ್ಧಿಯೋ ಹೇಳುವದು ಬಿಗಿ. 'ಶಿವಾಜಿ ಯಲ್ಲಿ ಅಶ್ಲೀಲತೆಯನ್ನು ಕಂಡವರಿಗೆ, ಈ ಸೂಕ್ಷ್ಮವು ಹೊಳೆದಂತೆ ಕಾಣುವದಿಲ್ಲ. ರಸವನ್ನೂ ಆಭಾಸವನ್ನೂ ವಿಂಗಡಿಸಿ

ತಿಳಿದುಕೊಳ್ಳುವದು ಆಭಾಸದ ಜೀವನದಲ್ಲಿ ಸುಲಭವಲ್ಲ. 'ಬೀದಿಯಲ್ಲಿ ಹೋಗುವ ನಾರಿ' ಯನ್ನಾಗಲಿ, ಒಂದು 'ಹಳೆ ಕಥೆ'ಯ ನ್ನಾಗಲಿ ಬರೆಯುವ ಸಾಹಸವು ಸಾಮಾನ್ಯವಲ್ಲ. ಅದಕ್ಕೆ ಹೊಸ ದೃಷ್ಟಿ ಬೇಕು 'ಶ್ರೀನಿವಾಸ'ರು ಈ ದೃಷ್ಟಿಯುಳ್ಳವರು; ನಿಜವಾಗಿ ಕವಿಗಳು. ಇವರ ಶಬ್ದಕ್ಕೆ ಆ ದೃಷ್ಟಿಯನ್ನು ಉಂಟುಮಾಡುವ ಸಾಮರ್ಥ್ಯವು ಒಟ್ಟಿನಲ್ಲಿದೆ. ಇವರ ಹಾಸ್ಯವು ಆ ದೃಷ್ಟಿಯ ಕಿರಣಾವಲಿಯು. ಕ್ಷ–ಕಿರಣಗಳಂತೆ ಅದು ಒಳಗಿನ ಹುರಳನ್ನು ಹೊರಗೆಡಹುವದು. ಇವರ ಹಾಸ್ಯವು ಗೇಲಿಯಲ್ಲ, ನಕಲಿಯಲ್ಲ, ತಮಾಷೆಯಲ್ಲ. ಪದಾರ್ಥದ ರುಚಿಯಿದ್ದಂತೆ ವ್ಯಂಗ್ಯವು; ಬಾಡಿಸಿಕೊಳ್ಳುವ ವ್ಯಂಜನಪದಾರ್ಥದಂತೆ ಹೊರಗಿನ ಬಮುಕಲ್ಲ. ಹೀಗೆ ಸಿದ್ಧಸಾಹಿತಿಗಳಾದ ಇವರಿಂದ ಆದ ಕೆಲಸವು ದೊಡ್ಡದಿದ್ದರೂ ಆಗಬೇಕಾದ ಕೆಲಸವು ಅದಕ್ಕೂ ದೊಡ್ಡದಿದೆ. ಮಹಾಪುರುಷರ ಮಹಾಜೀವನದ ಅಂತಃಸತ್ತ್ವವನ್ನು ಸುಲಿದುಕೊಡಲು ಮಹಾಪ್ರಬಂಧಗಳನ್ನೂ, ಮಹಾ ಕಥೆಗಳನ್ನೂ ಬರೆಯಲು ಇಂಥವರು ಸಮರ್ಥರು. ಇಂಥವರ ಸಾಮರ್ಥ್ಯ ದಿಂದಲೇ ಕನ್ನಡವು ಪ್ರಭಾವಶಾಲಿಯಾಗಿದೆ; ಆಗಬೇಕು. ಇಂಥವರ ಹೆಸರನ್ನೂ ಅರಿಯದ ಮುಕ್ತ ಪದವೀಧರರು ಕನ್ನಡನಾಡಿನಲ್ಲಿ ಇರುವದು ಯಾವ ಲಕ್ಷಣವೊ ತಿಳಿಯದು. ತಿಳಿದವರಲ್ಲಿಯೂ ಮಾಸ್ತಿಯೆಂದು ಬಲ್ಲವರು 'ಶ್ರೀನಿವಾಸ' ರೆಂಬದನ್ನು ಕೇಳಿರಲಿಕ್ಕಿಲ್ಲ. 'ಶ್ರೀನಿವಾಸ' ಎಂದು ಓದಿದವರು ಮಾಸ್ತಿ ಎಂಬುದನ್ನು ತಿಳಿದಿರಲಿಕ್ಕಿಲ್ಲ. ಅಂತೆಯೇ– ಬೆಂಗಳೂರು ಬೇಡ, ಮಯಿಸೂರೂ ಬೇಡ, ಮಯಳೂರು ಎಂದಂತೆ ನಾನು ಪ್ರಾರಂಭದಲ್ಲಿ ಮಾಸ್ತಿ ಶ್ರೀನಿವಾಸರು ಎಂದಿದ್ದೇನೆ.

ತಾವು ದೊಡ್ಡ ಸಂಬಳದ ದೊಡ್ಡ ಅಧಿಕಾರಿಗಳ ವರ್ಗಕ್ಕೆ ಸೇರದೆ ಶಿಕ್ಷಕವರ್ಗಕ್ಕೆ ಸೇರಿದ್ದರೆ, ತಮ್ಮ ಸಾಹಿತ್ಯಸೇವೆಗೆ ಹೆಚ್ಚು ಹಿತವಾಗ ಬಹುದಾಗಿತ್ತೋ ಎಂದು ಇವರು ಒಮ್ಮೊಮ್ಮೆ ಯೋಚಿಸುವದುಂಟು. ಆದರೆ ಶಿಕ್ಷಕವರ್ಗಕ್ಕೆ ಸೇರಿದವರು ಎಷ್ಟು ಜನರು ತಪ್ಪದೆ ಹೆಚ್ಚಿನ ಸಾಹಿತ್ಯ ಸೇವೆ ಮಾಡುತ್ತಲಿದ್ದಾರೆ? ಸಾಹಿತ್ಯಸೇವಾಸಂಕಲ್ಪವೇ ಇದ್ದರೆ ಎಂಥ ಅಧಿಕಾರವೂ ಅದಕ್ಕೆ ತಡೆಯುಂಟು ಮಾಡಲಾರದೆಂಬುದನ್ನು ಕೆಲವರ ಚರಿತ್ರವು ವ್ಯಕ್ತಪಡಿಸುವದಿಲ್ಲವೇ? ಇಷ್ಟೇ ಅಲ್ಲ. ಮನೋ

'ರಥಕ್ಕೆ ತಡೆಯಿಲ್ಲವೆಂಬುದು ಸುಭಾಷಿತವಾದರೂ, ದರಿದ್ರರ ಮನೋರಥಗಳಿಗೆ ಗತಿಯೂ ದೊರೆಯದೆಂಬುದು ಸತ್ಯವಾಗಿದೆ. ರನ್ನಕವಿಯು,- ದುಡ್ಡುಳ್ಳವರು ದಾನಿಗಳಾಗುವದಾಗಲಿ, ಮಾತರಿರುವರು ಮತ್ಸರವಿಲ್ಲದವರಾಗಲಿ ಆಗುವದು ಸುಲಭವಲ್ಲ. ಆದಕಾರಣ ದಾನಿಗಳೆ ದುಡ್ಡುಳ್ಳವರಾಗಲಿ, ಮತ್ಸರವಿಲ್ಲದವರೆ ಮಾತರಿವರಾಗಲಿ, ಎಂಬಾಸೆಯನ್ನು ಪ್ರಕಟಿಸಿದಂತೆ; ಗುಣವುಳ್ಳವರು ಅಧಿಕಾರಿಗಳಾಗುವದಾಗಲಿ, ಸಾಹಿತಿಗಳು ಕೃತಿಗಳನ್ನು ಪ್ರಕಟಿಸುವಷ್ಟು ಸಿರಿವಂತರಿರುವದಾಗಲಿ, ಈಗಿನ ಕಾಲದಲ್ಲಿ ಸುಲಭವಲ್ಲ; ಆದಕಾರಣ ಅಧಿಕಾರಿಗಳು ಗುಣವುಳ್ಳವರಾಗಲಿ, ಕೃತಿಗಳನ್ನು ಪ್ರಕಟಿಸಬಲ್ಲ ಸಿರಿವಂತರೆ ಸಾಹಿತಿಗಳಾಗಲಿ, ಏನೇ ಆಗಿ ಕನ್ನಡಕ್ಕೆ ಕಳೆಯೇರಲಿ ಎಂದರೆ ತಪ್ಪೇನು? ಗುಣಿಗಳಾದ ಸಾಹಿತಿಗಳೂ ದಾಸಿಗಳಾದ ಅಧಿಕಾರಿಗಳೂ ಆಗುತ್ತಿರುವದು ಕನ್ನಡದ ಏಳ್ಗೆಯ ಚಿನ್ಹ. ಆದರೆ ಧನದಲ್ಲಿಯೂ ಅಧಿಕಾರದಲ್ಲಿಯೂ ಗುಣಗಳನ್ನೂ ಸಾಹಿತ್ಯರಸಿಕತೆಯನ್ನೂ ನುಂಗಿಬಿಡುವ ವೈಗುಣವಿದೆ. ಹೀಗಿದ್ದರೂ ಸತ್ತ್ವಶಾಲಿಗಳ ಸತ್ತ್ವವು ಉಪಕರಣಗಳ ಅನುಕೂಲತೆಯಲ್ಲಿಲ್ಲ. ಎಂಥ ಉಪಕರಣಗಳನ್ನೂ ಉಪಕಾರಕಗಳಾಗಿ ಮಾರ್ಪಡಿಸಬಲ್ಲ ಸಾಮರ್ಥ್ಯದಲ್ಲಿದೆ-ಎಂಬುದನ್ನು ಮರೆಯಲಾಗದು. ಸಾಹಿತ್ಯಾಚಾರ್ಯರು ಅಧಿಕಾರಿಗಳಾದರೆ ಸಾಹಿತ್ಯದ ಅಧಿಕಾರವೇ ಹಬ್ಬಿದಂತೆ. ಜೀವನ ಸಾಹಿತ್ಯಗಳು ಮತ್ತೆ ಪರಸ್ಪರ ಪೋಷಕಗಳಾದಂತೆ.

---

## ಹರಡೇಕರ ಮಂಜಪ್ಪನವರು

ಅಂಕಿತನಾಮಗಳು ಅನ್ವರ್ಥಕನಾಮಗಳಾಗುವ ಸಂಭವ ಬಹಳ. ಇಟ್ಟ ಹೆಸರುಗಳು ಹೆಸರಿಟ್ಟಂತೆ ಕಾಣುವವು. ನಮ್ಮ ನಮ್ಮ ಹೆಸರುಗಳು ಮಂತ್ರಗಳಂತೆ ನಮ್ಮನ್ನು ತಮ್ಮಂತೆ ಮಾಡಿಕೊಳ್ಳುವವು. 'ಹೆಸರು ಹಾಲಯ್ಯ ಮೊಸರಿಗೆ ನೀರಿಲ್ಲ' ಎಂಬ ಅನುಭವಬಂದರೂ, ಹೆಸರೂ 'ಮಧುರ'

ಕೃತಿಯೂ ಮಧುರ ಎಂದು ಮಧುರ ಕವಿಯೇ ಹೇಳಿಕೊಳ್ಳುವಂತೆ ಆಗುವದೂ ಉಂಟು. ಒಮ್ಮೆ ಒಬ್ಬರು ನಗೆಯಲ್ಲಿ:—ಕೃಷ್ಣನೆಂಬ ಹೆಸರು ಕಾರಸ್ಥಾನಕ್ಕೂ ಮಧ್ವನೆಂಬ ಹೆಸರು ಪರಪಕ್ಷ ಖಂಡನಕ್ಕೂ ವೆಂಕಟೇಶನೆಂಬ ಹೆಸರು ಬರಿಗೈತನಕ್ಕೂ ಪ್ರವರ್ತಿಸುವದುಂಟು ಎಂದು ಸಿದ್ಧಾಂತಿಸಿ ಒಳ್ಳೇ ಐತಿಹಾಸಿಕರಂತೆ 'ಬೇಕಾದರೆ ಉದಾಹರಣೆಗಳನ್ನು ಕೊಡುವೆ' ಎಂದರು, ಆದರೆ ಇದು ಅಭಿಪ್ರಾಯ ದುರಭಿಮಾನ. ಅದನ್ನು ಬಿಟ್ಟರೂ ತಮ್ಮವರು ತೊಟ್ಟಿಲಲ್ಲಿಟ್ಟ ಹೆಸರು ಜನರು ಜಗದಲ್ಲಿಟ್ಟ ಹೆಸರಿನಂತಾಗುವ ಘಟನೆಯು ಬೆರಗುಗೊಳಿಸುವಂತಹದಾಗಿದೆ.

ಶ್ರೀಮಾನ್ ಮುಂಜಪ್ಪನವರನ್ನು ನೋಡಿ ನೋಡಿದಾಗೆಲ್ಲ ಈ ವಿಚಾರವೇ ನನಗೆ ಹೊಳೆಯುವದು. ಅವರ ಉಡುಗೆಯು ಬಿಳಿಖಾದಿ! ಅವರ ಮೈ ಬಿಳಿ ಛಾಯೆ! ಅವರ ಹಣೆಯು ಬಿಳಿ ವಿಭೂತಿ! ಎಲ್ಲವೂ ಬಿಳಿದು, ಸ್ವಚ್ಛ, ಶುಭ್ರ. ನಿರ್ದುಷ್ಟವಿಚಾರಗಳ ಮೂಲಕ ಅವರ ಮಾತೂ ಬಿಳಿ. ನೀತಿ ನಿಷ್ಠೆಯ ಮೂಲಕ ಅವರ ಕೃತಿಗಳೂ ಬಿಳಿ. ಬಿಳಿ ಮಂಜಿ ಮೈಗೊಂಡು ಬಂದಿತೇನೋ ಎನ್ನುವಂತೆ ಅವರನ್ನು ಕಂಡಾಗಲೆಲ್ಲ ಎನಿಸುವದು, ಅವರ ನೈತಿಕ ಮತ್ತು ನೈಷ್ಠಿಕ ನಿಷ್ಠುರತೆಯ ಮೂಲಕ ಅವರ ಮಾತಿನ ಮಂಜು ಒಮ್ಮೊಮ್ಮೆ ತಣ್ಣಗೆ ಕುಳ್ಳಿರಿಸುವಂತೆ ಮಾಡಿದರೂ ಚಳಿಯು ಮೈಚಳಿ ಬಿಡಿಸಿ ಉದ್ಯೋಗ ಪ್ರಿಯತೆಯನ್ನುಂಟು ಮಾಡುವಂತೆ ಅವರ ಮಾತಿನಲ್ಲಿ ಆ ಶಕ್ತಿಯೂ ಉಂಟು. ನನ್ನ ಗೆಳೆಯರಲ್ಲಿಬ್ಬರಾದ ಶ್ರೀ. ಕೇಸರಿ ಎಲ್.ಎಲ್ ಬಿ. ಧಾರವಾಡ, ಮತ್ತು ಶ್ರೀ. ಹಿರೇಮಠ ಎಲ್. ಎಲ್. ಬಿ. ಹಾವೇರಿ ಇವರಿಬ್ಬರು ಶ್ರೀ. ಮುಂಜಪ್ಪನವರ ಸಮಾಗಮದಿಂದ ಪ್ರವರ್ತಕ ಬುದ್ಧಿಯುವರಾಗಿರುವದನ್ನೂ ಬಲ್ಲೆ; ಅವರ ಸಂಗತಿಯಲ್ಲಿ ತಣ್ಣಗಾದವರನ್ನೂ ಬಲ್ಲೆ. ಅದು ಏನೇ ಇರಲಿ—ಶ್ರೀ. ಮುಂಜಪ್ಪವವರು ಬಿಳಿಮುಂಜಿನಂತಿರುವರು. ಅವರಲ್ಲಿ ಬಿಳಿದಲ್ಲದುದು ಎಂದರೆ ಅವರ ಕಣ್ಣು ಮತ್ತು ಅವರ ಫೌಂಟಿನ್ ಪೆನ್ನು (Fountain Pen).

ಆದರೆ ಇವೆರಡು ಕೂಡ ಅವರ ನಡೆಸಿರುವ ಶುದ್ಧಿಕರಣದ ಮುಖ್ಯ ಸಾಧನಗಳು. ಅಜ್ಞಾನದ ಕತ್ತಲೆಯನ್ನು ಹೊಡೆದೋಡಿಸಿ ಬೆಳಕನ್ನು ಬೀರುವದು—ಅಶುದ್ಧಾಚರಣೆಯನ್ನು ಕಿತ್ತುಹಾಕಿ ಶುದ್ಧಾಚರಣೆಯನ್ನು

ನೆಲೆಗೊಳಿಸುವದು—ಇವೇ ಅವರೆಡರ ಕಾರ್ಯ. ಅವರು 'ಧನುರ್ಧಾರಿ'ಯ ಸಂಪಾದಕರೇ ಆಗಲಿ. 'ಖಾದಿ'ಯ ಸಂಪಾದಕರೆ ಆಗಲಿ ಹರಿಹರದ ಬ್ರಹ್ಮಚರ್ಯಾಶ್ರಮದ ಸಂಸ್ಥಾಪಕರೇ ಆಗಲಿ, ಆಲಮಟ್ಟಿಯ ವೀರಶೈವ ವಿದ್ಯಾಲಯದ ಸಂಸ್ಥಾಪಕರೇ ಆಗಲಿ; 'ಭಾರತೀಯರ ದೇಶಭಕ್ತಿ'ಯ ಲೇಖಕರೆ ಆಗಲಿ; 'ಬಸವೇಶ್ವರ ಚರಿತ್ರೆಯ' ಲೇಖಕರೆ ಆಗಲಿ ಅವರ ಘಾಂಟನ್ನು ಪೆನ್ನು ಅಸಂಸ್ಕೃತರನ್ನು ಸುಸಂಸ್ಕೃತರನ್ನಾಗಿಯೂ ನಿರಕ್ಷರರನ್ನು ಸಾಕ್ಷರರನ್ನಾಗಿಯೂ ಬೆಳ್ಳಕ್ಕರಿಗರನ್ನು ಅಕ್ಕರಿಗರನ್ನಾಗಿಯೂ ಮಾಡಲು ಕರ್ಮಯೋಗಿಯಂತೆ ತೊಡಗಿದೆ. ಮಂಜಪ್ಪನವರು ಹುಟ್ಟಾ ಬೋಧಕರು ಶಿಕ್ಷಕರು ಸುಧಾರಕರು. ಅವರ ನಾಡಿನವನೇ ಆದ ಸರ್ವಜ್ಞ ಮೂರ್ತಿಗೂ ಅವರಿಗೂ ಎಷ್ಟೋ ಸಾಮ್ಯವಿದೆ. ಒಂದು ವೈಷಮ್ಯವೂ ಇದೆ. ಅವನಲ್ಲಿದ್ದ ಹಾಸ್ಯ ಇವರಲ್ಲಿಲ್ಲ. ಸರ್ವಜ್ಞನದು ಪದ್ಯ, ಇವರದು ಗದ್ಯ; ಭೇದವು ಚಿಕ್ಕದಾದರೂ ಅಂತರವು ದೊಡ್ಡದು.

ಮಂಜಪ್ಪನವರು ಕರ್ನಾಟಕವನ್ನು ನಾಡನ್ನಾಗಿ ರಾಷ್ಟ್ರವನ್ನಾಗಿ ಕಟ್ಟುವವರಲ್ಲೊಬ್ಬರು. ಅವರ ಉದ್ಯೋಗವು ಅವ್ಯಾಹತ, ಅವರ ಪ್ರಯತ್ನವು ವಿರೋಧಿಗಳಿಗೆ ಹಿಂಜರಿಯದಂತಹದು, ಕಥೆಯೊಳಗಿನ ಆಮೆಯಂತೆ ಸಾವಕಾಶವಾದರೂ ಸಂತತವಾಗಿ ಅವರು ಸಾಗಿರುವರು. ಅವರ ಕಾರ್ಯಗತಿಗೆ ಚಿಕ್ಕೆಗಳಂತೆ ಅವಸರವಿಲ್ಲದಿದ್ದರೂ ವಿರಾಮವೂ ಇಲ್ಲ. ಬ್ರಾಹ್ಮಣ ಬ್ರಾಹ್ಮಣೇತರ ಎಂಬೀ ಗಲಾಟೆಯ ಯುಗದಲ್ಲಿ ಅವರು ತಮ್ಮ ವೀರಶೈವ ಸಮಾಜವನ್ನು 'ಕೋಹಂಸೋಹಂ'ಗಳೆಂಬಾ ಗಜಿಬಜಿಗೆ ಹೊಗದ ಒಂದು ಉನ್ನತ ಸ್ಥಿತಿಗೆ ತರಲು ಹವಣಿಸುತ್ತಿರುವರು. ಆಲಮಟ್ಟಿಯ ವೀರಶೈವ ವಿದ್ಯಾಲಯವು ಈಗಿನ ಅವರ ಪ್ರಯೋಗಶಾಲೆ. ಅವರ ಸಿದ್ಧ ರಸಾಯನಗಳು ಹೊರಬಿದ್ದ ಮೇಲೆ ಅವುಗಳ ಉಪಯೋಗದಿಂದಾಗುವ ಅನುಭವದಿಂದಲೆ ಅವರ ಇಚ್ಛೆಯು ಎಷ್ಟು ಈಡೇರುವದು ಬಿಡುವದು ನೋಡಬೇಕಾಗಿದೆ. ಅವರಂಥವರ ಪ್ರಯತ್ನವು ಸಂಪೂರ್ಣವಾಗಿ ನಿಷ್ಫಲವಾಗುವದು ಅಸಂಭವ.

ಶ್ರೀ ಮಂಜಪ್ಪನವರು ಮಂಜಿನಂತೆ ಶುಭ್ರವಾಗಿ ನಿಚ್ಚಳವಾಗಿ ಇದ್ದಾರೆ. ಆದರೆ ಅದರಂತೆಯೆ ರಹಸ್ಯಮಯವಾಗಿಯೂ ಇದ್ದಾರೆ. ಅವರು ಸ್ವಭಾ

ವತಃ ಪ್ರಯೋಗ ಶರಣರು. ಕರ್ಮಯೋಗದವರಾದರೂ ವಿಜ್ಞಾನಿಗಳಂತೆ. ಪರಿಣಾಮದ ಕಡೆಗೆ ದೃಷ್ಟಿಯಿಟ್ಟು ಕೆಲಸ ಮಾಡತಕ್ಕವರು. ಮುಂಜು ರೂಪವನ್ನೂ ಸ್ಥಾನವನ್ನೂ ಗಾಳಿಯ ಅನುರೋಧದಿಂದ ಬದಲಿಸುವಂತೆ ಇವರ ಕಾರ್ಯದಲ್ಲಿ ಪಲ್ಲಟಗಳಾಗಿರುವದುಂಟು. ಆದರೆ ಅದಾವುದೂ ಸ್ವಾರ್ಥ ದಿಂದಲ್ಲ. ಮಾನವಕುಟುಂಬದ ಹಿತವಾಗುವಂತೆ ಸಾಧುನಾಡಿನಲ್ಲಿಯೂ ಐಕ್ಯಜೀವನದ ಅಸ್ತಿವಾರಕ್ಕೆ ಸಮಾಜದಲ್ಲಿ ನೆಲೆ ದೊರೆಯಬೇಕು ಎಂದು ಅವರ ಇಚ್ಛೆ ; ಅವರ ಕ್ರಿಯೆ. ಅದಕ್ಕೆ ಬೇಕಾದ ಜ್ಞಾನೋದಯವೇ ನಮ್ಮ ನಾಡಿನ ಭಾಗ್ಯೋದಯ.

---

## ಆಲೂರ ವೆಂಕಟರಾಯರು

ಶ್ರೀ. ಆಲೂರರವರು ಮಿಲ್ ಸ್ಪೆನ್ಸರರ ತತ್ವಗ್ರಂಥಗಳನ್ನು ಕನ್ನಡಕ್ಕೆ ಪರಿವರ್ತಿಸುವದರಿಂದ ಇವರ ವಾಙ್ಮಯಸೇವೆಗೆ ಪ್ರಾರಂಭವಾಯಿತು. ಆಗ್ಗೆ ಇವರಿಗೆ ಕನ್ನಡ ಸಾಹಿತ್ಯದ ಪರಿಚಯವೇ ಇಲ್ಲ. ಉತ್ಕಟವಾದ ನೈಜ ಪ್ರೀತಿಯು ಎಷ್ಟು ಅಮೋಘವಾಗಿ ಕಾರ್ಯವನ್ನು ಮಾಡಿಸಬಲ್ಲದೆಂಬುದಕ್ಕೆ ಇವರು ನಿದರ್ಶನರಾಗಿದ್ದಾರೆ. ಇವರ ರಾಜಕಾರಣವೆ ಇವರಿಗೆ ಕರ್ನಾಟಕದಲ್ಲಿ ದೃಷ್ಟಿಯನ್ನು ನಾಟಿಸಿತು. ಅಂತೆಯೆ ಇವರು ಗ್ರಂಥಕರ್ತನೆಂಬ ಕೀರ್ತಿಯ ರಾಜಮಾರ್ಗವನ್ನು ಬಿಟ್ಟು. 'ವಿದ್ಯಾರಣ್ಯ' 'ಭ್ರಮನಿರಸನ' ದಂಥ ಹತ್ತಿಪ್ಪತ್ತು ಪುಟದ ಸಣ್ಣ ಪುಸ್ತಕಗಳನ್ನು ಬರೆಯಲು ಧೈರ್ಯ ಮಾಡಿದರು. ಅವುಗಳ ಮಹತ್ವವು ಅವುಗಳ ಪರಿಣಾಮದಲ್ಲಿದೆ. ಕನ್ನಡಿಗರ ಭ್ರಮನಿರಸನ ವಾಗಿ ಅವರಿಗೆ ವಿದ್ಯಾರಣ್ಯರ ದರ್ಶನವಾಯಿತು. ಇದೇನು ಸಣ್ಣ ಕೆಲಸವಲ್ಲ ಕರ್ನಾಟಕದ 'ಗತವೈಭವ'ವನ್ನು ಇವರು ಕಂಡಿದ್ದೂ ಕನ್ನಡಿಗರಿಗೆ ತೋರಿ ಸಿದ್ದೂ ತದನಂತರದಲ್ಲಿಯೆ. ಇದರಿಂದುಂಟಾದ ಜಾಗೃತಿಯೇ ಜಯಕರ್ನಾ ಟಕದ ಹಾದಿಯನ್ನು ಇವರಿಗೆ ತೋರಿಸಿತು. ಜಯಕರ್ನಾಟಕದಿಂದ 'ನವ ಜೀವನ ಗ್ರಂಥ' ಮಾಲೆಗೆ ಇವರು ಹಾರಿದುದು ಹಿರಿದಲ್ಲ. ಇವರ ಗತಿಯು

ಗಾಳಿಯಂತಿದೆ. ಬಂದರು ಬಂದರು ಎಂಬಷ್ಟರಲ್ಲಿ ಇವರು ಮುಂದೆ ಹೋಗಿ ಬಿಡುವರು. ಕರ್ನಾಟಕದ ಪ್ರಾಣೋಪಾಸಕರಾದ ಇವರು ವಾಯುಸಂಚಲನ ಸಂಚಲರಾಗಿ ತೋರುವದು ಸೋಜಿಗವಲ್ಲ.

ಕರ್ನಾಟಕದ ಹಿರಿಯರಲ್ಲಿ ಆಲೂರರವರ ಹೆಸರು ಅದ್ವಿತೀಯವಾಗಿದೆ. ಕಣ್ಣಲ್ಲಿ ತುಂಬುವ ಆಕೃತಿವಿಶೇಷವಾಗಲೀ, ಮನಸ್ಸಿನಲ್ಲಿ ತುಂಬುವ ಮಾತು ಗಾರಿಕೆಯಾಗಲಿ ಇವರದಲ್ಲ. ರಾಜಕೀಯ ರಣಾಂಗಣದಲ್ಲಿಯೂ ಇತಿಹಾಸದ ಕ್ಷೇತ್ರದಲ್ಲಿಯೂ ಸಾಹಿತ್ಯಲೋಕದಲ್ಲಿಯೂ ಇವರಿಗೂ ಮಿಗಿಲಾಗಿ ಕೆಲಸ ಮಾಡುವವರಿದ್ದಾರೆ; ಕೈಕೊಂಡ ಕಾರ್ಯಕ್ಕೆ ಧನವನ್ನೂ ಕಾಲವನ್ನೂ ಇವರಿಗಿಂತ ಹೆಚ್ಚು ಮಾಡಿದವರು ಇಲ್ಲವೆಂದಲ್ಲ. ತಮ್ಮ ಆಚಾರದ ಬಲ ದಿಂದಲೂ ವಿಚಾರದ ತೇಜದಿಂದಲೂ ಇವರಿಗಿಂತಲೂ ಆದರವನ್ನುಂಟುಮಾಡು ವವರೂ, ಜಾತಿಯ ಮೂಲಕ ದೊಡ್ಡ ಮುಂದಾಳೆನಿಸಿಕೊಂಡವರೂ ಪದವಿಯ ಮೂಲಕ ಮಹಾಗೌರವಸ್ಥರೆನಿಸಿಕೊಂಡವರೂ ಉಂಟು. ಆಲೂರವ ರಲ್ಲಿ ಸಂಘಟನೆಯ ಶಕ್ತಿಯಾಗಲಿ ಚಳವಳಿಯ ವೃತ್ತಿಯಾಗಲಿ ಜನ ಸಂಮೋಹನಾಯಕನ ಸ್ವಭಾವವಾಗಲಿ–ಯಾವುದೂ ಇಲ್ಲ. ಏಕಮುಖ ವಾಗಿಯೂ ಬಹುಮುಖವಾಗಿಯೂ ತಾತ್ಕಾಲಿಕ ತೀವ್ರಾವೇಶದಿಂದಲೂ ಏಕನಿಷ್ಠೆಯಿಂದಲೂ ಕಾರ್ಯ ಮಾಡುವ ಹಲ ಕೆಲವರು ಇವರಿಗಿಂತಲೂ ಹೆಸರಾಗಿದ್ದಾರೆ. ಆದರೆ ಬಹು ಮುಖವಾಗಿಯೂ ಏಕನಿಷ್ಠೆಯಿಂದಲೂ, ಅನನ್ಯಬುದ್ಧಿಯಿಂದಲೂ, ಸತತ ಅನುಸಂಧಾನದಿಂದಲೂ ಕರ್ನಾಟಕದ ಸಲು ವಾಗಿ ವಿಚಾರ ಮಾಡುವವರೂ ತದನುಸಾರವಾಗಿಯೆ ಆಚರಿಸಲು ಪ್ರಯತ್ನಿ ಸುವವರೂ ಹಿರಿಯರಾದ ಕನ್ನಡಿಗರಲ್ಲಿ ಇನ್ನೂ ಇವರೊಬ್ಬರೇ! ಅದೇ ಇವರ ತಪಸ್ಸು. ಇವರ ಅದ್ವಿತೀಯವಾದ ಹೆಸರು ಅದರ ಫಲವು.

ಆಲೂರರವರು ಬಾಯಿ ಹಾಕದ ಮಾತಿಲ್ಲ. ಕೈ ಹಾಕದ ಕೆಲಸವಿಲ್ಲ. ಇವರಿಗೆ ತನ್ನದೆನ್ನುವ ಕಾರ್ಯವಿಲ್ಲ. ಕರ್ನಾಟಕದ ಸರ್ವಾಂಗ ಪೋಷಣೆಗೆ ಬೇಕಾಗುವ ಎಲ್ಲ ಮಾತು ಎಲ್ಲ ಕೆಲಸಗಳೂ ಇವರಿಗೆ ಬೇಕಾದವುಗಳೆ. ಎಲ್ಲ ವನ್ನೂ ಇವರು ಮಾಡಿ ಮಾಡಿಸಿರುವರು. ಆಡಿ ಆಡಿಸಿರುವರು. ಕರ್ನಾ ಟಕದ ಕುಲಪುರೋಹಿತರೆಂದು ಒಬ್ಬರು ಇವರಿಗೆ ಪರಿಹಾಸದಲ್ಲಾಡಿದುದು

ಈಗ ಪರಮಾರ್ಥವಾಗಿದೆ. ಪುರೋಹಿತರಂತೆಯೇ ಇವರೂ ಕೆಲಸವನ್ನು ಪ್ರಾರಂಭ ಮಾಡಿಸಿ ಬೇರೆ ಯಜಮಾನರಿಗೆ ಕೆಲಸ ಬಿಟ್ಟು ಕೊಡುವರು. ಇವರ ಕಾರ್ಯಪ್ರವೃತ್ತಿಯೊಡನೊಡನೆಯೆ ನಿವೃತ್ತಿಯು ಮಾತೂ ಪ್ರಾರಂಭ ವಾಗುವವು. ನಾಲ್ಕು ಜನರು ಒಂದು ಕಡೆಗೆ ಕೂಡಿದ ಕೂಡಲೆ ಇವರು ಮತ್ತೊಂದು ಕಡೆಗೆದ್ದು ಹೋಗುವರು. ಇತಿಹಾಸ ಮತ್ತು ಸಾಹಿತ್ಯ ಇವು ಗಳು ಜೀವನಮಂಡಲದ ದಕ್ಷಿಣೋತ್ತರ ಧ್ರುವಗಳು. ರಾಜಕಾರಣ ಮತ್ತು ಪತ್ರಿಕಾಸಂಚಾಲನ ಇವುಗಳು ಅವುಗಳ ಪ್ರಯೋಗಶಾಲೆಗಳು. ಈ ಪ್ರಯೋಗ ಶಾಲೆಯಲ್ಲಿ ಸಿದ್ಧಪಡಿಸಿದ ರಸಾಯನವನ್ನು ಇವರು ತಮ್ಮ ಕರ್ನಾಟಕೋ ದ್ಯಮದಲ್ಲಿ ಕಾಲಕಾಲಕ್ಕೆ ಉಪಯೋಗಿಸಿರುವರು. ಈ ಪಾಠವನ್ನವರು ಲೋಕಮಾನ್ಯರಿಂದ ಕಲಿತರು. ಯಾವುದಕ್ಕೂ ಧರ್ಮವೂ ತತ್ವಜ್ಞಾನವೂ ಜೀವಾಳವೆಂಬುದನ್ನು ಅರವಿಂದರಿಂದ ತಿಳಿದುಕೊಂಡು ರಾಷ್ಟ್ರಜೀವನವನ್ನು ಯಾವಾಗಲೂ ಇವರು ತತ್ವಶಾಸ್ತ್ರದ ಪರಿಭಾಷೆಯಲ್ಲಿಯೇ ಹೇಳುವರು. ಲೋಕಮಾನ್ಯರೂ ಅರವಿಂದರೂ ಅದ್ವೈತ ಸಿದ್ಧಾಂತಗಳನ್ನು ರಾಷ್ಟ್ರೀಯತತ್ವ ದಲ್ಲಿ ಅನ್ವಯಿಸಿ ತೋರಿಸುವಂತೆ ಇವರು ತಮ್ಮ ದ್ವೈತ ಸಿದ್ಧಾಂತಗಳನ್ನೂ ಆ ವ್ಯಾಪಕಾರ್ಥದಲ್ಲಿ ಅನ್ವಯಿಸುವರು. ಅಂತೆಯೇ ಇವರು ಕರ್ನಾಟ ಕಾಂತರ್ಗತ ಭಾರತಮಾತೆಯನ್ನು ಪೂಜಿಸುವರು. ಇವರ ದೇಶಭಕ್ತಿಯು ರಾಷ್ಟ್ರಭಕ್ತಿಯ ಉಪಸಿದ್ಧಾಂತವು.

ಆದರೆ, ಇವರಲ್ಲಿ ಬುದ್ಧಿಯ ಏಕಾಗ್ರವೃತ್ತಿಗಿಂತ ವ್ಯಾಪಕವೃತ್ತಿಯು ಹೆಚ್ಚು; ಮೂರ್ತಿಪೂಜೆಗಿಂತ ತತ್ವ ಪೂಜೆಯು ಅಧಿಕ; ಆಚಾರನಿಷ್ಠೆಗಿಂತ ವಿಚಾರನಿಷ್ಠೆಯು ಬಹಳ. ರಾಷ್ಟ್ರೀಯ ದೃಷ್ಟಿ ಹೆಚ್ಚು; ರಾಷ್ಟ್ರದರ್ಶನ ಕಡಿಮೆ. ಜನೋದ್ದೀಪನಶಕ್ತಿ ಹೆಚ್ಚು; ಜನನಿರ್ವಹಣಶಕ್ತಿ ಕಡಿಮೆ. ಸಣ್ಣ ಪುಟ್ಟ ಕೊರತೆಯಿಂದ ಅತೃಪ್ತಿ ಹೆಚ್ಚು. ಅಲ್ಪ ಕಾರ್ಯದಿಂದ ಸಂತುಷ್ಟಿ ಕಡಿಮೆ. ವಿಚಾರ ಸ್ವಾತಂತ್ರ್ಯದ ಆಡಂಬರಕ್ಕಿಂತ ನಾವೀನ್ಯ ಪ್ರೀತಿ ಹೆಚ್ಚು. ಪ್ರತಿಯೊಂದು ಮಾತಿನಲ್ಲಿಯೂ ಇವರಲ್ಲೊಂದು ಪ್ರತ್ಯೇಕಾಭಿಪ್ರಾಯವು ಇದ್ದೇ ಇರುವದು. ಯಾರು ಯಾವ ಮಾತಿನಲ್ಲಿ ಇವರ ಸಲಹೆ ಕೇಳಿದರೂ ನವೀನ ವಾದುದೊಂದನ್ನು ಇವರು ಹೇಳೇ ಹೇಳುವರು. ಇವರ ವಿಚಾರದಲ್ಲಿ ಪ್ರಗತಿ ಹೆಚ್ಚು. ಇವರು ನೂತನಪಕ್ಷಗಳನ್ನು ನಿರ್ಮಿಸಿದರೂ ಪಕ್ಷಪಾತ ಕಡಿಮೆ.

ಷಿವರು ಎಲ್ಲ ವಿಚಾರಗಳಿಗೂ ಬೆಂಬಲ ಕೊಟ್ಟರೂ ಯಾವ ವಿಚಾರಕ್ಕೂ ಮುಂಬಲ ಕೊಡುವದು ಕಡಿಮೆ. ಇವರು ಜನರ ನಾಯಕರಾಗದೆ ನೇತ್ರವಾಗಿದ್ದಾರೆ, ಮುಂದಾಳುಗಳಾಗದೆ ಪ್ರತಿನಿಧಿಗಳಾಗಿದ್ದಾರೆ.

---

# ವಿಮರ್ಶೆ

## ೧. ಕನ್ನಡ ಸಾಹಿತ್ಯದಲ್ಲಿ ಸಂಪ್ರದಾಯ ಮತ್ತು ಹೊಸರೀತಿ

'ಸಂಪ್ರದಾಯ ಮತ್ತು ಹೊಸ ರೀತಿ'ಯ ಮಾತು ಕೇವಲ ಸಾಹಿತ್ಯಕ್ಕಷ್ಟೆ ಅನ್ವಯಿಸುವದಿಲ್ಲ. ಇದನ್ನು ಮೊಟ್ಟಮೊದಲು ನಾವು ನೆನಪಿನಲ್ಲಿಡಬೇಕು. ಆ ವಿಚಾರವು ಜೀವನವ್ಯಾಪಿಯಾಗಿದೆ. ಅಂತೆಯೇ ಸಾಹಿತ್ಯದಲ್ಲಿಯೂ ತನ್ನ ಪ್ರಭುತ್ವವನ್ನು ಅದು ತೋರಿಸಿದೆ. 'ಸಂಪ್ರದಾಯ ಮತ್ತು 'ಹೊಸ ರೀತಿ'ಯ ಪ್ರಶ್ನೆಯು ಒಂದೇ ದೇಶದ್ದಲ್ಲ. ಋತುಮಾನದಂತೆ ಅದು ಎಲ್ಲ ಖಂಡಗಳಲ್ಲಿಯೂ ಸಂಚಾರಮಾಡುವದು. 'ಸಂಪ್ರದಾಯ ಮತ್ತು 'ಹೊಸ ರೀತಿಯ' ಪ್ರಭಾವವು ನಮ್ಮ ನೀತಿ ನಡವಳಿ, ಬಟ್ಟೆ ಬರೆ, ಊಟ ಉಪಚಾರಗಳಲ್ಲಿ ಕಂಡುಬರುವದಲ್ಲದೆ ಗಂಡ ಹೆಂಡಿರು, ರಾಜ ಪ್ರಜೆಗಳು, ಗುರು ಶಿಷ್ಯರು, ಇಷ್ಟೇ ಏಕೆ, ಗಂಡಸರು ಹೆಂಗಸರು, ಜನ ಜನಾಂಗಗಳು, ಮನಸ್ಸಿನಿಂದ ದುಡಿಯುವವರು ಮೈಯಿಂದ ದುಡಿಯುವವರು—ಇಂಥ ವಿಪುಲ ಸಮಾಜಗಳಲ್ಲಿಯೂ ಕಂಡುಬರುವದು. ಹೀಗಿರುವಾಗ ಸಾಹಿತ್ಯವಷ್ಟೆ ಅಸ್ಪೃಶ್ಯವಾಗಿ ಉಳಿಯುವದು ಸಾಧ್ಯವಲ್ಲ. ಜೀವನಕ್ಕೆ ಸಂಬಂಧವೇ ಇಲ್ಲದ ಕಾಲ್ಪನಿಕ ಸಾಹಿತ್ಯವು ಎಂದೋ ಹಾಕಿದ ಗೆರೆಗಳ ಕಟ್ಟುನಿಟ್ಟಿನಲ್ಲಿ ಉಳಿಯಬಹುದು. ಜೀವನದೊಡನೆ ದಾಂಪತ್ಯ ಬೆಳೆಸಿದ ಸಾಹಿತ್ಯವು ಉಚ್ಚ

ಸ್ವೇಚ್ಛಾವಸ್ಥೆಗಳೊಳಗಿಂದ ಹಾಯ್ದಾಡುವಾಗ ಹೊಸರೀತಿಯು ವೈಲಕ್ಷಣ್ಯ ವನ್ನು ಮುಚ್ಚಿಕೊಂಡಿರುವದು ಅಸ್ವಾಭಾವಿಕವಾಗಿದೆ. ಆದರೆ ಈ ವಿಚಾರ ವನ್ನು ಬೆಳಸುವ ಮೊದಲು 'ಸಂಪ್ರದಾಯ ಮತ್ತು ಹೊಸರೀತಿ' ಯ ಅರ್ಥವೇನು? ವಿವಾದಾಸ್ಪದವಾದ ವಿಶೇಷವಾವದು? ವಿವೇಕಿಗಳ ಹಾದಿ ಯೆತ್ತ? ಎಂಬುದನ್ನಷ್ಟು ಸ್ಪಷ್ಟಮಾಡುತ್ತೇನೆ.

'ಸಂಪ್ರದಾಯ'ವೆಂದರೆ ರೂಢಿ, ಬಹುಕಾಲದಿಂದ ನಡೆದುಬಂದ ರೀತಿ; ತಂದೆಯಿಂದ ಮಗನಿಗೆ, ಗುರುವಿನಿಂದ ಶಿಷ್ಯನಿಗೆ, ಹಿರಿಯರಿಂದ ಕಿರಿಯರಿಗೆ, ಇದ್ದವರಿಂದ ಇಲ್ಲದವರಿಗೆ, ಭೂತಕಾಲದಿಂದ ವರ್ತಮಾನಕ್ಕೆ, ಯಾವ ಜ್ಞಾನ ಶಕ್ತಿ, ರೀತಿ, ನಡತೆ, ಪದ್ಧತಿ, ಅನೂನವಾಗಿ ಎಂಬಂತೆ ಪರಂಪರೆಯಿಂದ ಬರುವದೊ ಅದು ಸಂಪ್ರದಾಯ. ಆದಕಾರಣ, ಯಾವ ಸಂಪ್ರದಾಯವೂ ಪ್ರಾಚೀನವಿದ್ದಷ್ಟು ಬೆಲೆಯುಳ್ಳದ್ದು. ಆದ್ದರಿಂದ ಎಲ್ಲ ಸಂಪ್ರದಾಯದವರೂ ತಮ್ಮದು ಪ್ರಾಚೀನವೇಕೆ, ಅನಾದಿ, ಅಪೌರುಷೇಯ ಎಂದು ಸಿದ್ಧಪಡಿಸುವ ಹವ್ಯಾಸಮಾಡುವದಿರಲಿ, ಪ್ರಳಯಕಾಲದವರೆಗೂ ತಮ್ಮ ಸಂಪ್ರದಾಯ ಉಳಿಯತಕ್ಕದ್ದು ಎಂಬ ಶುದ್ಧೆಯ ಭರದಲ್ಲಿ ಅದಕ್ಕೆ ಏನೂ ಧಕ್ಕೆ, ಏನೂ ಬದಲ್ಲಾವಣೆ ಆಗುವ ಹೆದರಿಕೆ ಅಥವಾ ಸಂಶಯ ಬಂದೊಡನೆ ಪ್ರಳಯವನ್ನೆ ಸಮೀಪ ತರಲು ಸಂಕಟಪಡುವರು. ಪ್ರಳಯವಾಗಿಹೋದರೆ ತಮ್ಮ ಸಂಪ್ರದಾಯವು ಬ್ರಹ್ಮೋದರದಲ್ಲಿ ಉಳಿದು ಮತ್ತೆ ಸೃಷ್ಟಿಯೊಡನೆ ಮೊಳೆ ಯುವದು ಎನ್ನುವ ಅತಿ ಶ್ರದ್ಧಾವಂತರೂ ಇರುತ್ತಾರೆ. ಸೃಷ್ಟಿಯಲ್ಲಿಯೂ ತಮ್ಮ ಸಂಪ್ರದಾಯ ಉಳಿದಿಲ್ಲವೆಂದು ಕಂಡುಬಂದರೂ ದೇವರ ದೃಷ್ಟಿ ಯಲ್ಲಾದರೂ ಅದು ಹೂಳಿಕೊಂಡಿರಬೇಕು ಎನ್ನುವ ಭರವಸೆಯಿಂದ ಅವರು ಉದಾಸೀನರಾಗಿ ಜೀವನ ಕಳೆಯುವರು. ಈ ವಿವೇಕ ಅವಿವೇಕಗಳಲ್ಲಿ ಸಂಪ್ರದಾಯದ ಎಲ್ಲ ಶಕ್ತಿ ಅಶಕ್ತಿಗಳೂ ಅಡಕವಾಗಿವೆ.

ಇನ್ನು 'ಹೊಸ ರೀತಿ' ಎಂತಹದು? ಸಂಪ್ರದಾಯದಲ್ಲಿ ಬುದ್ಧಿ ಪೂರ್ವಕವಾಗಿ ಮಾಡಿದ ಯಾವ ಹೆಚ್ಚು ಕಡಿಮೆಯೂ, ಅದರಿಂದ ತೀರ ಭಿನ್ನವಾದ ರೀತಿಯೂ 'ಹೊಸರೀತಿ' ಎನ್ನಿಸಿಕೊಳ್ಳುವದು. ಅಷ್ಟೇ ಏಕೆ, ಒಂದು ಸಂಪ್ರದಾಯಕ್ಕೆ ಇನ್ನೊಂದು ಸಂಪ್ರದಾಯವು ಹೊಸ ರೀತಿಯಾಗಿ ತೋರುವದು. ಅದಕ್ಕೂ ಚಮತ್ಕಾರವೆಂದರೆ, ಪರಸ್ಪರ ಹೋರಾಡುವ

ಹಳೆಯ ಸಂಪ್ರದಾಯಗಳು ಒಟ್ಟು ಕೂಡಿಕೊಂಡು ಪ್ರಬಲವಾಗಲಿರುವ ಮತ್ತೊಂದು ರೀತಿಗೆ 'ಹೊಸದು,' 'ಅಸಾಂಪ್ರದಾಯಿಕ' ಎಂಬ ದೂಷಣೆಯನ್ನು ಕೊಡುವವು.

ಇನ್ನು ಸ್ವತಃ 'ಸಂಪ್ರದಾಯ' ದಲ್ಲಾಗಲಿ, 'ಹೊಸ ರೀತಿ' ಯಲ್ಲಾಗಲಿ ಯಾವ ದೊಡ್ಡಸ್ತಿಕೆಯೂ ಇಲ್ಲ. ಇದ್ದದ್ದನ್ನು ಇದ್ದಂತೆ ಕಾಯ್ದುಕೊಂಡು, ನಡಸಿಕೊಂಡು ಹೋಗುವದೇ ಸಂಪ್ರದಾಯವಾದರೆ ಅದೊಂದು ಸಮಾಜದ ಜಡಬುದ್ಧಿ, ತಾಮಸಜಾತಿ ಎನ್ನಬಹುದು. ಎಂಥದಾದರೂ ಮಾರ್ಪಾಡೇ ಹೊಸರೀತಿಯಾಗಬಹುದಾದರೆ ಅದೂ ಸಾಮೂಹಿಕ ಚಾಂಚಲ್ಯ ಅಥವಾ ವೈಯಕ್ತಿಕ ರಾಜಸವೃತ್ತಿ ಎನ್ನಬಹುದು. ಆದರೆ, 'ಸಂಪ್ರದಾಯ' ವೆಂದರೆ ಇದ್ದ ಒಳ್ಳೆಯ ಗುಣಗಳನ್ನು ಕಾಯ್ದುಕೊಳ್ಳುವದೆಂದಾದರೆ, 'ಹೊಸರೀತಿ' ಎಂದರೆ ಇದುವರೆಗೆ ತಮ್ಮಲ್ಲಿ ಬೆಳೆಯದಿದ್ದ ಗುಣಗಳನ್ನು ಬೆಳೆಯಿಸಿಕೊಳ್ಳುವದು ಎಂದಾಗಬಹುದು. ಜುಟ್ಟು ಜನಿವಾರದ ಸಂಪ್ರದಾಯವಂತಿಕೆಯಂತೆಯೆ, ನೆಕ್‍ಟೈ, ಸ್ಟಾಕಿಂಗ್ಸ ಇವುಗಳ ಕಟ್ಟುಬಣ್ಣಗಳ ಹೊಸರೀತಿಯಲ್ಲಿ ಯಾವ ಮರ್ಮವೂ ಇಲ್ಲ, ಧರ್ಮವೂ ಇಲ್ಲ. ಅದು ಒಂದು ಶಿಸ್ತು ಮಾತ್ರ.

ಸಲಕ್ಷಣವಾದ ದೇಹವಿದ್ದರೆ ಸಾಕು, ಗುಣಗಳು ತಾವೇ ಮನೆ ಮಾಡಿರುವವು ಎಂಬುದು ಸಾಂಪ್ರದಾಯಿಕ ಶ್ರದ್ಧೆ. "ಆಕೃತಿ ವಿಶೇಷಾಃ ನ ಗುಣ ವಿರೋಧಿನೋ ಭವಂತಿ" ಎಂದು ಶಕುಂತಲೆಯ ಸಖಿ ಹೇಳಿದಂತೆ, ಒಂದು ಅಂಗವು ಊನವಿದ್ದರೇನು ನ್ಯೂನವಿದ್ದರೇನು, ಆಕರ್ಷಕ ಗುಣವಿದ್ದರೆ ಆ ದೇಹವು ಸಾರ್ಥಕ ಎಂಬುದು ಹೊಸ ರೀತಿಯವರ ಹೇಳಿಕೆ. "ಗಂಡರ್ ಗುಣಮನೆ ಮರೆವುದು ಶಸ್ತ್ರವ್ರಣಮಂ" ಎಂದು ದ್ರೌಪದಿ 'ಇರಿವ ಬೆಡಂಗ' ನಿಗೆ ಹೇಳಿದಂತೆ, ಒಳ್ಳೆಯ ಅರ್ಥದಲ್ಲಿ ನೋಡುವದಾದರೆ 'ಸಂಪ್ರದಾಯ' ಎಂದರೆ ದೇಹಶುದ್ಧಿ, ಆನುವಂಶಿಕ ಗುಣಸಂಪತ್ತಿ, ದೈವದ ಅನುಕೂಲ್ಯ; ಹಾಗೆಯೇ 'ಹೊಸರೀತಿ' ಎಂದರೆ ಗುಣವೃದ್ಧಿ, ಪೌರುಷದ ಪ್ರಾಚುರ್ಯ, ಸಾಹಸದ ಸಮೃದ್ಧಿ. ಸಂಪ್ರದಾಯ, ಹೊಸ ರೀತಿಗಳು ಸಮತೂಕದಿಂದ ಕೂಡಿಕೊಂಡಲ್ಲಿ ರಾಜಸ ತಾಮಸಗಳ ವೈಷಮ್ಯ

ವಾಗಿ, ಹೊಸದೊಂದು ತತ್ವವೇ ತಲೆಯೆತ್ತಿದಂದೆ ಸಾಹಿತ್ಯಕ್ಕೆ ಬೇಕಾದುದು ಇದು. ಬರಿಯ ಸಂಪ್ರದಾಯದ ಇತಿಹಾಸ ಪುರಾಣ ಬೇಡ; ಬರಿಯ ಹೊಸರೀತಿಯ ಕಾಲ್ಪನಿಕ ಕತೆ, ಕಾದಂಬರಿ ಬೇಡ. ಸಾಹಿತ್ಯವು ಸರಸ ಶಾಂತೆಯಂತೆ ಜೀವನ ಗಾಂಭೀರ್ಯಕ್ಕೂ ಜೀವನ ಮಾಧುರ್ಯಕ್ಕೂ ಮಾರುಹೋಗಿದೆ. ಕಾಲ್ಪನಿಕ ಭವಿಷ್ಯವು, ಸ್ಮೃತಿರಮ್ಯಭೂತಕಾಲವು ಸಾಹಿತ್ಯದ ಪ್ರಮುಖಾನ್ನವಲ್ಲ. ಅದು ಅದರ ವ್ಯಂಜನ ಸಾಮಗ್ರಿ. ಹಳೆಯ ಸಂಪ್ರದಾಯವನ್ನೇ ಒತ್ತಿ ಹೇಳಲು ವೇದಜಡಶ್ರುತಿಯು ಶ್ರುತಿಹಿಡಿಯಬಹುದು. ಹೊಸ ಹೊಸ ರೀತಿಯನ್ನೆತ್ತಿ ಹಿಡಿಯಲು ರಾಜಸ ಸ್ಮೃತಿಯು ವಿವಿಧ ಸ್ವರಗಳನ್ನು ತೆಗೆಯಬಹುದು. ಆದರೆ ನಿಜವಾದ ಜೀವನದ ಮನಂಬುಗುವ ಹಾಡುಗಾರಿಕೆಯಲ್ಲಿ ಸಜೀವ ಸಾಹಿತ್ಯವೇ ಸಮರ್ಥವಾಗಿರುವದು. ಶುದ್ಧ ಸಂಪ್ರದಾಯ, ಶುದ್ಧ ಹೊಸ ರೀತಿ ಇವೆರಡೂ ಕಲ್ಪನೆ ಮಾತ್ರ, ಕೇವಲ ವೃತ್ತಿಗಳು. ಜೀವನವು ವೃತ್ತಿಗಳ ತೂಕವನ್ನು ಹಿಡಿದು ಹೊಸ ಸಾಮರಸ್ಯಕ್ಕಾಗಿ ಹಾದಿ ತೆರೆಯುತ್ತಿರುವ ಧೀರ ಪಾಂಥನಂತಿರುವದು. ಸಾಹಿತ್ಯವು ಇಂಥ ಪ್ರವಾಸ ಸಾಹಸಗಳ ವೃತ್ತಾಂತವು. ಅಂತೆಯೇ ಸಾಹಿತ್ಯದ ಸಾರದಲ್ಲಿ ಸಂಪ್ರದಾಯ ಹೊಸ ರೀತಿಗಳ ಬಡಿದಾಟಕ್ಕೆ ಸ್ಥಾನವಿರಬಾರದು. ಆದರೆ ವ್ಯವಹಾರದಲ್ಲಿ ಹಳೆಯ ಹೊಸ ಸ್ವಾರ್ಥಗಳು 'ಸಂಪ್ರದಾಯ', 'ಹೊಸ-ರೀತಿ' ಎಂದು ಹೆಸರಿಟ್ಟುಕೊಂಡು ದಿನವೂ ರಣಕಂದನವನ್ನು ನಡಿಸಿರುತ್ತವೆ. ಒಮ್ಮೊಮ್ಮೆ ಬೀದಿಯ ದೊಂಬಿಗಾರರೂ ವಿದ್ಯಾನಿಲಯಗಳನ್ನು ಹೊಕ್ಕು ಅಲ್ಲಿಯೂ ಮರ್ಕಟ ಚೇಷ್ಟೆ ನಡಿಸುವಂತೆ ವ್ಯಾವಹಾರಿಕವಾದ ಈ 'ಸಂಪ್ರದಾಯ-ಹೊಸ ರೀತಿಗಳ' ವಾದವು ಪಾರಮಾರ್ಥಿಕವಾದ ಸಾಹಿತ್ಯದಲ್ಲಿಯೂ ಸೇರುವದು.

ಹಿಂದಿನವರು ಇಂದಿನವರಿಗೆ 'ಹೊಸ ರೀತಿ' ಯವರು ಎಂದು ಹಳಿಯುವದು ಬಹಳ ಹಳೆಯ ಮಾತಾಗಿದೆ. "ಪುರಾಣಮಿತ್ಯೇವ ನಸಾಧು ಸರ್ವಂ ನಚಾಪಿ ಕಾವ್ಯಂ ನವಮಿತ್ಯವದ್ಯಂ" ಎಂದು ಕಾಲಿದಾಸನು ತನ್ನ ಕಾಲಕ್ಕೆ ಹೇಳಿದರೆ, "ನೂತನ ಕವಿತೆಯೆಂದು ಕುಂದಿಟ್ಟು ಜರೆದೊಡೆ ಪೇಳ್ವವನೊಳಾವದೂಣೆಯಂ" ಎಂದು ಲಕ್ಷ್ಮೀಶನು ಕೇಳಬೇಕಾಗಿ ಬಂದಿತು. ತನ್ನ ಕಾಲಕ್ಕೆ ಆದ್ಯರ ಹೆಸರಿನಲ್ಲಿ ಅದ್ಯತನರನ್ನು ಕಾಡುವ ಜನರು ಎಂದಿಗೂ

ಇದ್ದಾರೆ. ಜೈನ ಸಂಪ್ರದಾಯದ ಚಂಪೂ ಕಾವ್ಯಕ್ಕೆ ಹರಿಹರನ ಕಾವ್ಯವು ರಗಳೆಯಾಗಿ ತೋರಿತು. ವೀರಶೈವ ಪುರಾಣಿಕರಿಗೂ ವಚನಕಾರರಿಗೂ ವೈಷ್ಣವರ ರಾಮಾಯಣ ಭಾರತಗಳು ಹೊಲ್ಲ ಕತೆಗಳಾದವು, ಮತವೈಷಮ್ಯದಿಂದ ಪಂಡಿತರಿಗೇ ಗಮ್ಯವಾಗುವ ಕಾವ್ಯ ಬರೆವ ಮಧುರನು ತನ್ನ ಕಾವ್ಯವು 'ಬೀರನ ಕತೆ' ಯಾಗಬಾರದೆಂದು ಗುರಿಯಿಟ್ಟುಕೊಂಡು ಲಕ್ಷಣಬದ್ಧ ಸಂಪ್ರದಾಯವಂತನಾದನು; ಆದರೆ ಅದೇ ಜೈನಮತದ ರತ್ನಾಕರನು ಎಲ್ಲರಿಗೂ ರಮ್ಯವಾಗುವ ಕಾವ್ಯಬರೆಯುತ್ತೊಡಗಿ, ಸಕಲಲಕ್ಷಣಸಂಪನ್ನವಾದ ಕಾವ್ಯಕಟ್ಟುವ ಸಂಭ್ರಮದಲ್ಲಿ 'ಪುಸ್ತಕದ ಬದನೆಕಾಯಿ' ಯಾಗಬಾರದು ಎಂದು ಹೊಸ ರೀತಿಯುವನಾದನು. 'ಮಾರ್ಗ' 'ದೇಸಿ' ಯೆಂದು 'ವಸ್ತುಕ' 'ವರ್ಣಕ' ವೆಂದು, 'ವಕ್ರೋಕ್ತಿ' 'ಸ್ವಭಾವೋಕ್ತಿ', ಎಂದು ಸಂಪ್ರದಾಯ ಹೊಸ ರೀತಿಗಳ ಹುಯಿಲು ಕನ್ನಡದ ಹಿಂದಿನ ಸಾಹಿತ್ಯೇತಿಹಾಸದಲ್ಲಿ ಏಳದೆ ಬಿಟ್ಟಿಲ್ಲ. ಆದರೆ ಸಾಹಿತ್ಯಪ್ರಿಯರಾದ ನಮಗೆ ಸಂಪ್ರದಾಯ ಹೊಸ ರೀತಿಗಳ ನಿರಪೇಕ್ಷತೆಯಿಂದ ನೋಡುವಾಗ್ಗೆ ಹಿಂದಿನ ಉತ್ತಮ ಕೃತಿಯೆಲ್ಲವೂ ಚೊಕ್ಕ ಸಾಹಿತ್ಯವಾಗಿಯೇ ತೋರುವದು. ಅದೆಲ್ಲವೂ ನಮಗೆ ಬೇಕು. ಎಂದಿನಿಂದಲೂ ಕನ್ನಡದ ಉತ್ತಮ ವಿಚಾರವು ಸಮ್ಯಕ್ತ್ವವನ್ನು ಗುರಿಯಿಟ್ಟುಕೊಂಡಿದೆ, ಪರಿಪೂರ್ಣತೆಗೆ ಭಕ್ತನಾಗಿದೆ, ಪೂರ್ಣಪ್ರಜ್ಞೆಗೆ ದಾಸನಾಗಿದೆ, ಸಮನ್ವಯವು ಸಾಧು ಎಂದಕೊಂಡಿದೆ; ಮಾರ್ಗ ದೇಸಿಗಳ ಒಡಂಬಡಿಕೆಯನ್ನೂ, ವಸ್ತುಕ ವರ್ಣಕಗಳ ಅವಳಿಜವಳಿತನವನ್ನೂ, ವಕ್ರೋಕ್ತಿ ಸ್ವಭಾವೋಕ್ತಿಗಳ ಪರಸ್ಪರ ಪೋಷಕತೆ ಪರಿಪೂರ್ಣತೆಯನ್ನೂ ಕಂಡುಕೊಂಡಿದೆ.

ಇಂದೂ ಕೂಡ ಹೊಸ ಸಾಹಿತ್ಯದ ಧುರೀಣರು ಅಥವಾ ಸಾಹಿತ್ಯದ ಹೊಸ ಧುರೀಣರು ಸಮನ್ವಯವಾದಿಗಳಾಗಿದ್ದಾರೆ. ಬಿಗುವಿನ ಬರವಣಿಗೆಗೆ ಶ್ರೀ. ಗೋವಿಂದ ಪೈಗಳ ಸಾಹಿತ್ಯಕ್ಕೆ ಸರಿಸಾಟಿಯಾಗುವ ಶೈಲಿಯು ಸಂಪ್ರದಾಯವಂತರಲ್ಲಿಯೂ ಅಪರೂಪ; ಹಳೆಯ ಕಾವ್ಯದ 'ಸಂಸ್ಕೃತಿಸಮಾಸ' ಬಿಡೋಣ; ಹೊಸ ಕಾವ್ಯದ 'ಆ್ಯಂಗ್ಲಿಸಿಸಮಾಸ' ಬಿಡೋಣ. ಶ್ರೀ.ಯವರ ಕವನದೊಳಗಿನ ಮೆಚ್ಚುಕನ್ನಡದ ಅಚ್ಚಸಂಪತ್ತಿಯು ಯಾವ ಸಾಂಪ್ರದಾಯಿಕ ಕಾವ್ಯಕ್ಕೆ ಕಡಿಮೆಯಿದೆ? ಕನ್ನಡತನದಲ್ಲಿ ಅದು 'ಸಂಸ್ಕೃತ-ಕನ್ನಡ'

ಕ್ಕಿಂತಲೂ ಮೇಲು. ಸಾಂಪ್ರದಾಯಿಕ ಸಾಹಿತ್ಯದ ಗುಣಘೋಷಣೆಯಲ್ಲಿ ಶ್ರೀ ಡಿ. ವಿ. ಗುಂಡಪ್ಪನವರು ಅಥವಾ ಶ್ರೀ. 'ಶ್ರೀನಿವಾಸರು' ಮಾಡಿದ ವಿಮರ್ಶೆಯಂಥ ಉತ್ತಮ ವಿಮರ್ಶೆಯು ಸಂಪ್ರದಾಯಪ್ರಿಯರೆನ್ನುವವರ ಲೇಖನಿಯಿಂದ ಇನ್ನೂ ಬರಬೇಕಾಗಿದೆ. ಸಾಂಪ್ರದಾಯಿಕ ರೀತಿಯ ಕಾವ್ಯವನ್ನು ಬರೆಯಬಲ್ಲ ಶ್ರೀ. ಮುಳಿಯ ತಿಮ್ಮಪ್ಪಯ್ಯನವರು ಹೊಸ ರೀತಿಯನ್ನು ಮೆಚ್ಚುವಲ್ಲಿ, ಕನ್ನಡ ಸಮನ್ವಯದ ಬುದ್ಧಿಯನ್ನೇ ಪ್ರಕಟಿಸುತ್ತಿರುವರು. ಅಂತೂ 'ಸಂಪ್ರದಾಯ', 'ಹೊಸರೀತಿ' ಎನ್ನುವ ಮಾತು ನಿಜವಾದ ಸಾಹಿತ್ಯಕ್ಕೆ ಹೊರತು; ಅದು ವ್ಯಾವಹಾರಿಕ ಭಿನ್ನಾಭಿಪ್ರಾಯಗಳ ಭೂತವು ಮಾತ್ರ. ಗದ್ಯಪ್ರಬಂಧ, ನಾಟಕಗಳಲ್ಲಿ ಸಹಜವಾಗಿ ಹೊಸ ರೀತಿಗೆ ಇಂಬುಗೊಟ್ಟು ಸಂಪ್ರದಾಯವು ಹೊಸ ಕವನವನ್ನು ಸುಲಭವಾಗಿ ಬರಮಾಡಿಕೊಳ್ಳುತ್ತಿಲ್ಲ. ಅದರ ಕಾರಣವೇನೆಂದರೆ —ಸಾಂಪ್ರದಾಯಿಕ ಕಾವ್ಯದ ಪ್ರತಿಷ್ಠಿತ ವೈಭವವು ನಮ್ಮಲ್ಲಿ ಬಹಳ ಎತ್ತರವಾಗಿದೆ. ಅದರ ಇದಿರು ಚಿಕ್ಕ ಪ್ರಾಯದ ಹೊಸ ಕವನವು ಗೋಮಟೇಶ್ವರನಿದಿರು ನಿಂತಿರುವ ಪ್ರೇಕ್ಷಕನಂತೆ ಕುಳ್ಳನಾಗಿ ತೋರುವದು. ಆದರೆ ಗೋಮಟೇಶ್ವರನಿಗೆ ತಲೆಬಾಗಿ ಅದೇ ಪಡಿಯಚ್ಚಿನ ಅಂಥಿಂಥ ಗೊಂಬೆಗಳನ್ನು ಕೆತ್ತುವದೇಕೆ? ಅದರ ಸೌಂದರ್ಯಾನುಭವವನ್ನು ಶಬ್ದದಲ್ಲಿ ಎರಕಹೊಯ್ದು ಕವನ ಪ್ರತಿಮೆಯನ್ನು ರಚಿಸುವ ಶಿಲ್ಪದಲ್ಲಿ ತೊಡಗಿದ ಹೊಸ ರೀತಿಯ ಕವನವು ಸಾಲದೆ? ಅದೇನು ಸಾಂಪ್ರದಾಯಿಕ ಕವನಕ್ಕೆ ಕಡಿಮೆಯದಾಗಿಲ್ಲ.

ಇಷ್ಟಾಗಿ 'ಸಂಪ್ರದಾಯ', 'ಹೊಸ ರೀತಿ' ಎನ್ನುವವು ಒಂದು ರೀತಿಯ ಮನೋಧರ್ಮಗಳನ್ನು ಸೂಚಿಸುವ ಮಾತುಗಳು. ಪಂಪನಿದಿರು ರನ್ನನು ಹೊಸ ರೀತಿಯವನು; ಕುಮಾರ ವ್ಯಾಸನ ಬದಿಗೆ ಲಕ್ಷ್ಮೀಶನು ಸಾಂಪ್ರದಾಯಿಕನು. 'ಗಿರಿಜಾಕಲ್ಯಾಣದ'ದ ಸೋದರಕಾವ್ಯಗಳಾದ ಶಿವಗಣದ ರಗಳೆಗಳೂ, 'ಹರಿಶ್ಚಂದ್ರಕಾವ್ಯದ'ವ ಬೆನ್ನೆಲೆಹುಟ್ಟಿದ ರಾಘವಾಂಕನ ಇತರ ಪುರಾಣಕಾವ್ಯಗಳೂ ಸಂಪ್ರದಾಯ, ಹೊಸ ರೀತಿಗಳು ಒಂದೇ ವ್ಯಕ್ತಿಯಲ್ಲಿ ಜೀವನದ ಕ್ರಾಂತಿಯಿಂದ ಬರುವುವನ್ನು ತೋರಿಸುವವು. ರಾಜ್ಯಕ್ರಾಂತಿ. ಧರ್ಮಕ್ರಾಂತಿ, ಜಿವನಕ್ರಾಂತಿಗಳು ಆದಾದಲ್ಲಿ ಹೊಸ ರೀತಿಯು ಮೈದೋರಲೇಬೇಕು. ಹಳೆಯ ಸಂಪ್ರದಾಯವು ಹೊಸ ಸಂಪ್ರದಾಯವೊಡನೆ ಮೈಗೂಡಿಸಿಕೊಳ್ಳಲೇಬೇಕು. ಮುದ್ದಣನ 'ರಾಮಾಶ್ವಮೇಧ'ದ

ನೊತು ಹಳಗನ್ನಡವಾದರೂ ಭಾವ ಹೊಸಗನ್ನಡವು; ಅಚ್ಚ ಹೊಸಗನ್ನಡವು. 'ಭರತೇಶ ವೈಭವದ' ಹೊಸ ರೀತಿಯು ಇಂದಿನವರೆಗೂ ಸಿಪ್ಪೊಸತು ಎನಿಸವ್ಮುಂತಿದೆ. ವಚನಗಳ ಭಾವಸಂಪತ್ತಿಯು ಸನತ್ಕುಮಾರನ ಸೌಂದರ್ಯವನ್ನು ಪಡೆದು ವರ್ತಮಾನಕಾಲದ ಎಷ್ಟೋ ಭಾವಗಳನ್ನು ಹಳೆಯ ಸಾಂಪ್ರದಾಯಗಳಹಿಂದುಳಿದ ಕಸವೆನ್ನುವಂತೆ ಮಾಡುತ್ತಿವೆ. ರುದ್ರಭಟ್ಟನ ಸಂಸ್ಕೃತ-ಕನ್ನಡದಿದಿರು ಆಂಡಯ್ಯನ ಅಚ್ಚಗನ್ನಡವು ಪೊಸದೇಸಿಯಿಂದ ಮೆರೆಯುವದು. ಬ್ರಹ್ಮಶಿವನ ಸಾಂಪ್ರದಾಯಿಕ ಭಾವದೊಡನೆ ಹೋಲಿಸಿದರೆ, ಆಂಡಯ್ಯನ ಜೈನಭಾವವು ಹೊಸ ರೀತಿಯದು ಎಂದು ಹೇಳಬಹುದು. 'ಆದಿಪುರಾಣದ'ದ ಪ್ರಶಾಂತ ತನ್ಮಯತೆಯ ಬದಿಗೆ ಬ್ರಹ್ಮಶಿವನ 'ವಿಡಂಬಕ ಕಾವ್ಯ'ದ ವಿಕಟತೆಯೇ ಹೊಸ ರೀತಿ ಎನ್ನಬಹುದು. ಅಂತೂ, ಸಂಪ್ರದಾಯ ಹೊಸ ರೀತಿಗಳ ಸಂಕರ ಸಂಸ್ಕೃತಿಗಳಿಂದ ಆದ ಅನೇಕ ಮಿಶ್ರಣಗಳನ್ನು ಸಾಹಿತ್ಯರಾಶಿಯಲ್ಲಿ ನಾವು ಕಾಣಬಹುದು.

ಅಂತೆಯೇ ಕೇವಲ ಸಂಪ್ರದಾಯ, ಕೇವಲ ಹೊಸರೀತಿ ಎನ್ನುವದು ಒಳ್ಳೆಯ ಸಾಹಿತ್ಯಕ್ಕೆ ಅನ್ವಯಿಸುವ ಮಾತಲ್ಲ. ಆದರೆ ಸಾಹಿತ್ಯವು ಮತ ಮತಪ್ರಚಾರಸಾಧನೆಯಾದ ಮಟ್ಟಿಗೆ ಮಾತ್ರ, ಭೇದದ ಭೂತವು ಅವುಗಳಲ್ಲಿಯೂ ಸೇರುವದು. ಆದರೂ ಜೀವನದಲ್ಲಿಯೇ ನೆಲೆಗೊಂಡ ಭೇದವನ್ನು ಸಾಹಿತ್ಯದಿಂದ ಹೊರದೂಡುವದು ಸಾಧ್ಯವಲ್ಲದ ಮಾತು. ಭಾರತೀಯ ರಾಜಕೀಯ ಜಾಗೃತಿ, ಪೌರ್ವಾತ್ಯ ಪಾಶ್ಚಿಮಾತ್ಯ ಜ್ಞಾನವಿಜ್ಞಾನಗಳ ಸಂಪರ್ಕ ಸಂಘರ್ಷಣ, ಜಾಗತಿಕ ಸಾಹಿತ್ಯದ ಪ್ರಸಾರ ಮಾನವ ಧರ್ಮಾಭ್ಯುದಯ ಮತ್ತೊಮ್ಮೆ ದೇಶ ಹಾಳುಮಾಡಿ ಇನ್ನೊಮ್ಮೆ ಮನೆಮಠಗಳನ್ನು ಕಟ್ಟಿಕೊಂಡು ನೋಡಬೇಕೆಂಬ ಕೆಲ ಜನರ ಹೊಸ ಚಾಪಲ್ಯ. ಇವೆಲ್ಲವುಗಳ ಅಪೂರ್ವಗ್ರಹಯೋಗವು ಕೂಡಿಬಂದಾಗ ಕನ್ನಡಿಗರೂ ಕನ್ನಡವೂ ಕ್ರಾಂತಿಯನ್ನೂ ಉತ್ಕ್ರಾಂತಿಯನ್ನೂ ಹೊಂದದಿರುವದು ಅಸಂಭವನೀಯವು. ರಾಜಕೀಯ ತಂತ್ರಗಳ ಪ್ರಯೋಗಶಾಲೆಯೂ, ಮತಗಳ ರಸಾಯನಶಾಲೆಯೂ, ಸಾಹಿತ್ಯದ ಕ್ರೀಡಾಂಗಣವೂ ಆಗಿರುವ ಕನ್ನಡವು ನವಚೈತನ್ಯದಿಂದ ತುಂಬಿ ತುಳುಕದಿರುವದೇ ಆಶ್ಚರ್ಯಕರವು. ಮುಂದಿಯ ಮೋರೆಯನ್ನೊಮ್ಮೆ ನೋಡಿ, ಕನ್ನಡಿಯ ನೆರಳನ್ನೊಮ್ಮೆ ನೋಡಿ ಕ್ಷಣಕ್ಕೊಂದು ಕುರುಳು ತೀಡಿ, ಉಸುರಿಗೊಮ್ಮೆ ಬಣ್ಣಬದಲಿಸುವ ಸಂಶ

ಯಿತ ಸೌಂದರ್ಯದ ಹೊಸರೀತಿಯು ನಮ್ಮ ಜೀವನದಲ್ಲಿಯೂ ಬೇಡ. ಸಾಹಿತ್ಯದಲ್ಲಿಯು ಬೆಂಡ. ತಾಳಿಯೋಲೆಗಳಿಂದಲೆ ನಮ್ಮ ಸಾಹಿತ್ಯದೇವಿಯು ಸೌಭಾಗ್ಯ ಉಳಿಯುವದಿದೆ ಎಂದು ಗೆದ್ದಲಿನ ಬಾಯಿಗೆ ತುತ್ತಾಗಬಹುದಾದ ಸಂಪ್ರದಾಯವೂ ನಮ್ಮ ಜೀವನಕ್ಕೂ ಸಾಹಿತ್ಯಕ್ಕೂ ಒಗ್ಗದು.

ನಮಗೆ ಸಂಪ್ರದಾಯ, ಹೊಸ ರೀತಿಗಳೆರಡನ್ನೂ ಎರಡು ತೋಳುಗಳನ್ನಾಗಿಸಿ, ಹೊಸ ಜೀವನದ ಕವಾಟವನ್ನು ತೆರೆಯುವ ವೀರಕರ್ಮದ ಧೀರ ಉದ್ಗಾರದಂತಿರುವ ಸಾಹಿತ್ಯವು ಬೇಕಾಗಿದೆ. ಸಂಪ್ರದಾಯ ಹೊಸ ರೀತಿಗಳ ಚಿಟುಕು ಮುರಿದಾಟವು ಬೇಕಾಗಿಲ್ಲ. ಧೀರಜೀವನದ ವೀರವ್ಯಕ್ತಿಗಳು ಸಾಹಿತ್ಯದಲ್ಲಿ ಆಡಿದ್ದೇ ಹೊಸರೀತಿ, ಮಾಡಿದ್ದೆ ಸಂಪ್ರದಾಯ ಎಂದು ನಾನು ತಿಳಿದಿದ್ದೇನೆ. ಪಂಪ, ಹರಿಹರ, ಕುಮಾರವ್ಯಾಸ, ಬಸವ, ಪುರಂದರ ದಾಸ ರತ್ನಾಕರರು ನಮಗೆ ಈ ಹಾದಿಯನ್ನು ಹೇಳಿಕೊಟ್ಟಿದ್ದಾರೆ ಶ್ರೀಕೃಷ್ಣನು 'ಭಗವದ್ಗೀತೆಯಲ್ಲಿ' ಈ ಹಾದಿ ತುಳಿದಿದ್ದಾನೆ. ಕಾಳಿದಾಸನು ತನ್ನ ಕಾವ್ಯ ನಾಟಕಗಳಲ್ಲಿ ಇದೇ ರೀತಿಯನ್ನು ಸಾರಿದ್ದಾನೆ. ಅಂಥವರು ಆಡಿದ ಒಂದೇ ಮಾತಿನಲ್ಲಿರುವ ಓಜಸ್ಸು ಜೊಳ್ಳುವಾದಿಗಳ ಇಡೀ ಕೃತಿಯಲ್ಲಿ ಸಿಗಲಾರದು. ಕೃಷ್ಣನು ಅರ್ಜುನನ ಹೇಡಿತನವನ್ನು ಹೊಡೆದು ಹಾಕಲು 'ಅನಾರ್ಯಜುಷ್ಟಂ' ಎಂದಾಡಿದ ಒಂದು ಮಾತಿನಲ್ಲಿಯು ಸತ್ತ್ವವೆ ಕಾಳಿದಾಸನ ಶಕುಂತಲೆಯು ದುಷ್ಯಂತನನ್ನು ಧಿಕ್ಕರಿಸುವ 'ಅನಾರ್ಯ' ಎಂಬದರಲ್ಲಿದೆ. ಜ್ಞಾನಿಗಳ ನಿಗ್ರಹಿತ ಧಿಕ್ಕಾರದ ಶಬ್ದ ಸಂಗ್ರಹದಲ್ಲಿ ಈ ಶಬ್ದವು ವಜ್ರದಂತೆ ಹೊಳೆಯುವದು. ಇವರಷ್ಟು ಔಚಿತ್ಯದಿಂದ ಇನ್ನಾರೂ ಈ ಮಾತನ್ನು ಬಳಸಿಲ್ಲ. ಕನ್ನಡರ ಇತಿಹಾಸದ ಸತ್ತ್ವಸಾರವೆಲ್ಲ ಅವರ ಜೀವಾಳದಲ್ಲಿ ಜಾಗ್ರತವಾಗಿ ಬರಬಹುದಾದರೆ, ಸಂಪ್ರದಾಯ ಹೊಸ ರೀತಿಗಳ ಹುದಲಲ್ಲಿ ಅವರು ಸಿಕ್ಕುಬೀಳದೆ ವಿಶ್ವವ್ಯಾಪಿಯಾದ ಜೀವನದ ಲಾಸ್ಯತಾಂಡವಗಳಿಗೆ ಅವರು ಹೆಜ್ಜೆಯಿಕ್ಕಬೇಕು. ಇದು ಕನ್ನಡದ ಕನ್ನಡತನವು. ಹಿಂಜರಿಯುವದು 'ಕನ್ನಡವಲ್ಲ.' ಅದು 'ಅನಾರ್ಯ' ಎನ್ನುವಂತೆ ನಮಗೆ ವಜ್ರಪ್ರಾಯವೆನಿಸಿದರೆ, ಕನ್ನಡದ ದಿವ್ಯಮುಸತೋತ್ಸವವು ಇಂದೇ ಬಂದಿದೆ ಎಂದು ನಾನು ತಿಳಿಯುತ್ತೇನೆ. ನಮ್ಮ ಜೀವನವು ಕನ್ನಡವಾದರೆ ಸಾಹಿತ್ಯವು ತಾನೇ ಅದರು ಕನ್ನಡಿಯಾಗುವದು.

---

## ೨. ಇಂಗ್ಲೀಷ್ ಗೀತಗಳು

ಶ್ರೀಕಂಠಯ್ಯನವರ ಕೃತಿಗಳಲ್ಲಿ 'ಇಂಗ್ಲಿಷ್ ಗೀತಗಳಿ'ಗೆ ಮಹತ್ವದ ಸ್ಥಾನವಿದೆ. ಅವರ ಉಳಿದ ಕೃತಿಗಳಂತೆ ಇದೂ ಕನ್ನಡ ಹೊಸ ಸಾಹಿತ್ಯದಲ್ಲಿ ನವೀನ ಮಾರ್ಗದ ನೆಲೆಹಾಕಿತು. ಗ್ರೀಕರ ರುದ್ರ ನಾಟಕಗಳನ್ನು ಮೆಚ್ಚಿದ ಶ್ರೀಕಂಠಯನವರು ಅವುಗಳ ಭಾಷಾಂತರ ರೂಪಾಂತರಗಳನ್ನು ಕನ್ನಡಕ್ಕಿಳಿಸಿದ್ದಾರೆ. ದುರಂತ ನಾಯಕನ ತತ್ವವನ್ನು ಚೆನ್ನಾಗಿ ಮನನ ಮಾಡಿದ್ದರಿಂದ ಅವರು ರನ್ನನ ಗದಾಯುದ್ಧವನ್ನು ರುದ್ರರೂಪಕವಾಗಿ ಪರಿವರ್ತಿಸಿದರು. ಕನ್ನಡ ಕಾವ್ಯಗಳಲ್ಲಿ ಪ್ರತಿನಾಯಕರಾಗಿ ಬರುವ ಅನೇಕರಲ್ಲಿ ದುರಂತತೆಯನ್ನು ಕಂಡು ಅದನ್ನು ವಿಮರ್ಶಿಸಿ ಕಾವ್ಯ ರಸಾಸ್ವಾದನೆಯಲ್ಲಿ ಇನ್ನೊಂದು ರುಚಿ ಹುಟ್ಟಿಸಿದ್ದಾರೆ. ದುರ್ಯೋಧನ, ರಾವಣ, ಕರ್ಣ, ಶಿಶುಪಾಲ ಮೊದಲಾದ ಪಾತ್ರಗಳು ಈ ವಿಮರ್ಶಕ ದೃಷ್ಟಿಯಲ್ಲಿ ಹೊಸದೊಂದು ಕಳೆಯನ್ನು ಹೊಂದಿವೆ. ರುದ್ರನಾಟಕಗಳ ಬರೆವಣಿಗೆಯಲ್ಲಿ, ಕಾವ್ಯಭಾಗಗಳನ್ನು ರೂಪಕ್ಕಿಳಿಸುವದರಲ್ಲಿ, ದುರಂತ ತತ್ವವನ್ನು ವಿಮರ್ಶಿಸುವಲ್ಲಿ, ಅವರನ್ನು ಅನೇಕರು ಹಿಂಬಾಲಿಸಿದ್ದಾರೆ. ಅವರ ಪ್ರಗಾಥಗಳಾದರೂ ಆಂಗ್ಲ, ಗ್ರೀಕ ಸಾಹಿತ್ಯದ ಓಡು (Ode) ಗಳ ಓಟ, ರಭಸಗಳನ್ನು ಕನ್ನಡ ಧಾಟಿಯಲ್ಲಿ ತಂದಿವೆ. ಅವರ ಮುಖ್ಯ ಸಂಪಾದಕತ್ವದಲ್ಲಿ, ಪ್ರಚಾರಗೊಳ್ಳುತ್ತಿರುವ ಮೈಸೂರು ವಿಶ್ವವಿದ್ಯಾನಿಲಯದ ಕಾವ್ಯಸಂಗ್ರಹಗಳು ಕಾವ್ಯಾಭ್ಯಾಸದಲ್ಲಿ ನೂತನ ದೃಷ್ಟಿಯನ್ನುಂಟುಮಾಡುತ್ತಿವೆ. ಮೈಸೂರ ವಿಶ್ವವಿದ್ಯಾನಿಲಯದ ಲಘು ಪುಸ್ತಕಮಾಲೆಯಲ್ಲಿ ಬರುವ ಕವಿಕಾವ್ಯ ವಿಮರ್ಶೆಯ ಪುಸ್ತಕಗಳು ಕಿರಿದರಲ್ಲಿ ಹಿರಿದಾದ ಹಾದಿಯನ್ನು ಬಳಕೆಗೆ ತರುತ್ತಿವೆ. ಅವರ ಉಪನ್ಯಾಸಗಳು ಪ್ರಸ್ತಾವನೆಗಳು ಕನ್ನಡ ಭಾಷಾಭ್ಯಾಸಕ್ಕೆ ವಿಸ್ತಾರವನ್ನೂ ಆಳವನ್ನೂ ಎತ್ತರವನ್ನೂ ತಂದು ಶ್ರೀನಿವಾಸರು "ಶ್ರೀ"ಯವರನ್ನು 'ಕನ್ನಡಕ್ಕೆ ಕಣ್ವಮುನಿ' ಎಂದುದನ್ನು ಸಾರ್ಥಕ ಮಾಡುತ್ತಿವೆ. 'ಶ್ರೀ'ಯವರು ಮಾರ್ಗದರ್ಶಿಗಳು, ಮಾರ್ಗಕಾರರು. ಅವರ 'ಇಂಗ್ಲಿಷ್‌ಗೀತಗಳು' ಭಾಷಾಂತರಗಳಾದರೂ ಹೊಸ ಕನ್ನಡ ಭಾವಗೀತಗಳಿಗೆ ಮಾರ್ಗದರ್ಶಕ ಆಗಿವೆ.

'ಇಂಗ್ಲಿಷ ಗೀತಗಳು' ಪುಸ್ತಕರೂಪವಾಗಿ ಪ್ರಕಾಶಗೊಂಡು ಹದಿನಾಲ್ಕು ವರ್ಷಗಳಾದವು. ಅದಕ್ಕೂ ಮೊದಲು ಅದರ ಮಿಂಚು ಅಲ್ಲಿ ಇಲ್ಲಿ

ಹೊಡಕರಿಸಿತ್ತು. ಅವರೇ ಈ ಪುಸ್ತಕದ ಪ್ರಸ್ತಾವನೆಯಲ್ಲಿ ಹೇಳಿದಂತೆ ೧೯೧೯ ರಲ್ಲಿ, ೧೯೨೧ ರಲ್ಲಿ, ೧೯೨೬ ರಲ್ಲಿ ಈ ಗೀತೆಗಳೊಳಗಿನ ಮೂರು ಹನ್ನೆರಡು, ಇಪ್ಪತ್ನಾಲ್ಕು ಗೀತಗಳು ಪ್ರಕಟವಾಗಿದ್ದವು. • ಈ ಗೀತಗಳು ಮಾತ್ರ ೧೯೧೯ ರ ಪೂರ್ವದಲ್ಲಿಯೇ ರಚಿತವಾದವುಗಳು. 'ಭಾರತಮಾತೆ' ಎಂಬ ಗೀತವು ೧೯೧೪ ರದು. 'ಕನ್ನಡ ಮಾತು ತಲೆಯೆತ್ತುವ ಬಗೆ' ಯನ್ನು ಕುರಿತು ಅವರು ಧಾರವಾಡದಲ್ಲಿ ಉಪನ್ಯಾಸ ಮಾಡಿದುದು ೧೯೧೧ ರಲ್ಲಿ. ಮುದ್ದಣನ ವಿಷಯ ಅವರು ಬರೆದುದು ಅದಕ್ಕೂ ಬಹಳ ಹಿಂದೆ. 'ಶ್ರೀ'ಯವರ ಕನ್ನಡದ ಆರಾಧನೆಯು ಚಿಕ್ಕ ಪ್ರಾಯದಲ್ಲಿಯೇ ಪ್ರಾರಂಭ ವಾಗಿದೆ. ಯಾವ ಕನ್ನಡ ಹೃದಯದ ಸಂತೋಷಕ್ಕಾಗಿ ಇವರ ಆಂಗ್ಲ ಸಂಸ್ಕೃತಿಯನ್ನು ಅರಗಿಸಿಕೊಂಡ ಚಿತ್ತವು ಈ ಗೀತಗಳನ್ನು ಕನ್ನಡಿಸಿತೋ, ಆ ಕಾಲವು ಅವರ ಪ್ರಾಯದ ಇಪ್ಪತ್ತೈದರಿಂದ ಮೂವತ್ತರ ಒಳಗಿನದು ಎಂದು ತೋರುತ್ತದೆ. ಇಂಗ್ಲಿಷ್ ಗೀತಗಳ ಆರವತ್ತು ಮೂರರಲ್ಲಿ ಮೂವತ್ತು ಪ್ರಣಯದ ಪ್ರಪಂಚವನ್ನು ವಿಸ್ತರಿಸಿದ್ದು ಆಶ್ಚರ್ಯವಲ್ಲ. ಅವರ ಕವನ ಗಳನ್ನು ಮೊದಲಿಗೆ ಬೆಳಕಿಗೆ ತಂದವರು ಅವರೊಬ್ಬ ವಿದ್ಯಾಗುರುಗಳು. ಗೀತೆಗಳ ಸಮಗ್ರ ಸಂಗ್ರಹವನ್ನು ಪುರಸ್ಕರಿಸಿದವರು ಅವರ ಇನ್ನೊಬ್ಬ ವಿದ್ಯಾಗುರುಗಳು. ಪ್ರಬುದ್ಧ ಕರ್ನಾಟಕವೂ ಬೆಂಗಳೂರಿನ ಕರ್ನಾಟಕ ಸಂಘವೂ ಮೊದಲಾದುದು ಅವರ ವಿದ್ಯಾರ್ಥಿಗಳಿಂದ. ಆ ಸಂಘವೇ ಗೀತೆಗಳನ್ನು ಪ್ರಕಟಿಸಿತು. ಮೊದಲು ಆ ಸಂಘದಿಂದಲೇ ಶ್ರೀ. ಡಿ. ವಿ. ಗುಂಡಪ್ಪನವರ ಎರಡು ಕವನ ಸಂಗ್ರಹಗಳು ಪ್ರಕಟವಾಗಿದ್ದವು. 'ಶ್ರೀ'ಯವರ ಮಿತ್ರರಾದ ಇವರು ಈ ಗೀತಗಳಲ್ಲಿ ಇಪ್ಪತ್ನಾಲ್ಕನ್ನು ಬೆಳಕಿಗೆ ತಂದು ಕನ್ನಡನಾಡಿನಲ್ಲಿ ಇಂಥವರ ಕೃತಿಗಳನ್ನು ಹೆಚ್ಚಾಗಿ ನೋಡಬೇಕೆಂಬ ಆಶೆಯನ್ನು ಹುಟ್ಟಿಸಿ ದ್ದರು. ಶ್ರೀ. ಬೆಳ್ಳಾವೆ ವೆಂಕಟನಾರಣಪ್ಪನವರು ಗೀತೆಗಳ ಮುನ್ನುಡಿಯಲ್ಲಿ ಪ್ರೋತ್ಸಾಹಕವಾಗಿ ಶ್ರೀಕಂಠಯ್ಯನವರನ್ನು ಕನ್ನಡ ಅಭಿವೃದ್ಧಿಗೆ ಗಲಭೆ ಮಾಡದೆ ಶ್ರಮಿಸುತ್ತಿರುವ ಪಂಡಿತರೆಂದೂ ಹೆಸರುವಾಸಿಗೆ ಇಷ್ಟಪಡದೆ ಗೌಪ್ಯವಾಗಿ ಭಾಷಾಸೇವೆಯನ್ನು ಮಾಡುತ್ತಿರುವ ವಿದ್ವಾಂಸರೆಂದೂ ಬರೆದದ್ದುಂಟು. ಗೀತೆಗಳ ಪ್ರಕಟನೆಯ ಅನಂತರದಲ್ಲಿ ಅವರ ರುದ್ರನಾಟಕ ಗಳು, ಅವರ ಸಮ್ಮೇಲನಾಧ್ಯಕ್ಷತೆ, ಸ್ವಾಗತಾಧ್ಯಕ್ಷತೆ, ಪರಿಷತ್ತಿನ

ಉಪಾಧ್ಯಕ್ಷತೆ, ಅವರ ಸಂಚಾರ, ವಿಚಾರ, ಪ್ರಚಾರ ಇವೆಲ್ಲವೂ ಕೂಡಿ ಅವರ ಪಾಂಡಿತ್ಯ ವಿದ್ವತ್ತುಗಳೊಡನೆ ಸರಿಮಿಗಿಲೆನಿಸಿ ಬಂದ ತ್ಯಾಗ ಮತ್ತು ಕೃತಿಸಾಮರ್ಥ್ಯವೂ ಕಾರ್ಯಶಕ್ತಿಯೂ ಸಹಜವಾಗಿ ಗಲಭೆಯನ್ನುಂಟು ಮಾಡಿವೆ; ಸ್ವಾಭಾವಿಕವಾಗಿ ಹೆಸರುವಾಸಿಯನ್ನು ತಂದಿವೆ. ಅವರ ಪೂರ್ವದ ಗೋಪ್ಯಸ್ವಭಾವವು ಅವರ ಕೆಲ ವಿದ್ಯಾರ್ಥಿಗಳಲ್ಲಿ ಅವರು ಕನ್ನಡ ವನ್ನು ದುರ್ಲಕ್ಷಿಸುವರು ಎಂಬ ಅಪವಾದವನ್ನು ಹುಟ್ಟಿಸುವಂತಿತ್ತು, ಎಂದು ಹೇಳಿದರೆ ಆಶ್ಚರ್ಯವಾಗಿ ತೋರಬಹುದು. ಇಂದು ಅವರ ಮುಂದಾಳಿಕೆಯು ಕನ್ನಡವೊಂದೇ ಅವರ ಲಕ್ಷ್ಯವಿರುವಂತೆ ಕೆಲವರಲ್ಲಿ ಭ್ರಮೆಯುಂಟು ಮಾಡುವಂತಿದೆ. ಆದರೆ ಅವರ ಸಾಹಿತ್ಯಾಭ್ಯಾಸವೂ, ಕನ್ನಡದ ಮೇಲಿನ ಪ್ರೀತಿಯೂ ಮೊದಲಿಸಿಂದಲೂ ಬೆಳೆದುಕೊಂಡು ಬಂದಿವೆ. 'ಇಂಗ್ಲಿಷ್ ಗೀತೆಗಳು' ಒಬ್ಬ ಸಾಹಿತ್ಯ ಸಾಧಕನನ್ನಲ್ಲ, ಸಾಹಿತ್ಯಸಿದ್ಧನನ್ನು ಪ್ರಕಾಶ ಗೊಳಿಸಿದವು. ಅದರಲ್ಲಿ ಪ್ರಯೋಗಕ್ಕಿಂತ ಪರಿಣತಿಯ ಲಕ್ಷಣಗಳು ಹೆಚ್ಚಾಗಿವೆ.

ಇಂಗ್ಲಿಷ್ ಗೀತಗಳು ಸ್ವಯಂಸ್ಫೂರ್ತ ಕೃತಿಯಲ್ಲ; ಭಾಷಾಂತರಿತ ಕೃತಿ; ಅದರ ಮಹತ್ವ ಅಷ್ಟೇನು ಎಂದು ಕೆಲವರು ಕೇಳಬಹುದು. ಆದರೆ ಈ ಕೃತಿಯಲ್ಲಿಯೇ 'ಶ್ರೀ'ಯವರ ವ್ಯಕ್ತಿತ್ವದ ಲಕ್ಷಣಗಳಿವೆ. ಆಂಗ್ಲ ಸಾಹಿತ್ಯ ಸಂಸ್ಕೃತಿಯು ದೇಶೀಯ ಭಾಷೆಗಳಲ್ಲಿ ಬರುವಂತಾಗಬೇಕು. ಎಂಬದು ಆಂಗ್ಲವಿದ್ಯಾಭ್ಯಾಸದ ಉದ್ದೇಶಗಳಲ್ಲೊಂದಾಗಿತ್ತು. ಆ ಶಿಕ್ಷಣದ ಋಣತೀರಿಸಿ ಸಾರ್ಥಕತೆಯನ್ನು ಹೊಂದಿದ ಪ್ರಮುಖ ಸುಶಿಕ್ಷಿತರು 'ಶ್ರೀ' ಯವರು. ಅವರ ಗೀತಗಳ ಸಂಗ್ರಹವು 'ಯಾರು ಭಾರತ ಆಂಗ್ಲ ದೇಶಗಳ ಆತ್ಮಸಮ್ಮಿಲನದಲ್ಲಿ ನಂಬಿರುವರೋ ಅವರಿಗೆ' ಅರ್ಪಿತವಾಗಿದೆ. ಅವರಿಗೆ ಇಂಗ್ಲಿಷ ಭಾಷೆ, ಕನ್ನಡನುಡಿ— ಇವರಿಬ್ಬರೂ ಇನಿಯರು. ಇವಳ ಸೊಬಗು ಅವಳಿಗೆ, ಅವಳ ತೊಡಿಗೆ ಇವಳಿಗೆ ಇಟ್ಟು ನೋಡುವದು ಅವರಿಗೆ ದಿನದ ವಿಲಾಸ—ಎಂದು ಅವರ 'ಕಾಣಿಕೆ'ಯ ಕವನವೇ ಹೇಳುವದು. ಅದು ಅವರ ಸ್ವಂತಕವನ. ಇಂಗ್ಲಿಷು ಅವರ 'ಜೀವದುಸಿರು ಕಣ್ಣು' ಆಗಿರ ಬಹುದಾದರೂ ಭಾರತವೇ ಅವರಿಗೆ ಮಾತೆ. ಭಾರತ ಮಾತೆಯನ್ನು ಅವಳು ಎಂದು ತಲೆಯೆತ್ತುವಳೊ ಎಂದು ಸ್ವಯಂಸ್ಫೂರ್ತಿಯಿಂದ ಹಾಡಿ

ದ್ದಾರೆ. ತಾನು ಮೈಸೂರು ದೇಶದ ಮಗು, ಎಂಬುದನ್ನು ಅವರು ಮರೆಯು ಲಾರರು. ಅವರ ರಾಜಭಕ್ತಿ, ದೇಶಪ್ರೇಮ ಅವರನ್ನು ಹಾಡಹಚ್ಚಿದೆ. 'ಕನ್ನಡ ತಾಯಿನೋಟವು ಅವರಿಗೆ ಹಂಪೆಯಲ್ಲಿ ಕಂಡರೂ ಕನ್ನಡ ನುಡಿಯು ಅವರ ಜೀವವಿಣೆಯಾಗಿ ಮೊದಲಿನಿಂದಲೂ ಇದೆ. 'ಶ್ರೀ'ಯವರ ಪ್ರಾಯದ ಕಾಲವು ಸಮುದ್ರದಾಚೆ ಹೋದ ಚಿತ್ತವು ಈಚೆ ಬರುತ್ತಿದ್ದ ಕಾಲ. ಹೀಗಿದ್ದು ಈ ಕನ್ನಡ ಭಕ್ತನಿಗೆ ಇಂಗ್ಲಿಷದ ಊಳಿಗವೇ ದಿನದ ವೃತ್ತಿಯಾಗಿತ್ತು. ಈ ಒಳದೋಟಿಯಲ್ಲಿಯೇ ಅವರ ಕೃತಿಯ ಉಗಮವಿದೆ.

ಭಾಷಾಂತರವೆಂದಷ್ಟಕ್ಕೆ -- ಯಾವ ಸಾಹಿತ್ಯದಲ್ಲಿಯಾಗಲೀ, ಕನ್ನಡ ಸಾಹಿತ್ಯದಲ್ಲಂತೂ—ಕಡಿಮೆ ತಿಳಿಯುವ ಕಾರಣವಿಲ್ಲ, ಲಕ್ಷ್ಮೀಶನ ಜೈಮಿನಿ, ಕುಮಾರವ್ಯಾಸನ ಭಾರತ, ರುದ್ರಭಟ್ಟನ ಕೃತಿ, ನಾಗವರ್ಮನ ಕಾದುಂಬರಿ ಇವು ಕೆಲಮಟ್ಟಿಗಾದರೂ ಏನು? ಭಾಷಾಂತರಗಳಲ್ಲವೆ? ಅದರಿಂದ ಅವುಗಳ ಸಾಹಿತ್ಯಗುಣಕ್ಕೆ ಕೊರತೆಯೇ? ಆದರೆ ಅವುಗಳಲ್ಲಿ ಸ್ವತಂತ್ರ ಕೃತಿಯು ವಿಪುಲವಾಗಿದೆಯೆಂದೂ ಹೇಳಬಹುದು. ಅದು ನಿಜ. ಆಂಗ್ಲರ ಯುಗ ಬರುವ ಮುಂಚೆ ಶುದ್ಧ ಭಾಷಾಂತರಗಳ ಕಲೆ ಪರಿಣತವಾಗಿರಲಿಲ್ಲ. ಬಸವಪ್ಪ ಶಾಸ್ತ್ರಿಗಳ ಕೀರ್ತಿಯ ಕೆಲವು ಪಾಲು ಅವರ ಶಾಕುಂತಲಕ್ಕಿವೆ.ಅದು ಭಾಷಾಂತರ ಭಾಸ ನಾಟಕಗಳ ಭಾಷಾಂತರದಿಂದಲೇ ಅಳಸಿಂಗರಾಚಾರ್ಯರ ಪ್ರತಿಭೆ ಮಿಂಚಲಿಲ್ಲವೇ? 'ಶ್ರೀ'ಯವರು ಇಂಗ್ಲೀಷ ಭಾವಗೀತೆಗಳನ್ನು ಕನ್ನಡಿಸಿರುವಂತೆ ಬೇರೆಯವರು ಮಾಡಿದ್ದಾರೆ. ಬೇರೆ ಭಾಷೆಯಲ್ಲಿಯೂ ಇಂಥ ಪ್ರಯತ್ನಗಳಾಗಿವೆ. ಆದರೆ ನನಗೆ ಇದ್ದ ಸಾಹಿತ್ಯ ಪರಿಚಯದಿಂದ ಹೇಳುವದಾದರೆ ಇಂಗ್ಲೀಷ್ ಗೀತಗಳು ತನ್ನ ಮೊತ್ತದಿಂದಲೂ ಕಾವ್ಯಗುಣದಿಂದಲೂ ಶೈಲಿಯ ಸಮ್ಮಿತ್ವದಿಂದಲೂ ತನ್ನ ಜಾತಿಯಲ್ಲಿ ಆದರ್ಶವಾಗಿರುವಂತೆ ಈ ಗುಣಸಮುದಾಯವನ್ನು ನಾನು ಬೇರೆ ಕಡೆಗೆ ಕಂಡಿಲ್ಲ. ಕನ್ನಡ ಗೀತಗಳನ್ನು ಇಂಗ್ಲಿಷಿನ ಹದಕ್ಕೆ ಹವಣಿಗೊಳಿಸುವದು ಹಿತವಾಗಿರುತ್ತದೆಂದು ನನ್ನ ಆಂಗ್ಲ ಕವಿ ಮಿತ್ರರೊಬ್ಬರು ಹೇಳಿದರು. ಇಂಗ್ಲೀಷ್ ಗೀತಗಳನ್ನು ಛಂದದಲ್ಲಿಯೂ ಅಂದದಲ್ಲಿಯೂ ವಿಪರೀತವಾಗದಂತೆ ಪಾಕಕ್ಕಿಳಿಸಿದ ಕರ್ಮಕೌಶಲ್ಯವು ಈ ಗೀತಗಳಲ್ಲಿ ಕಂಡುಬರುವದು. ಭಾಷಾಂತರದ ಮೇಲ್ಮೆಯನ್ನು ಹೇಳುವಾಗ ಅದು ಸ್ವತಂತ್ರ ಕೃತಿಗಿಂತಲೂ ಕಷ್ಟತರವಾದ ಕಲೆ

ತಾನು ಬಳಸುವ ಭಾಷೆಯ ಜಾಯಮಾನದ ಮರ್ಮತಿಳಿಯುವ ಬಿನ್ನಾಣ, ಛಂದದ ಔಚಿತ್ಯ, ರಚನೆಯ ಪ್ರಸನ್ನತೆ, ಶಬ್ದದ ಶಯ್ಯೆ-ಇವುಗಳನ್ನು ಬಳಸುವ ಕೌಶಲ್ಯ ಇರಬೇಕು. ಅಂಥ ಸಿದ್ಧ ಹಸ್ತವು ಇಂಗ್ಲಿಷ್ ಗೀತಗಳಲ್ಲಿದೆ. ಅಂತೆಯೇ ಈ ಕೃತಿಯಲ್ಲಿ ಅಮೃತದ ಹನಿಯಿದೆ.

ಈ ಸಂಗ್ರಹದಲ್ಲಿ ಇರುವ ಗೀತಗಳು ಒಟ್ಟು ಅರವತ್ತು ಮೂರು. ಅದರಲ್ಲಿ 'ಶ್ರೀ' ಯವರ ಸ್ವಂತ ಕವನಗಳು ಮೂರು. ಎಲ್ಲಕ್ಕೂ ಹೆಚ್ಚೆಂದರೆ ಶೆಲ್ಲಿಯ ಒಂಬತ್ತು ಕವನಗಳು ಇಲ್ಲಿ ಕನ್ನಡಿಸಿವೆ. ಬರ್ನ್ಸನ ಏಳು ಕವನಗಳೂ ವರ್ಡ್ಸ್‌ವರ್ತನ ಐದು ಕವನಗಳೂ ಇಲ್ಲಿ ಎಡೆ ದೊರಕಿಸಿವೆ. ಬ್ರೌನಿಂಗ ಟೆನಿಸನ್, ಸ್ಕಾಟರ ಮೂರು ಮೂರು ಕವನಗಳೂ; ಶೇಕ್ಸಪೀಯರ್; ಸೌದೆ ಬೈರನ್, ಕ್ಯಾಂಬೆಲ್, ಕಾಪರ್ ಇವರ ಎರಡೆರಡು ಕವನಗಳೂ; ಬೇರೆ ಹದಿಮೂರು ಕವಿಗಳ ಒಂದೊಂದು ಕವನವೂ; ಐದು ಸ್ತ್ರೀಯರವೂ; ಎರಡು ಅನಾಮಿಕರವೂ-ಹೀಗೆ ಕವನಗಳ ಹಂಚಿಕೆಯಿದೆ. ಯುದ್ಧ, ಪ್ರೇಮ, ಮರಣ, ದೇಶಭಕ್ತಿ, ದೇವಭಕ್ತಿ ಪ್ರಕೃತಿ ಸೌಂದರ್ಯ, ಮಾನವ ಜನ್ಮದ ಸುಖದುಃಖಗಳು, ರಾಗದ್ವೇಷಗಳು, ಪುರುಷಾರ್ಥಗಳು, ಜನ್ಮಾಂತರದರ್ಶನಗಳು, ಇವೇ ಪ್ರಮುಖವಾದ ವಿಷಯಗಳನ್ನು ಕುರಿತು ಆಂಗ್ಲ ಭಾವಗೀತೆಯ ಭಂಗಿ ಭಣಿತಗಳನ್ನು ತೋರಿಸುವದು ಇವುಗಳಲ್ಲಾಗಿದೆ. ಇನ್ನೊಂದು ವಿಧದಲ್ಲಿಯೂ ಇವುಗಳನ್ನು ವಿಭಾಗಿಸಬಹುದು. ದೇಶಭಕ್ತಿಯನ್ನು ಕುರಿತು ಹದಿನೈದು, ಪ್ರಕೃತಿ ಸೌಂದರ್ಯವನ್ನು ಕುರಿತು ಆರು, ತಾತ್ವಿಕವಾದವು ಹನ್ನೆರಡು, ಉಳಿದ ಮೂವತ್ತು ಪ್ರಣಯ ಪ್ರಪಂಚಕ್ಕೆ ಸೇರಿದುವು. ಇದರೊಳಗಿನ ಕವನಗಳೆಲ್ಲ ಇಂಗ್ಲಿಷ ಕಾವ್ಯಮಾಲೆಯ ನಾಯಕ ರತ್ನಗಳೇನೂ ಅಲ್ಲವೆಂದು 'ಶ್ರೀ' ಯವರೇ ಹೇಳಿದ್ದಾರೆ. ಆದರೂ ಆಂಗ್ಲ ಕಾವ್ಯಮಾಲೆಯ 'ಸ್ವರ್ಣ ಭಂಡಾರ' (Golden Treasury), ಸಾವಿರದೊಂದು ರತ್ನಗಳು (Thousand and one Gems)—ಇವೇ ಮೊದಲಾದವುಗಳ ಅಭ್ಯಾಸ ಫಲದಿಂದ ಈ ಗೀತಗಳು ಬಂದಿರುವದರಿಂದ ಇಲ್ಲಿ ಬೀಕಲು ಫಲ ಒಂದೂ ಇಲ್ಲ. ಇಲ್ಲಿಯ ಪ್ರಣಯ ಗೀತೆಗಳ ಧಾಟಿಯಲ್ಲಿ ಅದರದರ್ಥ ತನ್ನದರ್ಥ ಎಂಬದನಿ ಕೇಳಬರುವದು. ಉಳಿದ ಪದ್ಯಗಳಲ್ಲಿಯೂ ಹಾಗೆಯೇ. ವರ್ಡ್ಸ್‌ವರ್ತನು 'ಮುದ್ದು ಕುರಿಮರಿ' ಎಂಬ ಪದ್ಯದಲ್ಲಿ 'ಪದವದೊಳವಳದರ್ಥ

ಮಾತ್ರ ಅರ್ಥ ನನ್ನದೆನಿಸಿತು.' ಹೀಗೆ ಹೇಳಿರುವನಷ್ಟೇ. 'ಶ್ರೀ' ಯವರು ನಿಃಶಂಕವಾಗಿ ಈ ಕವನಗಳಲ್ಲಿ ಅರ್ಥಭಾವ ತನ್ನದು ಎಂದು ಹೇಳಲು ಅಡ್ಡಿಯಿಲ್ಲ. ಇಲ್ಲಿಯ ಕಾವ್ಯರಸದಲ್ಲಿ ಇವರ ಜೀವನರಸವು ಬೆರೆತು ಆದ ಹೊಸ ರಸಾಯನಕ್ಕೆ ಬೇರೊಂದು ರುಚಿಯೇ ಬಂದಿದೆ.

ಈ ಗೀತ ಸಂಗ್ರಹದ ವಸ್ತುರಚನೆಯಲ್ಲಿಯೂ ಒಂದು ತತ್ವವು ಧ್ವನಿತವಾಗುತ್ತದೆ. ಒಂದರ ಹಿಂದೊಂದು ಬರುವ ಈ ಗೀತಗಳಲ್ಲಿ—ರಾಗಮಾಲಿಕೆಯಂತೆ ಸಂಗತಿಯಿದೆ; ಸಂವಾದವಿದೆ. ಮಾನವಭಾವಗಳೇ ಇಲ್ಲಿ ಇಂಗ್ಲಿಷಿನ ಮಾಟ ಬೆಡಗನ್ನು ತೊಟ್ಟಿದ್ದರೂ ಕನ್ನಡದ ಒಪ್ಪ ಧಾಟಿಯಲ್ಲಿ ನಡೆಯುತ್ತಿವೆ. ಭಾಷಾಂತರಕಾರರನ್ನು ಎರಡು ಹಿಂಡಿರಕಾಟದಿಂದ ಪೀಡಿತರಾದವರಿಗೆ ಹೋಲಿಸುವವರು ಹೋಲಿಸಲಿ. ಇಬ್ಬರು ಪ್ರಿಯತಮೆಯರೊಡನೆ ಸಮಾನಭಾವದಿಂದ ಸರಸವಾಡುವ ರಸಿಕನ ವಿಲಾಸದ ಹೋಲಿಕೆಯಿಂದ ಇಲ್ಲಿಯ ಕಾವ್ಯದ ಕಾಣಿಕೆ ಹೆಜ್ಜೆಯಿಕ್ಕುವದು. ಕಾಣಿಕೆಯ ಬಾಗಿಲು ತೆರೆದೊಡನೆಯೇ ಪ್ರಕೃತಿ ಸೌಂದರ್ಯದ ಗೀತಗಳ ಆಲಾಪನೆ ಕೇಳಬರುವದು. 'ಮುದ್ದಿನ ಕುರಿಮರಿ'ಯ ಚೆಲ್ಲಾಟವು, ಬಾನಾಡಿಯ ಹಾರಾಟವು ನಮ್ಮನ್ನು ನೆಲದೆಡೆಯಿಂದ ಸ್ವರ್ಗದ ಅಂತರಂಗಕ್ಕೊಯ್ಯುವದು. ಜೀವನ ಬರಿಯ ವಿಲಾಸಗೃಹವಲ್ಲ; ಕಾಳಗದ ಕಳ. ಕಾಳಗವು ಬರಿಯ ರೌದ್ರದ ರಣಾಂಗಣವಲ್ಲ; ಉತ್ಸಾಹದ ನೃತ್ಯರಂಗ; ತಾಂಡವದ ವಿರಾಟಗೃಹ. ಕಾಳಗದ ಗುರಿಯೇನೊ ವಿಜಯವೇ ಹೌದು. ಆದರೆ ವೀರ ಮರಣದಿಂದ ವಿಭೂಷಿತವಾಗದ ರಣವು ನೈವೇದ್ಯ ಪ್ರಸಾರಗಳಿಲ್ಲದ ಪೂಜೆಯಂತೆ. ಅದು ಐಚ್ಛಿಕವಲ್ಲ, ಅನಿವಾರ್ಯ. ಆದರೂ ಆ ಅನಿವಾರ್ಯದಲ್ಲಿ ಅಗತಿಕತೆಯಿಲ್ಲ; ಸ್ವಚ್ಛಂದ ವಿಹಾರವಿದೆ. ವೀರಗಲ್ಲುಗಳಿಂದಲೇ ಕನ್ನಡನಾಡಿನ ಕಟ್ಟಡ ಆಗಿರುವಾಗ ಅದರ ಮಹತ್ವ ಕನ್ನಡಿಗರಿಗೆ ಬೇರೆ ಹೇಳಬೇಕಾಗಿಲ್ಲ. ಈ ಉತ್ಸಾಹ, ರೌದ್ರ, ಕಾರುಣ್ಯಗಳ ಮಧ್ಯದಲ್ಲಿ ಬ್ಲೇನ್‌ಹಿಮ್ ಕದನದ ಲಾವಣಿಯು, ದೇಶ ಸೇವಕನ ಹಾಡು ಬೇರೊಂದು ವ್ಯಂಗ್ಯವಿಲಾಸದಿಂದ ನಮ್ಮನ್ನು ಎಚ್ಚರಗೊಳಿಸುವವು. ಇಲ್ಲಿಯ ದೇಶಪ್ರೇಮದ ಗೀತೆಗಳು ಇಂಗ್ಲ್ಯಾಂಡ ದೇಶವನ್ನು ಕುರಿತವುಗಳಾದರೂ ಅಲ್ಲಿಯ ಹುರುಡು ಮಾನವರಿಗೆಲ್ಲರಿಗೂ ಸ್ವಾಭಾವಿಕವಾದುದು. ಯಾವ ದರ್ಪಕ್ಕೂ ಬಗ್ಗದ ಯಾವ ದುಃಖಕ್ಕೂ ತಗ್ಗದ 'ಬಡವನ ಹುರುಡು'

ಉತ್ಸಾಹಗೀತದ ಜೀವಸ್ವರವಾಗಿ ನುಡಿಯುವದು. ಆ ಮೇಲೆ ಪ್ರೇಮದ ಹಾಡುಗಳಿಗೆ ಪ್ರಾರಂಭವಾಗುವದು. ಹೌದು: ಗೆಲುವಿನ ಮನೆಯಲ್ಲಿ ಪ್ರಣಯ ಒಂದು ಕ್ರೀಡೆ, ಲೀಲೆ. ಉಳಿದಲ್ಲಿ ಅದು ಆವೇಶ, ಹುಚ್ಚು. ಪೂವಮಾದಿ, ಕನಕಾಂಗಿ, ಮುದಿಯ ರಾಮಗೌಡ, ದುಃಖಸೇತು, ಕಾರಿಹೆಗ್ಗಡೆಯ ಮಗಳು ಚೋಳ ಕನ್ನಿಕೆಯರು—ಇವು ಆ ತಂಬೂರಿಯ ತಂತಿಗಳು. ಇವುಗಳ ಮಧ್ಯದಲ್ಲಿ ತಾನವಿತಾನವಾಗಿ ಬರುವದು ಪ್ರಣಯದ ಮುಗ್ಧಮನೊಹರ ಭಾವಲಹರಿ. 'ಪದುಮ' ಅರೆಯಾವುದಿಲ್ಲ' ಎಂಬ ಗೀತೆಗಳು ಈ ಪ್ರಣಯದ ಚಿತ್ರಕ್ಕೆ ವಿರಹದ ಕುಂಚವನ್ನೆಳೆಯುವವು. ಮುಂದೆ ಬರುವ ಪದ್ಯ ಇರುಳು ದೇವಿಯನ್ನು ಕುರಿತು. ಇಲ್ಲಿಂದ ಮುಂದೆ ಬೆಳಕು ಕತ್ತಲೆಗಳ ನೆರಳು ಬಿಸಿಲಾಟಕ್ಕೆ ಪ್ರಾರಂಭವಾಗುವದು. ಹಳೆಯ ಗೆಳೆಯರ ಮುಖಗಳು ಚಿತ್ತದ ಚಿತ್ರಶಾಲೆಯಲ್ಲಿ ಹಾಯ್ದು ಹೋಗುಗವು. ಪರಲೋಕದ ಸದ್ದು ಕಿವಿಗೆ ಬೀಳುವದು. ಬೇರೊಂದು ಕಡಲು ಹೋಯ್ಯುವದು, ನೆಮ್ಮದಿಗೆಯ ನಾಡ ಕನಸು ಕಾಣುವದು, ಪೆಡಸು ದಾರಿಯ ಬಿರುಸು ಕಾಲೊತ್ತುವದು. ಆದರೆ ಜೀವನವೇನೊ ತಟಕ್ಕನೆ ಸಾವಿನ ತಿರುಗಣೆಗೆ ನೆಗೆಯುವದಿಲ್ಲ. ಹಾಗೂ ಹೀಗೂ ಎರಡು ಮನಸ್ಸು ಆಗುವದುಂಟು. ಹೋರಾಟದಲ್ಲಿಯೂ ಸವಿ ತೋರುವದುಂಟು. ಸತ್ತರೂ ಸಾಯದಿರುವ ಸಾಹಿತಿಗಳ ಸಂಗತಿಯು ಬೇರೊಂದು ಸಮಾಧಾನ ತರುವದು. ಸುಖಜೀವನ ತತ್ವವು ಮುಕ್ತನ ಆತ್ಮತೃಪ್ತಿಯ ಮರ್ಮವನ್ನು ಹೇಳುವದು. ಜೀವನದಲ್ಲಿ ಸುಖದ ಕನಸು ತೀರ ಎಟುಕದ ಬದುಕಲ್ಲ ಎಂದು ಹೊಳೆಯುವದು. ಆದರೂ ಅಸ್ತಮಾನಕ್ಕೆ ಹೊರಟ ಜೀವವು ಪ್ರಾರ್ಥನೆಗಳಿಗೆ ಶರಣು ಹೋಗುವದು ಕರುಣಾಳು ಬೆಳಪಿನಲ್ಲಿ ನಂಬುಗೆ ಊರುವದು. ವೀರಜನ್ಮದ ಸೊಗಸು ಜೀವನವನ್ನೇ ಆವರಿಸುವದು ಗೀತಗಳಿಗೆ ಇರುವಂತೆಯೇ ಜೀವನಕ್ಕೂ ಇದು ಒಳ್ಳೆಯ ಮುಕ್ತಾಯ. ಹೀಗೆ ಗೀತಗಳನ್ನು ಜೋಡಿಸಿರುವದೇ 'ಶ್ರೀ' ಯವರ ಜೀವನ ಪ್ರಗಾಥ, ಸ್ಫೂರ್ತ ಕವನ, ಇದರಲ್ಲಿ ವ್ಯಕ್ತಿತ್ವದ ಅಭಿವ್ಯಕ್ತಿಯಿದೆ. ಸಂಗ್ರಹದ ಕೊನೆಗಿರುವ ಎರಡು ದೇಶಭಕ್ತಿಯ ಗೀತೆಗಳು 'ಶ್ರೀ' ಯವರ ಕಂಠಕ್ರಿಯ ಪ್ರವಾಹಗಳು. ಇವುಗಳನ್ನು ಬರೆದು ಕವಿ ಸ್ವಂತವಾಗಿ ಏನನ್ನು ಬರೆಯಲಾರ? ಆದರೆ ಅವರಿದ್ದ ಕಾಲ ವ್ಯಂಗ್ಯ ಮರ್ಯಾದೆಯ ಕಾಲ.

ಇನ್ನೊಬ್ಬರ ಬಾಯಿಂದ ತನ್ನ ಭಾವವನ್ನು ಹೊರಪಡಿಸಿಕೊಳ್ಳುವಲ್ಲಿ ಸೊಗಸು ಕಾಣುವ ಕಾಲ. 'ಶ್ರೀ' ಯವರ ಉಳಿದ ಅನೇಕ ಕೃತಿಗಳೂ ಹೀಗೆಯೇ. ಸ್ವತಂತ್ರವೆಂದರೆ ಸ್ವತಂತ್ರ; ಪರತಂತ್ರವೆಂದರೆ ಪರತಂತ್ರ. ಆದರೆ ಕಡೆಗೂ ತನ್ನ ಮುದ್ರೆಯೊತ್ತಿ ತನ್ನದನ್ನಾಗಿ ಮಾಡಿಕೊಳ್ಳುವ ಕೌಶಲ್ಯ ಬೇರುವವು/

\ಈ ಗೀತಗಳ ಸಂಗ್ರಹದ 'ಮುನ್ನುಡಿ,' 'ಅರಿಕೆ'ಗಳಲ್ಲಿ ಇವುಗಳ ಕೆಲವು ವೈಲಕ್ಷಣ್ಯಗಳು ಹೇಳಲಾಗಿದೆ. ಮೂಲ ಕವನಗಳ ಭಾವರಸಗಳು ಇವುಗಳಲ್ಲಿ ಬಹಳ ಮಟ್ಟಿಗೆ ಉಳಿದಿವೆಯೆಂದೂ ಇವು ಕನ್ನಡಕ್ಕೆ ಸ್ವಾಭಾವಿಕವಾಗಿರುವಂತೆ ಪರಿವರ್ತಿಸಲಾಗಿರುವವೆಂದೂ, ಇಲ್ಲಿಯ ಭಾಷೆ ಲಲಿತವೆಂದೂ ಇಲ್ಲಿಯ ಛಂದಸ್ಸು ಇಂಗ್ಲಿಷನ್ನು ಹೋಲುವದೆಂದೂ ಹೇಳಿದ್ದಾಗಿದೆ. ಅದೆಲ್ಲವೂ ನಿಜ. ಬಿಂಬ ಪ್ರತಿಬಿಂಬವಾಗಿ ಈ ಕವನಗಳು ರಚಿತವಾಗಿವೆಯನ್ನುವಾಗ, ಇವುಗಳನ್ನು ಕನ್ನಡಿಸಿದ್ದಾರೆ ಎಂದು ಹೇಳಿದರೆ ಅದೂ ಒಂದು ಔಚಿತ್ಯವೆ. ಮೂಲ ಕವಿಗಳ ವ್ಯಕ್ತಿತ್ವವನ್ನೆ ಇವುಗಳಲ್ಲಿ ಅನುಸರಿಸಲಾಗಿದೆ ಎಂದು ಹೇಳಲಾಗಿದೆ. ರಾವುತರ ದಾಳಿ, ಕಾಳಗದ ಪದ ವೀರಜನ್ಮ, ಹೊಯ್ ಹೊಯ್—ಈ ಮೊದಲಾದ ಕವನಗಳಲ್ಲಿ ವ್ಯಕ್ತಿತ್ವವೇನೋ ಇದೆ. ಆದರೆ ಅದು ಕಾವ್ಯ ವೃತ್ತಿಗಳ ವಿಲಾಸ. 'ಶ್ರೀ'ಯವರ ಶೈಲಿಯ ಸಾಮ್ಯವು ಇವೆಲ್ಲವುಗಳಲ್ಲಿಯೂ ಕಂಡು ಬರುವದು. ವ್ಯಕ್ತಿವೈಷಮ್ಯವಿದ್ದರೆ ಅದು ಕಲೆಯ ಭ್ರಾಂತಿ ಮಾತ್ರ. ಈ ಕವನಗಳಲ್ಲಿ ಅರ್ಧಕ್ಕರ್ಧ ಶೃಂಗಾರಕ್ಕೆ ಸೇರಿದವು. ಇಂಗ್ಲಿಷ ಕವಿಗಳು ಶೃಂಗಾರರಸವನ್ನು ಹೇಗೆ ಗಂಭೀರವಾಗಿಯೂ ಸೂಕ್ಷ್ಮವಾಗಿಯೂ ಸ್ವಾಭಾವಿಕವಾಗಿಯೂ ತೋರಿಸಿರುವರೆಂಬುದನ್ನು ತಿಳಿಸುವದಕ್ಕಾಗಿ ಅವುಗಳನ್ನು ಹೆಚ್ಚಾಗಿ ಸೇರಿಸಿದೆಯೆಂದು 'ಶ್ರೀ'ಯವರು ಹೇಳಿದ್ದಾರೆ. ಕನ್ನಡದ ಜಾನಪದ ಗೀತೆಗಳಲ್ಲಿ ಇದೇ ಗಾಂಭೀರ್ಯ, ಸೂಕ್ಷ್ಮತೆ, ಸ್ವಾಭಾವಿಕತೆ ಕಂಡು ಬರುವದು. ನಮ್ಮ ಮಹಾಕಾವ್ಯಗಳಲ್ಲಿಯ ಶೃಂಗಾರದಲ್ಲಿ ಮಾತ್ರ ರಾಣೀವಾಸದ ಬಿಗುಮಾನ, ಸಾಂಸ್ಕೃತಿಕ ಸೌಂದರ್ಯ ಸಾಮಯಿಕ ಉತ್ತಾನತೆಗಳೊಡನೆ ವೇಶ್ಯಾವಾಟದ ಹಗರಣದ ಸರಸವೂ ನಿರಂಕುಶ ವ್ಯಂಗ್ಯವೂ ದೇಶೀಯಧ್ವನಿಯೂ ಕಂಡುಬರುವದು.|\ದೇಶೀಯ ಪುನರುದ್ಧಾರದ ಕಾಲದಲ್ಲಿ ಈ ಆಂಗ್ಲ ಶೃಂಗಾರದ ಭಾವಗೀತೆಗಳು ನಮ್ಮ

ದೇಶೀಯ ಸೊಬಗನ್ನ ಮತ್ತೆ ನೆನಪಿಗೆ ತಂದುಕೊಟ್ಟದ್ದು ಹೊಸ ಕವನಗಳಿಗೆ ಉಪಕಾರವಾಯಿತು.) ಈ ಗೀತೆಗಳ ನಿಜವಾದ ಮೇಲ್ಮೆಯೆಂದರೆ ಅದರ ಶೈಲಿಯ ಪಾಕ ಶಯ್ಯೆಯಲ್ಲಿಯೂ, ಅದರ ಛಂದದ ಕುಣಿತ ಮಣಿತಗಳ ಲ್ಲಿಯೂ ಇದೆ. ಈ ಎರಡು ಮಾತಿನಲ್ಲಿ ಈ ಸಂಗ್ರಹವು ಉಳಿದಾವ ಸ್ವಂತ ಕೃತಿಗಳಿಗೂ ಹಿಮ್ಮೆಟ್ಟುವಂತಿಲ್ಲ.

ಇಲ್ಲಿಯ ಶೈಲಿ ಕನ್ನಡ ಶೈಲಿಯೆಂದು ಹೇಳಿದರೆ 'ಅದೇನ- ಮಹಾ!' ಎಂದು ತೋರಬಹುದು. 'ಅಶ್ವತ್ಥಾಮನ್' ಕೃತಿಯೂ ಕನ್ನಡವಷ್ಟೆ. ಆದರೆ ಆ ಕನ್ನಡಕ್ಕೆ ಏನಾದರೂ ವಿಶೇಷಣವನ್ನು ಹಚ್ಚಬೇಕಾಗುತ್ತದೆ ನೀರಿಳಿಯದ ಗಂಟಲಲ್ಲಿ ಕಡುಬನ್ನು ತುರುಕಬಾರದು ಎಂದು ಹೇಳಿದ ಮುದ್ದಣನ ರಾಮಾಶ್ವಮೇಧವೂ ಕನ್ನಡವಷ್ಟೆ! ಆದರೆ ಆ ನೀರನ್ನು ಕುಡಿಯ ಬೇಕಾದರೆ ಸ್ವಲ್ಪ ಸಿದ್ಧತೆ ಮಾಡಬೇಕಾಗುತ್ತದೆ. ಪಾಂಡಿತ್ಯದ ಕನ್ನಡವು ಪೌರಾಣಿಕರ ಕನ್ನಡದಂತೆ ಪ್ರತ್ಯಯಗಳ ಮುದ್ರೆ ಹೋದರೆ ಮೂಲವಾ- ವುದೊ ಹೇಳುವದು ಕಷ್ಟ. ಕನ್ನಡದ ಜಂಭದಲ್ಲಿ ಕಬ್ಬಿಗರ ಕಾವ ವಾಚಕರ ಜೀವ ಹಿಂಡಿದ್ದುಂಟು. ಆದರೆ ಇಂಗ್ಲಿಷ ಗೀತೆಗಳ ಕನ್ನಡವು ಬಳಕೆಯ ಕನ್ನಡ. ಅಲ್ಲಿಯ ಸಂಸ್ಕೃತವೂ ತದ್ಭವವೂ ಕನ್ನಡಕ್ಕೆ ಸಂವಾದಿಯಾಗುವ ಜಾತಿ- ಯದು. ಇಂಗ್ಲಿಷ್ ಗೀತೆಗಳ ಯಾವ ಪುಟವನ್ನೂ ತೆರೆದು ಅಲ್ಲಿಯ ನುಡಿಗಡಣವನ್ನು ಹುಂಚಿನೋಡಿದರೆ ಈ ಮಾತು ಅನುಭವಕ್ಕೆ ಬರುವದು. ಎಂಬತ್ತೊಂದನೆಯ ಪುಟದಲ್ಲಿ ಬರುವ 'ದುಃಖಸಮಯ' ಎಂಬ ಎಂಟು ಹತ್ತು ಸಾಲಿನ ಕವನದಲ್ಲಿ ಹದಿನೈದು ಸಂಸ್ಕೃತ ಶಬ್ದಗಳಿವೆ. ಆದರೆ ಅವು— ಹೃದಯ, ಸಮಯ, ಕಾಲ, ಲೋಕ, ಜನ್ಮ, ವಸಂತ—ಇಂಥ ತೀರ ಬಳಕೆ ಯವು. ಎಂಬತ್ತೆಂಟನೆಯ ಪುಟದಲ್ಲಿ ಬರುವ ಹದಿನಾರು ಸಾಲಿನ ಪದ್ಯದಲ್ಲಿ ಕನ್ನಡವಲ್ಲದ ಪದಗಳೆಂದರೆ ಎರಡು ಮಾತ್ರ. ಅವು 'ಗಂಭೀರ ಎಂಬ ಸಂಸ್ಕೃತ ಪದ; 'ಸಿರಿ' ಎಂಬ ತದ್ಭವದ ಪದ. ಗೀತಗಳನ್ನು ಬಿಟ್ಟು ಕಂದ ಗಳಿಗೆ ಇಳಿದ ಕೂಡಲೆ ಸಂಸ್ಕೃತವು ತಾನಾಗಿಯೇ ನುಸುಳಿಕೊಳ್ಳುವದೋ ಏನೋ ಎನ್ನುವಂತೆ 'ಶ್ರೀ'ಯವರು ಇಂಗ್ಲಿಷ ಗೀತಗಳಿಗೆ ಮುಖವಾಗಿ ಬರೆದ 'ಸರಸ್ವತಿ ಸ್ತುತಿಯ ಒಂದು ಕಂದದಲ್ಲಿ ಏಳು ಸಂಸ್ಕೃತ ಪದಗಳಿವೆ. ಹೀಗೆ ಶೈಲಿಯನ್ನು ಬರೆದಿಡುವದು ಕೆಲವರಿಗೆ ರುಚಿಯಾಗಿ ತೋರಲಿಕ್ಕಿಲ್ಲ. ಆದರೂ

ಗೀತಗಳ ಕನ್ನಡವು ಹೊಸ ಸಾಹಿತ್ಯಕ್ಕೆ ಹದವಾದ ಕನ್ನಡವೆಂದು ಹೇಳಿ ಬಹುದಾದರೆ ಅದು ಸಾಮಾನ್ಯವಾಗಲಿಲ್ಲ. ಅದು ಸ್ವೀಕರಣೀಯವೂ ಅನು ಕರಣೀಯವೂ ಆದ ಶೈಲಿ. ಅದು ಅಚ್ಚಗನ್ನಡ. ಅದು ದೇಸಿ.

ಈ ಗೀತೆಗಳ ಛಂದವು ಕೂಡ ಕಂದವೃತ್ತಗಳ ಪರಂಪರೆಯವರಿಗೆ ಹಾದಿ ಬಿಟ್ಟದ್ದಾಗಿ ತೋರಬಹುದು. ಮತ್ತೆ ಕೆಲವರಿಗೆ ಇಲ್ಲಿಯ ಛಂದ ಗಳೆಲ್ಲ ರಗಳೆ ಷಟ್ಪದಿಗಳಲ್ಲಿ ಕಂಡುಬರುವ ಮೂರು, ನಾಲ್ಕು, ಐದು ಮಾತ್ರೆ ಗಳ ಗಣಗಳಿಂದ ಕಟ್ಟಿದವುಗಳೆಂದೂ ತೋರಬಹುದು. ಆದರೆ ಅವುಗಳಲ್ಲಿ ಹುದುಗಿರುವ ಜಾನಪದಗೀತ ಸಹಜವಾದ ಸ್ವಚ್ಛಂದ ವಿಹಾರವು ಅವುಗಳ ವೈಲಕ್ಷಣ್ಯವಾಗಿದೆ. 'ಬಿಂಕದ ಸಿಂಗಾರಿ'ಯ ಜಾನಪದ ದೇಶಿಯ ಗತ್ತು 'ಮೈಸೂರ ಮಕ್ಕಳ'ಲ್ಲಿ ಬರುವ ಉದ್ದ ಸಾಲಿನ ಅಂದ, 'ಭರತಮಾತೆಯ ಯ ಕೋಲಿನ ಹಾಡಿನ ಗತಿ, 'ಪೆಡಸುದಾರಿ', 'ಚೋಳಕನ್ನೆಯರು',— ಇವುಗಳ ಚಿತ್ರಗತಿ, 'ರಾವುತರ ದಾಳಿ'ಯ ನುಗ್ಗಾಟ. 'ಕಾಳಗದ ಪದ'ದ ಹೆಜ್ಜೆಕುಣಿತ, ತಮ್ಮಟದ ತಾಳ,—ಇವು ಒಂದೊಂದೂ ಒಂದೊಂದು ಗತ್ತನ್ನು ತೋರಿಸುವವು. ಸಕೃದ್ದರ್ಶನಕ್ಕೆ 'ಮದ್ದಿನ ಕುರಿಮರಿ', 'ಮುದಿಯ ರಾಮಗೌಡ' ಇವೆರಡೂ ತ್ರಿಮಾತ್ರಕಗಳಾಗಿ ಕಾಣಬಹುದು. ಆದರೆ 'ಮುದಿಯ ರಾಮಗೌಡ'ದಲ್ಲಿ ಮೂರು ಮಾತ್ರೆಯ ಗಣವನ್ನು ನಾಲ್ಕು ಮಾತ್ರೆಗಳಾಗಿ ಎಳೆದು ಹೇಳಬೇಕು ಎಂಬ ಸೂಚನೆಗಳು ಕವನದಲ್ಲಿಯೇ ಇವೆ. 'ದುಃಖಸಮಯ' ಎಂಬ ಗೀತದಲ್ಲಿ ಭಾಮಿನೀ ಗತಿಯು ವಿಲಂಬಿತ ವಾಗಿ ಹೊಸದೊಂದು ಅಂದವನ್ನು ಬೀರುವದು. 'ಪ್ರೇಮದ ಸಂಕಟ'ಎಂಬ ಕವನದ ಮೊದಲನೆಯ ನುಡಿಯ ಛಂದದ ಔಚಿತ್ಯದ ಮುಂದೆ ಉಳಿದ ನುಡಿಗಳು ಮಂಕಾಗಿ ತೋರುವವು. ತ್ರಿಪುಡೆಯ ಗತಿಯ ಭಿನ್ನ ವಿಲಾಸ ವನ್ನು ನೋಡುವವರಾದರೆ 'ಬಾನಾಡಿ' ಯನ್ನು 'ಹಳೆಯ ಪಳಕೆಯ ಮುಖ ಗಳೊಂ'ದಿಗೆ ಹೋಲಿಸಿ ಬಿಡಿಸಿ ನೋಡಬೇಕು. 'ಮಾದ ಮಾದಿ'ಯಲ್ಲಿ 'ಹಷ್ಟ' ಎಂಬ ಅತಿ ಮಾತ್ರೆಯೂ 'ದುಃಖಸೇತು'ವಿನಲ್ಲಿಯ ಮೊದಲನೆಯ ಸಾಲಿನಲ್ಲಿ ಬರುವ ಹೆಚ್ಚಿನ ಆಕಾರವೂ ಅಲ್ಲಿಯ ಗತಿಗೆ ತರುವ ಸೊಗಸೇ ಬೇರೆ. 'ಕಾಳಗದ ಪದ'ವಂತೂ ಛಂದೋಗತಿಯ ವಿವಿಧ ಭಂಗಿಗಳಿಂದ ತುಂಬಿದೆ. ಅಲ್ಲಿಯ ತಾಳ ಯತಿಗಳ ಆಂದೋಲನವು ಅತಿ ಹೃದಯಂಗಮ

ಹಾಗಿದೆ. ಉತ್ಸಾಹಕ್ಕೆ ಉಚಿತವಾಗಿದೆ. ಎರಡೂ ಮಾತ್ರೆಯ ಗಣವನ್ನು ಮೂರು ಮಾತ್ರೆಯ ಗಣವಾಗಿ ಹಿಗ್ಗಿಸುವದೂ, ಐದು ಮಾತ್ರೆಯ ಗಣವು ಮೂರು ಮಾತ್ರೆಯ ಎರಡು ಗಣಗಳಾಗಿ ಒಡೆಯಲಿಕ್ಕೆ ಬರುವಂತಾಗುವದೂ ಜಾನಪದ ರೀತಿಯನ್ನು ನೆನಪಿಗೆ ತರುವದು. 'ಬಿಂಕದ ಸಿಂಗಾರಿ'ಯಲ್ಲಿಯೂ 'ಪೆಡೆಮದಾರಿ', 'ಜೋಳ ಕನ್ನೆಯರು' ಈ ಕವನಗಳಲ್ಲಿಯೂ ಕೆಲ ವೊಂದೆಡೆಗೆ ಬರುವ ನಿಯತ ಗುರುತ್ವವು ಮಾತ್ರಾಛಂದದಲ್ಲಿ ಅಕ್ಷರಗಣದ ಅಂದವನ್ನು ಸೂಸುವದು. 'ಬ್ಲೆನ್‌ಹಿಮ್ ಕದನ' ಎಂಬ ಕವನದಲ್ಲಿ ಅನೇಕ ಕಡೆಗೆ ಬರುವ ತಾಳದಾದಿಯ ದೀರ್ಘವು ಅಲ್ಲಿಯ ನೀಲಾಂಬರಿಯ ಆಲಾಪನೆಗೆ ಹವಣಾಗುವದು. 'ಇಂಗ್ಲಂಡ ನಾವಿಕರು' ಎಂಬ ಕವನದ ಛಂದದೋಜಸ್ಸು, ಮುರಿತ ತಿರುವುಗಳಂದ, ಗಮಕದಿಂದಲೇ ಪ್ರಕಟವಾಗ ಬೇಕು. 'ಮುಪ್ಪು ಯೌವನ', 'ಬಡವನ ಹುರುಡು', 'ವೀರಜನ್ಮ' ಇವುಗಳಲ್ಲಿ ಬರುವ ನಾಟ್ಯಕಾಕುಸ್ವರವು ಗಮಕಕ್ಕೆ ಸೇರಿದ್ದಾಗಿರುವದರಿಂದ ಅದು ಛಂದಸ್ಸಿನ ಅಂದದ ಭಾಗ. ಹೀಗೆಯೇ ಇಲ್ಲಿಯ ಛಂದೋಬಂಧ ವನ್ನು ಕುರಿತು ವಿಸ್ತಾರ ಮಾಡಬಹುದು. ಆದರೆ ಈ ದಿಗ್ದರ್ಶನವು ಅವರ ನೋಲ್ಮೆಯನ್ನು ತೋರಿಸಲು ಸಾಕು.

ಈ ಗೀತಗಳ ಕೊರತೆ ಎಂದು ಒಂದು ಮಾತನ್ನು ಹೇಳಬಹುದು. ಇದು ಅಭಿಪ್ರಾಯಭೇದವೋ ಭಿನ್ನರುಚಿಯೋ ಇರಬಹುದು. ಸಂಸ್ಕೃತ ವೃತ್ತಗಳು ಪ್ರಾಸವನ್ನರಿಯವು. ಆದರೂ ಸಂಸ್ಕೃತ ಕವಿಗಳೂ ಗೀತಗಳನ್ನು ಬರೆಯುವಾಗ ಪ್ರಾಸಕ್ಕೆ ಶರಣು ಹೋಗಿದ್ದಾರೆ. ಪ್ರಾಸವನ್ನು ಬಿಟ್ಟು ಬರೆ ಯುವ ಒಂದು ಅಂದ ಆಂಗ್ಲ ಸಾಹಿತ್ಯದಲ್ಲಿದ್ದರೂ ಇಂಗ್ಲೀಷ ಗೀತಗಳಲ್ಲಿ ಮೂಲದಲ್ಲಿ ಪ್ರಾಸ ಸಹಿತವಾಗಿ ಇರುವ ಪದ್ಯಗಳು ಇಲ್ಲಿ ಪ್ರಾಸ ರಹಿತವಾಗಿ ಏಕೆ ಮಾರ್ಪಟ್ಟಿವೆಯೋ ತಿಳಿಯದು. ಹಕ್ಕಿಯ ರೆಕ್ಕೆ ಕತ್ತರಿಸಿದ ಮಾತ್ರಕ್ಕೆ ಅದನ್ನು ಪಶುವೆಂದು ಯಾರೂ ಕರೆಯಲಾರರು; ಅಥವಾ ಅದು ಮನುಷ್ಯ ನಾಗಲಾರದು. ಆದರೂ ಪಕ್ಕವಿಲ್ಲದ ಹಕ್ಕಿ ಎಂಬುದು ವದತೋವ್ಯಾಘಾತ ವಲ್ಲವೇ? ನುಡಿಮೇಳವಿಲ್ಲದ ಹಾಡು ಪಕ್ಕವಿಲ್ಲದ ಪಕ್ಷಿಯಂತೆ. ಪ್ರಾಸವಿಲ್ಲದ ಪದ್ಯವು ಕಾವ್ಯಗುಣವಿದ್ದರೆ ಕಾವ್ಯವೇ ಅಹುದು. ಆದರೂ ಭಾವದ ಬಿಸಿಗೆ ಹೊರಬಿದ್ದು ಎದ್ದ ವಾಣಿಯ ಉದ್ಗಾರವು ಬರಿಯ ಆವಿಯಲ್ಲ. ಅದು ಮಿಂಚಿ

ಪಿಡಿಯುವ ನೋಡ. ಗದ್ಯವು ಅತಿ ವೃತ್ತಗಂಧಿಯಾಗುವದು ಹೇಗೆ ಅದಕ್ಕೆ ಕೊರತೆಯೊ ಹಾಗೆಯೆ ಭಾವೋದ್ರೇಕದ ಪದ್ಯಗಳಲ್ಲಿ ಉಚಿತ ಪ್ರಾಸವಿಲ್ಲದಿರುವದು ಒಂದು ಕುಂದು. ತಾಳ, ಗತ್ತು, ಗಮಕ, ಯಮಕ, ಪ್ರಾಸ ಅನುರಣನಗಳು ಭಾವವ್ಯಕ್ತಿಯಲ್ಲಿ ಭೂಷಣಗಳು ಅಲಂಕಾರಗಳು ರೂಪಕ್ಕೆ ಹೊರತೆಂದೂ ಅದರಲ್ಲೂ ಶಬ್ದಾಲಂಕಾರಗಳಂತೂ ಬರಿಯ ಗಿಲೀಟೆಂದೂ ತಿಳಿಯುವವರು ತಿಳಿಯಲಿ. ಉಚಿತವಾದ ಅಲಂಕಾರಗಳು ಲಾವಣ್ಯದ ರೂಪರೇಖೆಗಳಾಗಿಯೂ ಯತಿ ತಾಳ ಲಯಾನುಕಾರಿಗಳಾದ ಪ್ರಾಸಗಳು ಅವಯವ ಸ್ಪಷ್ಟತೆ, ಸಂಧಿಬಂಧಗಳಾಗಿಯೂ ಸೌಂದರ್ಯಾವಿರ್ಭಾವದ ಪಡಿಯಚ್ಚಿನಂತೆ ರಸಿಕರಿಗೆ ತೋರದಿರವು. ಇಲ್ಲಿಯ ಕೆಲಗೀತೆಗಳಲ್ಲಿ ಆ ಕೊರತೆಯು ಆಗೀಗ ಬಾಯಾರಿಕೆ ಉಂಟುಮಾಡುವದು. ಇಲ್ಲಿಯ ಶೈಲಿಯಲ್ಲಿ ನುಸುಳಿಕೊಂಡಿರುವ ಆಂಗ್ಲ ಛಾಯೆಯು ಹಸಿಕನ್ನಡಿಗರಿಗೆ ವಿಪರೀತವಾಗಿ ತೋರಿದರೂ ದಿನಬಳಕೆಯಿಂದ ಇದು ನೈಯುಂಡು ಹೋಗುವದು. ಇಂಗ್ಲಿಷ್ ಗೀತಗಳ ಕಾವ್ಯಗುಣಗಣವಲ್ಲಿ ಈ ಕೊರತೆಗಳು ಅಷ್ಟು ಹೆಚ್ಚಲ್ಲ.

(ಈ ಸಂಗ್ರಹವು 'ಶ್ರೀ' ಯವರ ಕೃತಿಯಾಗಿ, ಹೊಸ ಕವನಗಳಿಗೆ ಮಾರ್ಗದರ್ಶಕವಾಗಿ, ತರುಣರ ಮೆಚ್ಚಿಕೆಯದಾಗಿ, ಭಾವಗೀತೆಗಳ ಭಾಷಾಂತರಕ್ಕೊಂದು ಕೈಪಿಡಿಯಾಗಿ ಅಕ್ಲಿಷ್ಟಪ್ರಸನ್ನ ಕಾವ್ಯಶೈಲಿಗೆ ಮಾದರಿಯಾಗಿ ನಿಲ್ಲುವದು.) ಹೊಸಕವನಗಳ ಓಂಕಾರದಲ್ಲಿ 'ಶ್ರೀ'ಯವರ ಈ ಶ್ರೀಕಾರವು ನಿತ್ಯನವೀನವಾಗಿ ಉಳಿಯಲಿ.

---

## ೩. ಕತೆಗಾರ ಮಾಸ್ತಿಯವರ ಕಲೆ ಮತ್ತು ಒಲವು

ಶ್ರೀಮಾನ ಮಾಸ್ತಿಯವರನ್ನು ಕನ್ನಡ ಕತೆಗಾರಿಕೆಯ ಪುಣ್ಯೋಗಮವೆಂದು ಪವಿತ್ರ ಪ್ರವಾಹವೆಂದೂ ಅವರ ಮಿತ್ರರಾದ ನಾವೆಲ್ಲರೂ ಅವರನ್ನು ಗೌರವಿಸಲು ಇಲ್ಲಿ ಕಲೆತಿರುವೆವು. ಇಂಥ ಕಾಲಕ್ಕೆ ಅವರ ಕೃತಿಗಳ ಮೂಲಕಿರುವ ಮನದ ಝರಿ ಎಂತಹದೆಂದು ನಾವು ತಿಳಿದ

ಕೊಳ್ಳಲು ಯತ್ನಿಸಿದರೆ ತಪ್ಪಾಗದು. ಎಲ್ಲ ಕಲಾಕೃತಿಯ ಮೂಲಘಟಕ ಗಳು ನಾಲ್ಕೆಂದು ಈ ಪ್ರಬಂಧದ ಮಟ್ಟಿಗೆ ಪ್ರಮೇಯವಾಗಿಟ್ಟುಕೊಂಡು ಮಾಸ್ತಿಯವರ ಮನದ ರಚನೆಯ ಚತುಷ್ಕೋಣಗಳನ್ನು ಕುರಿತು ನಾಲ್ಕು ಮಾತು ಇಲ್ಲಿ ಹೇಳುತ್ತೇನೆ.

ಎಲ್ಲ ಕಲಾಕೃತಿಗಳಲ್ಲಿ ಕಲೆಯೊಂದು ಪಾಲು, ಜಗದ ವಿಜ್ಞಾನ ಒಂದು ಪಾಲು. ಕೃತಿದ್ರವ್ಯವಾದ ವಸ್ತುವೊಂದು ಪಾಲು, ಪ್ರತಿಭಾಶಕ್ತಿಯೊಂದು ಪಾಲು. ಈ ನಾಲ್ಕು ಬಿಟ್ಟು ಐದನೆಯದಿದ್ದರೆ ಅದು ದೈವ. ಕಲೆಯೆಂಬುದು ಕರ್ಮ ಕೌಶಲ್ಯವು. ಯಾರಿಗೂ ಕತೆ ಹೇಳುವದು, ಯಾರಿಂದಲೂ ಕತೆ ಕೇಳುವದು, ಯಾವ ಕತೆಗಾರರನ್ನೂ ಅಪೂರ್ವಕ ಸಹಾನುಭೂತಿಯ ಸಾಮರಸ್ಯದಿಂದ ಸೇವಿಸುವದು, ಜೀವನ ಕರ್ಮಪರಂಪರೆಯನ್ನೆಲ್ಲ ಕತೆಯಾಗಿ ಕಾಣುವನು ನೋಡುವದು ಇದರಿಂದಲೆ ಕತೆಯ ಕಲೆಯು ಕರಗತವಾಗಿ ಬಿಡುವದು. ಮಾಸ್ತಿಯವರಿಗೆ ಏನಕೇನ ಪ್ರಸ್ತಾಪದಿಂದ ಮತ್ತೆ ಮತ್ತೆ ಕತೆ ಹೇಳುವದೂ, ಮಿಗಿಲಾದ ತಾಳ್ಮೆಯಿಂದ ಎಂಥವರೂ ಹೇಳುವ ಜೀವನ ಕಥನವನ್ನು ಕೇಳುವದು ವಾಡಿಕೆಯಾಗಿದೆ. ಆಗಳು ಪಿಚಿಕಿ ಅನ್ನ ನೋಡಿದಂತೆ ಅವರು ವಿವಿಧ ಕಥಾಲೇಖಕರ ಹೃದಯವನ್ನು ಮಾರ್ಮಿಕತೆಯಿಂದ ತಿಳಿದು ಕೊಂಡಿದ್ದಾರೆ. ಮೆಚ್ಚಿದ್ದಾರೆ. ಪರಗುಣಕಥನರತಿಯಿಂದ ಸ್ವಗುಣವಿವರ್ಧನವಾಗುವದೆಂದು ಅವರು ಚೆನ್ನಾಗಿ ಅರಿತಿದ್ದಾರೆ. ಇದಲ್ಲದೆ ಅವರಿಗೆ ದಿನದ ಜೀವನದ ಯಾವ ಮುಖವೂ ತನ್ನ ಸಮಗ್ರ ಕಥಾದೇಹವನ್ನು ಪ್ರಕಟಿಸುವದು. ಪ್ರತಿಭೆಯ ಮೂಲಕ ಅವರಿಗೆ ಹಾಗೆ ತೋರುವದೋ ಊಹಾ ಬಲದಿಂದ ಅವರು ಕ್ಷಣಮಾತ್ರದಲ್ಲಿ ಸಂಪೂರ್ಣ ಜೀವನವನ್ನು ಸೃಷ್ಟಿಸಿಕೊಳ್ಳುವರೋ ಹೇಳಬರದು. ಇಲ್ಲಿಯ ಕಲಾಶಕ್ತಿ, ಪ್ರತಿಭಾಶಕ್ತಿಗಳ ಸಂಗಮವಾಗುವದು. ಕೃತ್ರಿಮತೆಯು ಕೃತಿವಂತಿಕೆಯಲ್ಲಿ ಲೀನವಾಗುವದು. ಅಭ್ಯಾಸವಾವುದು ಪ್ರಕೃತಿಗುಣವಾವುದು ಎಂಬುದನ್ನು ಬೇರ್ಪಡಿಸುವದು ಕಷ್ಟವಾಗುವದು.

ಇನ್ನು ಎರಡನೆಯ ಶಕ್ತಿಯೆಂದರೆ–ಜಗದ ವಿಜ್ಞಾನ, ಅಥವಾ ಜೀವನದ ಜ್ಞಾನಾನುಭವ. ಬಾಲ್ಯದಲ್ಲಿ ಬಡತನವನ್ನೂ ತಾರುಣ್ಯದಲ್ಲಿ ಅಧಿಕಾರಪದವನ್ನೂ ಅನುಭವಿಸಿದ ಮಾಸ್ತಿಯವರಿಗೆ ಎರಡು ಕಣ್ಣಿನಿಂದಲೂ ಜೀವನವು

ಕಂಡಿದೆ. ಅದರಲ್ಲೂ ಬಡತನವಿದ್ದಾಗಲೂ ದೈನ್ಯಕ್ಕಿಳಿಯದೆ ಆತ್ಮಗೌರವದ ಧಾರಣೆಯನ್ನು ಕಳೆದುಕೊಳ್ಳದುದರಿಂದಲೂ, ಅಧಿಕಾರವಿದ್ದಾಗಲೂ ಮದ ಕ್ಕೇರದೆ ಜೀವನದ ಸುಖದುಃಖ ವಿವರದ ಸಮತೂಕವನ್ನು ಕಾಯ್ದುಕೊಂಡ ದುದರಿಂದಲೂ ಅವರ ಕಣ್ಣಿಗೆ ಯಾವ ಮೋಹದ ಪೊರೆಯೂ ತನ್ನ ತೆರೆ ಯನ್ನೆಳೆಯಲಿಲ್ಲ. ಅಧಿಕಾರದಲ್ಲಿದ್ದಾಗ ಪರಾಂಬರಿಕೆಗೆ ಬಂದ ಎಲ್ಲ ಓಲೆ ಕಾಗದಗಳೂ ಕರ್ಣಪಿಶಾಚಗಳಂತೆ ತಮ್ಮ ಆತ್ಮಕತೆಯನ್ನು ಅವರ ಕಿವಿಗೆ ಹಾಕಿವೆ. ಅಧಿಕಾರದ ಆಸನವು ಅವರನ್ನು ಸಿರಿವಂತರ ಮನೋರಾಜ್ಯದಲ್ಲಿ ಸೆರೆಹಿಡಿಯಲಿಲ್ಲ. ಅವರ ಮನದ ಕಿಟಕಿ ಬಾಗಿಲಂತೆ ಅವರ ಮನೆಯ ಬಾಗಿಲೂ ಜೀವನವು ಕಣ್ಮರೆಯಾಗುವಂತೆ ಯಾವ ಪರದೆಯನ್ನೂ ಎಳೆದು ಕೊಳ್ಳಲಿಲ್ಲ. ಹೀಗಾಗಿ ಹತ್ತು ದಿಕ್ಕಿನಿಂದ ಜೀವನವು ಅವರನ್ನು ಬೆಟ್ಟಿ ಯಾಗಿದೆ.

ಮಾಸ್ತಿಯವರು ಆಶಾವಾದಿಗಳಾಗಿರುವದೇನೋ ನಿಜ; ಆದರೆ ಪರ ದುಃಖವು ಎಂದಿಗೂ ಅವರಿಗೆ ಶೀತಲವಾಗಿ ಕಂಡಿಲ್ಲ. ತಮ್ಮ ಧ್ಯೇಯವಾದದ ಬಲದಿಂದ ಕರಿದನ್ನೆಲ್ಲ ಬಿಳಿದನ್ನಾಗಿ ಬಣ್ಣಿಸಿ ನೋಡುವ ಹಠವಾದಿಗಳವರಲ್ಲ. ಅವರು ಜೀವನದ ರೌದ್ರ-ಭಯಾನಕ ಬೀಭತ್ಸಗಳ ತ್ರಿಮೂರ್ತಿಗಳ ಮುಖದ ಮೇಲೆ ತೆಳುವಾದ ಜವನಿಕೆಯನ್ನೆಳೆದಿದ್ದರೂ ಆ ವಿಷಯದಲ್ಲಿ ಅವರು ಶೂನ್ಯವಾದವನ್ನು ಪ್ರತಿಪಾದಿಸುವದಿಲ್ಲ. ದೇವರ ವಿಷಯದಲ್ಲಿರುವಂತೆ ಅದರ ವಿಷಯವಾಗಿ ಅವರಿಗೊಂದು ಭಯಭಕ್ತಿಯಿದೆ. ದಿವ್ಯದೃಷ್ಟಿಯ ತೃತೀಯ ನೇತ್ರದಿಂದಲೂ ಜಗದ್ಮೂಲದ ದರ್ಶನವು ಅವರಿಗಾಗಿದೆ. ಅವರ ವಿಶ್ವರೂಪವನ್ನು ನೋಡಿ ಭಯಚಕಿತನಾದ ಅರ್ಜುನನಂತೆ ದೇವದೇವನ ಸೌಮ್ಯರಮ್ಯರೂಪದ ಉಪಾಸನೆಯನ್ನು ಅವರು ಬಹುಭಕ್ತಿಯಿಂದ ನಡೆ ಯಿಸಿರುವರು. ಹಣೆಗಣ್ಣನ್ನು ದಕ್ಕಿಸಿಕೊಳ್ಳಬಲ್ಲವನು ಶಿವ-ರುದ್ರನಂತೆ ಜಗದೇಕನಾದ ಜೋಗಿಯಾಗಿರಬೇಕಲ್ಲದೆ ಅಂಥಿಂಥವರು ಕುತೂಹಲದಿಂದ ರೌದ್ರ, ಭಯಾನಕ, ಬೀಭತ್ಸ ತ್ರಿಮೂರ್ತಿಗಳ ಬಣ್ಣನೆಗೆ ಕುಂಚವನ್ನೆತ್ತು ವದು ತಲೆತುರಿಸಿಕೊಳ್ಳಲು ಹಾವಿನ ಹೆಡೆಯನ್ನೆತ್ತುವ ಹುಡುಗಾಟ ನಡೆಸಿ ದಂತೆ ಎಂದು ಅವರು ತಿಳಿಯುವರು. ಇಷ್ಟಾಗಿ ಅವರ ಕಣ್ಣಿಗೆ ಬೀಳದ ಕಾಠಿಣ್ಯವಿಲ್ಲ, ಅದಕ್ಕೆ ಎದೆ ಕರಗಿ ನೀರಾಗದ ಅವರ ಬಾಳಿನ ದಿನವಿಲ್ಲ.

ಅವರು ಸಾಕ್ಷಿಯ ತ್ಯಾಟಸ್ಥ್ಯದಿಂದ ಜೀವನವನ್ನು ಜಗತ್ತನ್ನು ನೋಡಿದ್ದಾರೆ. ಜಗವೂ ಜೀವನವೂ ಅವರಿಗೆ ಸಾಕ್ಷಾತ್ತಾಗಿ ಕಂಡಿದೆ. ಅವರು ಕಂಡದ್ದನ್ನೆಲ್ಲ ತೋರಿಸುವದು ದೈವದ ಇಚ್ಛೆಗೆ ಸೇರಿದುದು. ಜಗದ ವಿಜ್ಞಾನವು ಅವರಿಗೆ ವಾಸ್ತವವಾಗಿರುವದಾಗಿ ಅವರ ಕೃತಿಗಳಿಂದ ಕಂಡುಬಂದರೂ ಅವರು ರುದ್ರನನ್ನೇ ಶಿವನನ್ನಾಗಿ ಕಾಣುವ ಪ್ರಾತಿಭಚಕ್ಷುಗಳುಳ್ಳವರು. ಫಾಲ ನೇತ್ರವು ಹಣೆಯುನಾಮುದಂತೆಯೂ, ಭುಜಂಗಾವಳಿಯು ಭೂಷಣಾವಳಿ ಯುಂತೆಯೂ, ವ್ಯಾಘ್ರಾಂಬರವು ದಿಗಂಬರತ್ವದ ಮುಸುಕಾಗಿಯೂ, ಭಸಿ ತವು ದೇಹಪ್ರಭೆಯಾಗಿಯೂ, ವಿಷವು ಕಂಠಾಭರಣವಾಗಿಯೂ ಮಾರ್ಪಾ ಡಾಗುವ ಇಂದ್ರಜಾಲವು ಕಲಾವತಿಯಾದ ಅವರ ವಾಣಿಯಲ್ಲಿದೆ. ಆದರೆ ಅವರೆಂದೂ ಬೆಂಕಿಯನ್ನು ನೀರೆಂದೂ, ಹಾವನ್ನು ಹೂವೆಂದೂ, ಹುಲಿಯನ್ನು ಹುಸಿಯೆಂದೂ, ಬೂದಿಯನ್ನು ಭಾಗ್ಯವೆಂದೂ, ಕಹಿಯನ್ನು 'ಸಿಹಿಯೆಂದೂ ತಿಳಿದಿರಲಾರರು. ಜೀವನದುತೆ ಜೀವಿಗಳ ವೈವಿಧ್ಯವನ್ನೂ, ವಿಶಿಷ್ಟದೃಷ್ಟಿಗಳ ಅನಂತ್ಯವನ್ನೂ, ಮಾನವದೃಷ್ಟಿಯ ಸ್ವಾಭಾವಿಕೇಚ್ಛೆಯನ್ನೂ ಅವರು ಚೆನ್ನಾಗಿ ಅರಿತಿದ್ದಾರೆ. ವಾಚಕರ ಅಂತಃಕರಣವನ್ನು ಸೂರೆಗೊಳ್ಳುವ ಸಾಮರ್ಥ್ಯವು ಈ ಅರಿವಿನಿಂದಲೆ ಸಾಧ್ಯವಾಗುವದು.

ಇನ್ನು ಮೂರನೆಯ ಕೃತಿಶಕ್ತಿಯೆಂದರೆ ಕಲಾದ್ರವ್ಯದ ವಸ್ತುಶಕ್ತಿ. ಮಾಸ್ತಿಯವರ ಕೈಯಲ್ಲಿ ಕತೆಯು ಕತೆಯಾಗಿಯೆ ಉಳಿದಿದೆ, ಬೆಳೆದಿದೆ. ಕಲ್ಲಿಗೆ ಮೇಣದ ಮಿದು ತರುವದಾಗಲಿ, ಅರಲಿಗೆ ಕಲ್ಲಿನ ಹದ ಬರಿಸುವ ದಾಗಲಿ, ಐಂದ್ರಜಾಲಿಕ ಚಮತ್ಕಾರವಾದೀತು, ಬೂಟಾಟಿಕೆಯ ವ್ಯಾಪಾರ ವಾದೀತೇ ಹೊರತು ವಸ್ತುವಿನ ಸ್ವಾಭಾವಿಕಾಂಗಸೌಂದರ್ಯದ ಸಹಜಾವಿಷ್ಕ ರಣವಾಗಲಾರದು. ಕಲ್ಲಲ್ಲಿ ನಾರೆತ್ತುವ ಚಾತುರ್ಯವು ಅವರಿಗೆ ಸೇರಿದ್ದಲ್ಲ. ಗಾಳಿಯಲ್ಲಿ ಗೋಪುರಗಳನ್ನಾಗಲಿ ಗಂಧರ್ವನಗರಗಳನ್ನಾಗಲಿ ಬರೆಯುವ ಹವ್ಯಾಸ ಅವರಿಗಿಲ್ಲ. ಆದರೆ ಜೀವನದೊಂದು ಜೀವಂತ ಪಿಂಡದಲ್ಲಿ ಬ್ರಹ್ಮಾಂಡದ ಸಕಲ ವ್ಯೂಹದ ಗೆರೆಗಳನ್ನು ಅವರು ತೋರಿಸಬಲ್ಲರು. ನೀತಿ, ಮನೋವ್ಯಾಪಾರ, ರಸೋತ್ಪತ್ತಿ, ಕಣಸು, ರಂಜನೆ, ಪಾತ್ರಸೃಷ್ಟಿ, ತತ್ತ್ವ ಯಾವುದೂ ಕಥಾಂಗ ಲಕ್ಷಣವಾಗಿ ಅವರ ಕತೆಗಳಲ್ಲಿ ಮೂಡಿಬರಬಹುದಲ್ಲದೆ ಆಲದ ಎದೆ ಸೀಳಿ ಅರಳೆಲೆ ಚಿಗುರೆತ್ತಿ ಬಂದಂತೆ ಬಂದಳಿಕೆಯ ಆಗಂತುಕ

ವ್ಯಾಪಾರಕ್ಕೆ ಅವರ ಕತೆಯಲ್ಲಿ ಆದರಾತಿಥ್ಯವಿಲ್ಲ. ಆದರಿಂದ ಅವರ ಕತೆಗೆ ಜೀವನದ ವಿಶಾಲಧ್ವನಿ ಸಾಮರ್ಥ್ಯವು ತಾನಾಗಿಯೆ ಬರುವದು. 'ತಮ್ಮ ಶೈಲಿಯು ವಸ್ತುಶೀಲವಾಗಿರುವದೆಂದು ಮಾಸ್ತಿಯವರು ಆಗಾಗ್ಗೆ ಹೇಳುವದುಂಟು. ಕತೆಗಾರನು ಕತೆಯ ಮುಖವಾಗಬೇಕಲ್ಲದೆ, ಕತೆಗಾರನ ಕೈಯಲ್ಲಿ ಕತೆಯೊಂದು ಕತ್ತಿಯಾಗಬಾರದು. ಹಾಗಾದದ್ದಾದರೆ ಎಲ್ಲ ಬತ್ತೀಸಾಯುಧಗಳಾಗುವ ಕತೆಯ ಸ್ವಯಂಭುಶಕ್ತಿಯು ಮಾಯವಾಗುವದು. ಕಥಾಪಾತ್ರಗಳೊಮ್ಮೆ ಕತೆಗಾರನ ಹೃದ್ರಂಗವನ್ನು ಪ್ರವೇಶ ಮಾಡಿದೊಡನೆ ಮುಂದಿನ ವಾಗ್ವಿಲಾಸವೆಲ್ಲ ಶ್ರುತಿಯಾಗಿಯೂ, ಕೃತಿಯೆಲ್ಲ ದರ್ಶನವಾಗಿಯೂ ಬಿಡುವದು. ಇಲ್ಲಿಯೆ ವಸ್ತುಶಕ್ತಿಯು ಮತ್ತೆ ಪ್ರಾತಿಭಶಕ್ತಿಯೊಡನೆ ಮೈಗೂಡಿಕೊಳ್ಳುವದು.

ಕೃತಿಯ ಕೊನೆಯ ಶಕ್ತಿಯೆಂದರೆ ಪ್ರತಿಭೆ. ಕತೆಯಿರಲಿ, ನಾಟಕವಿರಲಿ, ಕವನವಿರಲಿ ಪ್ರಬಂಧವಿರಲಿ, ಅವರ ಪ್ರತಿಭೆಯು ಸಿದ್ಧಹಸ್ತಳಾಗಿ, ವರದಪಾಣಿಯಾಗಿ ಅಭಯಕರಳಾಗಿ ನಿಂತಿದ್ದಾಳೆ. ಸಿದ್ಧರ ಜೀವನವಿರಲಿ ನಿರ್ಬುದ್ಧರ ಜೀವನವಿರಲಿ, ಕುಹಕಕುಟಿಲರದಿರಲಿ, ನಿಷ್ಕಪಟಿಗಳಾದ ನಿಷ್ಕಳಂಕರದಿರಲಿ, ವಿಲಾಸಿಗಳದಿರಲಿ, ವಿರಾಗಿಗಳದಿರಲಿ, ವಿನೋದಿಗಳದಿರಲಿ, ವಿಪರೀತರದಿರಲಿ, ಧೀರರದಿರಲಿ, ಭೀರುಗಳದಿರಲಿ, ಯಥಾವತ್ತಾಗಿ ಅವರ ಪ್ರತಿಭೆಗೆ ಆ ಆ ಪಾತ್ರದ ಮೂರ್ತಿದರ್ಶನವಾಗಿರುವದು. ಸ್ತ್ರೀಪಾತ್ರ-ಸೃಷ್ಟಿಯಲ್ಲಂತೂ ನವನವೋನ್ಮೇಷಶಾಲಿನಿಯಾದ ಅವರ ಪ್ರತಿಭೆಯು ಪ್ರಪಂಚದ ಕತೆಗಾರರಲ್ಲಿಯೂ ಅದ್ವಿತೀಯವಾಗಿದೆ. ಆರು ಹೆಣ್ಣು ಮಕ್ಕಳ ತಂದೆಯಾದ ತಾನು ಅರೆವಾಸಿ ಹೆಣ್ಣೆಯಾಗಿರುವದರಿಂದ ಹೆಣ್ಣಿನ ಹೃದಯವು ತನಗೆ ಸ್ವಭಾವವಾಗಿಯೆ ಗೋಚರಿಸುವದೆಂದು ಅವರು ತಮ್ಮ ಸಹಜ ವಿನೋದದಿಂದ ಆಗೀಗ ಆಡುವದುಂಟು. ಅದೇನೆ ಇದ್ದರೂ ಕಾಮಹತವಾಗದ ಅವರ ನಿರ್ಮಲ ಮನದ ಮುಕುರವೇ ಈ ಅಪೂರ್ವದರ್ಶನಕ್ಕೆ ಕಾರಣವೆಂದು ನಾನು ತಿಳಿಯುತ್ತೇನೆ. ಕ್ರೋಧಕಲುಷಿತವಲ್ಲದ ಅವರ ಅಂತಃಕರಣಕ್ಕೆ ಎಂಥ ನೀಚಪಾತ್ರರೊಡನೆಯೂ ಕಾರುಣ್ಯದಿಂದಾದ ಸಹಾನುಭೂತಿಯಿಂದ ತೋರುವ ವಿನೋದ ವಿವರಗಳು ಬೇರೆ ಪ್ರಕೃತಿಯವರಿಗೆ ಗೋಡೆಯೆಂದೇ ಹೇಳಬೇಕು. ಮತ್ಸರದೂಷಿತವಲ್ಲದ ಅವರ ದೃಷ್ಟಿಯು ವಿವಿಧ

ಗುಣಗಣ ರಸಿಕರೊಡನೆ ಮೈತ್ರಿಯಿಂದ ಬಹುಮುಖವಾದ ಭಾವನಾ ತರಂಗಗಳನ್ನು ಗ್ರಹಿಸಬಲ್ಲದಾಗಿದೆ. ಪ್ರತಿಭೆಯ ಕಿರಣಗಳನ್ನು ಪೃಥಕ್ಕರಿಸಿ ಹೇಳುವದು ಸಾಧ್ಯವಲ್ಲವಾದರೂ ರಜಸ್ತಮಗಳ ಧೂಳಿಕತ್ತಲುಗಳನ್ನು ದಾಟಿ ಸತ್ತ್ವದ ಬೆಳಕಿನಲ್ಲಿ ಸತತವಾಗಿರುವ ಅವರ ಅಭ್ಯಾಸದಿಂದಲೆ ಅವರ ಪ್ರತಿಬೆ ಬಂದಿದೆ ಎಂದು ತೋರುವದು. ಆದರೂ ಸಾಹಿತ್ಯಸೃಷ್ಟಿಯನ್ನು ಮಾಡಿ ಸರ್ವಕಾಲಕ್ಕೂ ರಸದೂಟವನ್ನು ಹಾಕುತ್ತಿರುವ ಅವರ ಕಾವ್ಯ ಪ್ರತಿಭೆಗೆ ಅವರ ಜೀವನದಲ್ಲಿ ನೆಲೆಯಾಗಿ ನಿಂತ ಅವರ ಉಪಾಸ್ಯದೈವವೆ ಕಾರಣವೆನ್ನದೆ ಗತಿಯಿಲ್ಲ. ಅವರ 'ಬಿನ್ನಹ'ವನ್ನಾಲಿಸಿದ ದೈವವೆ ಅವರ ಕತೆಕವನಗಳನ್ನು ತನ್ನ ಕೃತಿಭುವನಗಳನ್ನಾಗಿ ಮಾಡುತ್ತಿರುವದು.

ಇದಾಯಿತು ಅವರ ಕಲೆಯ ಜಾತಿ ರೀತಿ. ಇನ್ನು ಈ ಕಲೆಯ ಸೃಷ್ಟಿಯಾದ ಅವರ ಕಥಾಕೃತಿಗಳಲ್ಲಿ ಅವರ ಒಲವೂ ಮನಸ್ಸು ಮೂಡಿದ ಬಗೆಯನ್ನಷ್ಟು ಸಂಕ್ಷೇಪದಿಂದ ಹೇಳುವದು ಈ ಪ್ರಸಂಗದಲ್ಲಿ ಅಪ್ರಸ್ತುತ ವಾಗಲಾರದು. ಕಥಾಸಾಹಿತ್ಯದಲ್ಲಿ ಗೊಮ್ಮಟನಂತೆ ನಿಂತ 'ಸುಬ್ಬಣ್ಣ' ಕತೆಯನ್ನು ಹಿಡಿದರೆ ಇದುವರೆಗು ಮಾಸ್ತಿಯವರ ಪ್ರಸಿದ್ಧವಾದ ಕತೆಗಳೆಂದರೆ ೭೫ ಮಾತ್ರ. ಇದಲ್ಲದೆ ಪದ್ಯರೂಪವಾಗಿಯೂ ಅವರು ಕತೆಗಳನ್ನು ಹೇಳಿದ್ದಾರೆ; ಕಥೆಗಳನ್ನು ನಾಟಕವಾಗಿ ರೂಪಿಸಿದ್ದಾರೆ. ಪ್ರಬಂಧಗಳಲ್ಲಿ ಕಥಾಗಾಥೆಗಳನ್ನು ಹರಡಿದ್ದಾರೆ; ಇದಿರಲಿ.

ಮಾಸ್ತಿಯವರ ಕೆಲವು ಕತೆಗಳ ಪ್ರಕಟನೆಯೊಡನೆ ಅಕುಟಿಲವಾದ ಸರಸವಿನೋದ, ನಿರ್ಮಲವಾದ ಮಧುರ ಶೃಂಗಾರ, ಜಂಭವಿಲ್ಲದ ನೈಜ ಗಾಂಭೀರ್ಯ, ವಿಕಾರವರಿಯದ ಧೀರವಿವೇಕ, ಕೈಗಡವಲ್ಲದ ಕನ್ನಡ ಜನ ಜೀವನ, ಸಾಹಿತ್ಯ ಸೇವೆಯಲ್ಲಿ ಗೌರವಗೆಡದ ವಿನಯ–ತುಂಬು ಜೀವನದ ಸಮಗ್ರತೆ ಪರಾಗ್ರತೆ, ಅಂತೂ ಇವೇ ಪ್ರಮುಖವಾದ ಅವರ ಗುಣಗಳು ಬೆಳಕುಗಂಡವು. ವಾದಸರಸ ಮತೀಯ ಆವರಣವುಳ್ಳ ಕತೆಗಳಲ್ಲಿ ಮಾಸ್ತಿಯವರ ಸರ್ವಧರ್ಮ ಸಹಾನುಭೂತಿಯೊಡನೆ ಭಾರತದ ಸ್ಥಿತಿಯ ಬಗ್ಗೆ ಕಾರುಣ್ಯ, ಆದರ, ಆಶೆಗಳು ಸೂಚಿತವಾಗಿರುವ. 'ಇಲ್ಲಿಯ ತೀರ್ಪು,' 'ವಸುಮತಿ,' 'ಡುಬಾಯಿ ಪಾದ್ರಿಯ ಒಂದು ಪತ್ರ' ಇವುಗಳಲ್ಲಿ ಕತೆಗಾರಿ ಕೆಯ ಕಲಾದೃಷ್ಟಿಯಿಂದ ಮಾಸ್ತಿಯವರು ತೋರಿಸಿದ ನಿಗ್ರಹದ ಮಾತಿರಲಿ

ನನದೇಶಾಭಿಮಾನ ಪ್ರೇರಿತವಾದ ಆತ್ಮ ಗೌರವವುಳ್ಳ ಹೃದಯದ ಮೂಕ ವೇದನೆಗಳು ಭಾರತ ಸಂಸ್ಕೃತಿಯ ಬಗ್ಗೆ ಅವರಿಗೆ ಇರುವ ಗಭೀರ ಆಶಾವಾದವನ್ನು ಪ್ರಕಟಿಸಿದವು. 'ಬಾದಶಹನ ದಂಡನೆ' ಅದಕ್ಕೂ ಹೆಚ್ಚಾಗಿ 'ನಿಜಗಲ್ಲಿನರಾಣಿ' ಇವು ಮಾಸ್ತಿಯವರು 'ತಾಳಿಕೋಟೆ'ಯಲ್ಲಿ ಪ್ರಕಟಿಸಿದ ಆದರೆ ಇನ್ನೂ ಪ್ರಯೋಜನಕಾರಿಯಾಗಬೇಕಾಗಿರುವ ಜನಚೈತನ್ಯೋದ್ದೀಪನಕಾರಿಯಾಗಬಹುದಾದ ಅವರ ರೂಪಕ ನಿರ್ಮಾಣ ಶಕ್ತಿಯ ಸಂಚಕಾರವನ್ನು ಕೊಡುತ್ತಿವೆ. 'ವೆಂಕಟಶಾಮಿಯ ಪ್ರಣಯ' 'ಜೋಗ್ಯೆರ ಅಂಜಪ್ಪ ಕೋಳೀ ಕದ್ದ ಕಥೆ' 'ಮೊಸರಿನ ಮಂಗಮ್ಮ' 'ಸುಬೇದಾರ್ರೀಗೆ ಪ್ಯಾದೆ ಮಾತು' 'ಡುಬಾಯಿ ಪಾದ್ರಿಯ ಒಂದು ಪತ್ರ' ಇವು ನೀಚಪಾತ್ರಗಳ ಸ್ವಭಾವಾವಿಷ್ಕರಣವು ಯಾವ ನಿಲುವಿನಲ್ಲಿ ಮಾಸ್ತಿಯವರ ಮನಸ್ಸಿಗೆ ತೋರುವದೆಂಬದನ್ನು ಸೂಚಿಸುವವು. 'ಹೇಮಕೂಟದಿಂದ ಬಂದ ಮೇಲೆ' ಎಂಬ ಕತೆಯು ಕಾಲಿದಾಸ ವಾಲ್ಮೀಕಿಗಳ ಪ್ರತಿಭಾಪ್ರವಾಹಗಳಲ್ಲಿ ಮಿಂದ ಮನದ ಸ್ವಾಭಾವಿಕವಾದ ಜೀವನದ ಗಂಭೀರ ದರ್ಶನ ಶಕ್ತಿಯನ್ನೂ ಸಾಹಿತ್ಯದ ಬಗ್ಗೆ ಮಾಸ್ತಿಯವರಿಗಿರುವ ಅತುಲ ಶ್ರದ್ಧೆ ವಿಶ್ವಾಸಗಳನ್ನೂ ಪ್ರಕಟಿಸುವದು. ಗೃಹಸ್ಥನ ಸುನಿರ್ಮಲವಾದ ಜೀವನಕ್ಕಿಂತ ಪವಿತ್ರತರವಾದ ಉನ್ನತವಾದ ಜೀವನವು ಬೇರೊಂದಿಲ್ಲೆಂಬ ಅವರ ಶ್ರದ್ಧೆಯು 'ಸಾರಿಪುತ್ರನ ಕೊನೆಯ ದಿನಗಳು' ಎಂಬ ಕತೆಯಲ್ಲಿ ತೋರಿಬರುವದು. ಭೋಗಯೋಗದ ಸಮತೂಕವನ್ನು ತಿಳಿದು ಹೊಳೆದು ಬಾಳಿದ ತುಂಬು ಜೀವನವೆ ಜೀವಿತದ ಅಮೃತಮಯವಾದ ಭಾಗವೆಂದು ಅವರು ನಂಬಿದ್ದಾರೆ. ಇತಿಹಾಸದಲ್ಲಿ ಹಾಗೆ ಇರುವದಾಗಿ ಕಂಡಿದ್ದಾರೆ. ಇಂದಾದರೂ ಪ್ರಪಂಚವು ಬದಲಾಗಿಲ್ಲ. ಅಮೃತ ಪಡೆಯುವದಕ್ಕೆ ಮರ್ತ್ಯ ಮಾನವನ ಹೃದಯಕ್ಕಿಂತ ಬೇರೆ ಯಾವ ಕಡೆಗೂ ಹೋಗಬೇಕಾಗಿಲ್ಲ. ಪ್ರಕೃತಿಯ ಉದಾರ ಧರ್ಮದಿಂದ ಈಶ್ವರನ ಅಪಾರ ಕಾರುಣ್ಯದಿಂದ ಈ ಹೃದಯವು ಎಲ್ಲರಲ್ಲಿಯೂ ವ್ಯಾಪಿಸಿಕೊಂಡಿದೆ ಆ ಹೃದಯದ ಒಳಹೊಕ್ಕ ಜೀವನವೇ ಅಮೃತವೆಂದು ಮಾಸ್ತಿಯವರ ಸಾಹಿತ್ಯವು ಸುಬ್ಬಣ್ಣ ಹೃದಯದಿಂದ ಸಾರಿ ಹೇಳುತ್ತಿದೆ. ಆ ಹೃದಯ ಪರಿಪಾಕವೆ ಎಲ್ಲ ಪರಿಣಾಮಕ್ಕೆ ಹಾದಿಯೆಂದು ತಿಳಿಸಿಕೊಡುತ್ತಿದೆ. ಇದೆಲ್ಲಕ್ಕೂ ಹೆಚ್ಚಾಗಿ ಸ್ತ್ರೀಜಾತಿಯ ಬಗ್ಗೆ ಮಾಸ್ತಿಯವರಿಗಿರುವ ಅಂತರದೃಷ್ಟಿಯೂ ಪೂಜ್ಯಭಾವವೂ ಅವರ ಅನೇಕ ಕತೆಗಳ ಕೆಚ್ಚಾಗಿವೆ.

ಅನೇಕ ವಾಚಕರಿಗೆ ಜೀವಕ್ಕೆ ಮೆಚ್ಚಾಗಿದೆ. ಮಾಸ್ತಿಯವರ ಮನಸ್ಸು ಅವರ ಜೀವನವನ್ನೇ ಉನ್ನತವನ್ನಾಗಿ ಉಜ್ವಲವನ್ನಾಗಿ ಮಾಡಿರುವಂತೆ ಅವರ ಅಮೃತ ಕಲಾಸಂಪನ್ನವಾದ ಸಾಹಿತ್ಯವು ನಮ್ಮ ನಾಡಿನ ಜೀವನವನ್ನು ಹಾಗೆ ಮಾಡಲು ಸಮರ್ಥವಿದೆ ಎಂದು ಹೇಳಿದರೆ ಆ ಕತೆಗಳನ್ನು ಓದಿ ಅನುಭವಿಸಿದವರೆಲ್ಲ ಒಪ್ಪುವರು ಎಂದು ನಾನು ತಿಳಿದಿದ್ದೇನೆ.

---

## ೪ ಆನಂದ

‘ಕೋಽಹಂ ಸೋಽಹಂಗಳೆಂಬಾ ಗಜಿಬಜಿ ಪುಗದಾನಂದ ಸಂವಿತ್ತು’

—ಹರಿಹರ

‘ಕಾವ್ಯಮಾನಂದಾಯ’ ಹಾಡು ಹಿಗ್ಗಿಗಾಗಿ ಎಂದು ಲಕ್ಷಣಜ್ಞರು ಹೇಳುತ್ತ ಬಂದಿದ್ದಾರೆ. ನಮ್ಮ ಕನ್ನಡ ಕವಿಗಳು ತಮ್ಮ ಕಾವ್ಯಗಳಾದಿಯಲ್ಲಿ ಆನಂದಕ್ಕಾಗಿ ಪ್ರಾರ್ಥಿಸುವದು ಪ್ರಸಿದ್ಧವೇ ಇದೆ. ಇಂಥ ಈ ಆನಂದದ ಸ್ವರೂಪವಾದರು ಎನು ? ಎಂಬುದನ್ನು ವಿಚಾರಿಸುವದು ಅಗತ್ಯ. ಆನಂದ ಮೀಮಾಂಸೆಯನ್ನು ವೇದಾಂತ ಗ್ರಂಥಗಳಲ್ಲಿಯೆ ಮಾಡಬೇಕೆನ್ನುವ ನಿಯಮವಿಲ್ಲ. ರಸವಿಚಾರದಲ್ಲಿ ಆನಂದದ ಉಲ್ಲೇಖವು ಅಲಂಕಾರ ಗ್ರಂಥಗಳಲ್ಲಿ ಆಗೀಗ ಬರುವದು. ಆದರೆ ಅದಷ್ಟೆ ಸಾಕಾಗದು. ಆನಂದದ ಅನುಭವವನ್ನು ಅದನ್ನು ಹೊಂದಿದವರೆ ಬಲ್ಲರು; ಅದನ್ನು ಹೇಳಲು ಬರದು—ಎನ್ನಲಿಕ್ಕಾಗದು. ಗಾಢನಿದ್ರೆಯ ಸುಖವನ್ನು ಹ್ಯಾಗೆ ನಿದ್ರಿಸಿದವರೆ ಬಲ್ಲರು ಎಂಬುದು ನಿಜವಾದರೂ, ಮತ್ತು ಹಾಗೆ ನಿದ್ರಿಸುವವನು ಮನಸಿನಾಚೆಗೆ, ಮಾತಿನಾಚೆಗೆ, ಹೋಗುವವನೆಂಬುದನ್ನು ಒಪ್ಪಿಕೊಂಡರೂ, ಆ ಸುಷುಪ್ತಿ ಸುಖವು ವರ್ಣನೆಗೆ ಬಾಹಿರವಲ್ಲ. ಹಾಗೆಯೆ ಆನಂದದ ಮಾತು. ಶಾಸ್ತ್ರದಲ್ಲಿಯೂ ಇದೇ ಅಭಿಪ್ರಾಯದಿಂದಲೇ ಅದರ ಚರ್ಚೆಯಾಗುವದು. ಇದಲ್ಲದೆ, ನಾವು ಇಲ್ಲಿ ತಿಳಿದುಕೊಳ್ಳಬೇಕಾದುದು ಕವಿಗೆ ಆಗುವ ಆನಂದದ ಲಕ್ಷಣಗಳನ್ನು. ಕವಿಗಳು ತಮ್ಮ ಆ ಸುಖದ ಸವಿಯನ್ನು ತಮ್ಮ ಕಾವ್ಯೋದ್ಗಾರಗಳಿಂದ ಸೂಚಿಸಿದ್ದಾರೆ. ಮತ್ತೆ, ವೇದಾಂತಿಗಳು ಹೇಳುವ ಆನಂದದ ಲಕ್ಷಣಗಳು ನಮಗೆ ಹಾದಿಯನ್ನು ತೋರಿಸುವವು. ಯಾವ ಆನಂದವೂ ಆನಂದವಷ್ಟೇ !

ಕಾವ್ಯವು ಆನಂದವನ್ನು ಕೊಡುವ ಕಾರಣವೆಂದರೆ ಅದು ಆನಂದದಿಂದಲೇ ಅಂಕುರಿಸಿರುವದು,— ಅದಕ್ಕಾಗಿಯೆ ಆನಂದ ಮೀಮಾಂಸೆಯಿಲ್ಲದ ಕಾವ್ಯ ಯೋಗವು ಅಸ್ತಿವಾರವಿಲ್ಲದ ಮನೆ. ತಿಳಿದಷ್ಟು ಹೊಳೆದಷ್ಟು, ಪೂರ್ವಿಕರ ವಚನ ಪ್ರಭೆಯಲ್ಲಿ ಕಂಡಷ್ಟು, ಆನಂದದ ಹಾದಿಯನ್ನು ನೆಲೆಯನ್ನು ವರ್ಣಿಸುವದು ವಿಹಿತವೆ.

ಆನಂದವು ಸೃಷ್ಟಿಗೆ ಮೂಲ. ಕಾವ್ಯವು ಒಂದು ಸೃಷ್ಟಿಯಾದುದರಿಂದ ಅದಕ್ಕೆ ಆನಂದವೇ ಮೂಲ. ಹಾಗೆ ಒಗೆದು ನೋಡಿದಲ್ಲಿ ಆನಂದವೇ ಸೃಷ್ಟಿ. ಒಳ್ಳೆ ಸಿದ್ದೆಯಿಂದ ಗವ್ವನೆ ಎಚ್ಚತ್ತು 'ಅಹಾ ಎಂಥ ಸಿದ್ದೆ' ಎಂದು ನೆನೆವುದೆ ಒಂದು ಸೃಷ್ಟಿ. ಅಲ್ಲೋಲಕಲ್ಲೋಲವಾಗಿರುವ ಕಡಲನ್ನು ಕಂಡು ಬೆಪ್ಪಾಗಿ 'ಅಬ್ಬಾ' ಎನ್ನುವ ಭಾವೋದ್ಗಾರವೂ ಒಂದು ಸೃಷ್ಟಿ. ಅನುಭವ ಮುಹೂರ್ತವು ಯಾವಾಗಲೂ ಯೋಗ ನಿದ್ರೆಯಿದ್ದಂತೆ. ಅದರ ಸ್ಮೃತಿಯೇ ಸೃಷ್ಟಿಯ ಕರಣ. ಶ್ರುತಿಗಳಿಗೆ ದೃಷ್ಟಿ, ಕೃತಿಗಳಿಗೆ ಸ್ಮೃತಿ. ದೃಷ್ಟಿಗಿಂತ ಸ್ಮೃತಿಸೃಷ್ಟಿಯು ಕಡಿಮೆಯೆಂದು ಹೇಳಬಹುದಾದರೂ ಧರ್ಮಶಾಸ್ತ್ರವು ಶ್ರುತಿಗೆ ಸರಿಯಾಗಿ ಸ್ಮೃತಿಯನ್ನು ರಚಿಸುವಂತೆ, ದೃಷ್ಟಿಗೆ ಸರಿಯಾಗಿ ಸೃಷ್ಟಿಯನ್ನು ಮಾಡಬಹುದು. ದೃಷ್ಟಿಯ ಬೆಂಬಲವಿಲ್ಲದ ಸ್ಮೃತಿಯೊಂದು ವಿಕಲ್ಪ. ದೃಷ್ಟಿಯಿಂದಲೆ ದಿಟ; ಕೇವಲ ಸ್ಮೃತಿಯ ಸೃಷ್ಟಿಯಿಂದಲೆ ಸಟೆ ಹೀಗಿದೆ ದಿಟ ಸಟೆಗಳ ಮೂಲ. ಆನಂದವೆ ದಿಟವಾಗಿದೆ, ಉಳಿದುದೆಲ್ಲ ಸಟೆಯಾಗಿದೆ ಎಂದು ಎಂಥ ನಿರಾಶಾವಾದಿಯಾದ ಕವಿಯ ಕಾವ್ಯವೂ ಧ್ವನಿತ ಮಾಡುವದು. ನಿರಾಶೆ ಮತ್ತು ಕವಿ ಎಂಬ ಮಾತುಗಳೆ ಪರಸ್ಪರ ವಿರುದ್ಧವಾಗಿವೆ. ಆದರೂ ಹಾಗೆ ವ್ಯವಹಾರವಿದೆ, ಅದರ ಅರ್ಥವೇನೆಂದರೆ-ಹಿಗ್ಗನ್ನು ಹುಡುಹುಡುಕುತಿರುವವನೆ ನಿರಾಶಾವಾದಿಯು. ಆನಂದವಿಲ್ಲದೆ ಸೃಷ್ಟಿಯಿಲ್ಲ. ಪರಬ್ರಹ್ಮವೂ ಆನಂದಿತವಾದಾಗಲೆ ಸೃಷ್ಟಿಗೆ ಪ್ರಾರಂಭ. ಸುಗ್ಗಿಯ ಚಿಗುರು ಭೂಮಿಯ ರೋಮಾಂಚ. ಮಕ್ಕಳು ಮರಿಯ ಪ್ರಪಂಚ ಹಿಗ್ಗಿನ ಸುಗ್ಗಿ. ಈ ಆನಂದದಲ್ಲಿ ಕೀಳು ಮೇಲುತನವಿರಲಿ, ಸ್ಥೂಲ ಸೂಕ್ಷ್ಮ ಭೇದವಿರಲಿ; ಆದರೂ ಇದು ಆನಂದವೆ.

ಈ ಆನಂದವೆ ಕಾವ್ಯಾನಂದವಾಗುತ್ತಲೆ ರಸವೆಂಬ ಹೆಸರನ್ನು ಪಡೆಯುವದು. ಆದರೆ ಮೊದಲು ರಸವೆಂಬುದು ಆನಂದವಾಚಕವಾಗಿತ್ತು. 'ರಸೋ

ವೈ ಸಃ' ಎಂದು ಸಾರುವ ಶ್ರುತಿಯು ರಸವನ್ನು ಪರಬ್ರಹ್ಮವೆಂದು ಹೇಳು ವದು. ರಸವನ್ನು ದಾಟಿ 'ರಸವರ್ಜ್ಯಂ ಪರಂ ದೃಷ್ಟ್ವಾ ರಸೋಽಪ್ಯಸ್ಯ ನಿವರ್ತತೆ' (ಗೀತಾ), ಅವನ ನಿಲುವೆಂದು ಹೇಳುವ ಶ್ರುತಿಯೂ ಇದೆ. ಆತ್ಮ-ಪರಮಾತ್ಮರ ಸಂಗಮವು ಆನಂದದಲ್ಲಿ ಎಂದು, ಎಲ್ಲ ಮಹಾನುಭಾವಿಗಳೂ ಸಾರಿದ್ದಾರೆ. ಆತ್ಮರಾಜನ ತಲೆಗೆ ಛತ್ರವಾದೀ ಆನಂದವು ಪರಮಾತ್ಮ ಪದವಾಗಿದೆ. ಇದು ಎಲ್ಲ ಸೃಷ್ಟಿಯನ್ನು ನೂಗುತ್ತಿದೆ. ಬಾಳುವೆಯ ಬೆಳು ವಣಿಗೆಯನ್ನು ತೂಗುತಿದೆ. ಎಲ್ಲ ಲಯ-ಸಂಹಾರಗಳಲ್ಲಿ ಇದರ ಕೂಗೇ ಕೇಳಿಬರುವದು. ಆದರೆ ಕಡಲಿನಲ್ಲಿ ತುಂಬಿ ಇದ್ದರೂ ತಂಬಿಗೆಯಲ್ಲಿಂಬಿರು ವಷ್ಟೆ ನೀರು ಬರುವದು. ಹಾಗೆಯೆ ಆನಂದದ ಕೂಗು. ಅದನ್ನು ಕೇಳುವ ಕಿವಿ ಬೇಕು. ಕಣ್ಣು ಬಣ್ಣಗಾರ; ಕಿವಿಯೇ ಕವಿ. ಅದರಿಂದಲೆ ಎಲ್ಲೆಲ್ಲಿಯೂ ತುಂಬಿದ ಆನಂದವು ಕೇಳಬರುವದು. ಆ ಸಾಮರ್ಥ್ಯದಿಂದಲೆ ಕವಿಗಳು 'ಕಿವಿಯಿಂದೀಂಟಿಸುವರ್ ಸಮಸ್ತರಸಮಂ.'

ಆನಂದವು ರಸವೆನಿಸಬಹುದಾದರೂ ಕಾವ್ಯರಸವು ಆನಂದವೆಂದೆನ್ನ ಬಹುದೇ? ಎಂದು ಪ್ರಶ್ನಿಸಬಹುದು. ಭಟ್ಟನಾಯಕ, ಆನಂದವರ್ಧನ, ಅಭಿನವಗುಪ್ತ, ಜಗನ್ನಾಥ ಪಂಡಿತರು, ಕಾವ್ಯವು ಬ್ರಹ್ಮಾನಂದ ಸದೃಶ ವೆಂದು ಪರ್ಯಾಯದಿಂದಲೂ, ಪರಿಸ್ಫುಟವಾಗಿಯೂ ಹೇಳಿದ್ದಾರೆ. ಹಾಗಾದರೆ ಆ ಸಾದೃಶ್ಯವನ್ನು ತಿಳಿದುಕೊಳ್ಳುವದೆ ನಮ್ಮ ಕಾರ್ಯ. 'ಆನಂದಮಯ ಪುರುಷನಿಗೆ ಆತ್ಮವೇ ಆನಂದ, ಪ್ರಿಯವೆ ಶಿರ, ಪ್ರಮೋದವೆ ಉತ್ತರಪಕ್ಷ, ಮೋದವೇ ದಕ್ಷಿಣಪಕ್ಷ, ಬ್ರಹ್ಮವೆ ಪ್ರತಿಷ್ಠೆ' ಎಂದು ತೈತ್ತಿರಿಯೋಪನಿಷತ್ತಿನ ಬ್ರಹ್ಮಾನಂದವಲ್ಲಿಯಲ್ಲಿ ಹೇಳಿದ್ದಾಗಿದೆ. ಕಾವ್ಯಾನಂದವು ಅದಕ್ಕೆ ಹೇಗೆ ಸದೃಶವಾಗುವದು? ಬ್ರಹ್ಮಾನಂದವೆ ಏಕಾಗುವದಿಲ್ಲ? ಎಂದರೆ ಬ್ರಹ್ಮಾ ನಂದವು ತನ್ಮಯವು; ಕಾವ್ಯಾನಂದವು ಹಾಗಲ್ಲ. ಕಾವ್ಯಾನಂದವು ಸ್ವಮಾನಸ ಸೃಷ್ಟಿ ಜನಿತವಾಗಿದ್ದರೂ, ಆ ಸೃಷ್ಟಿಗೇ ಬ್ರಹ್ಮಸೃಷ್ಟಿಯು ನಿಮಿತ್ತಮಾತ್ರವಾಗಿ ಯಾದರೂ—ಆಧಾರವಾಗಿದೆ. ಸ್ವಗತವಾಗಿದ್ದರೂ ನಿಮಿತ್ತಾಪೇಕ್ಷೆಯಿರುವದ ರಿಂದಲೇ ಸಾದೃಶ್ಯವು ಬಂದಿತು; ಸಾಯುಜ್ಯತೆಯು ಬರಲಿಲ್ಲ. ವ್ಯವಹಾರದಲ್ಲಿ ನಮಗಾಗುವ ಆನಂದವು ವಿಷಯಾಧೀನವಾಗಿದೆ. ಕಾವ್ಯವು ಈ ಅಧೀನತೆ ಯಿಂದ ಬಿಡಿಸುವದು. ಇದೇ ಇದರ ಅಲೌಕಿಕತೆ. ನಮ್ಮ ಭಾವಕ್ಕೆ ವಿಭಾವ

ಗಳು ಆಧಾರಭೂತ ವಿಷಯುಗಳಲ್ಲ; 'ಬಹಿರರ್ಥಸಮುದ್ಭಾವಿತಮನುಭವೆ ಭವಂ ವಿಭಾವಂ' ಎಂದು ನಾಗವರ್ಮನು ಹೇಳುವನು. ವಿಭಾವವು ಅನುಭವ ಜನಿತವು ಆ ಅನುಭವವು ಬಹಿರರ್ಥಗಳ ನಿಮಿತ್ತದಿಂದ ಉದ್ಭವಿಸಿ ದೆಂಬುದೇನೋ ನಿಜ. ಆದರೆ ಈ ಬಹಿರರ್ಥಗಳೇ ಪರೆ ಸೃಷ್ಟಿಯೊಳಗಿನ ವಿಷಯು ಗಳಲ್ಲ. 'ನೆನೆಯಿಸುಗುಂ ಮನಂ ಮರೆಯಿಸಿರ್ದ ಪದಾರ್ಥಮಂ' ಎಂದು ಇದನ್ನೆ ಕವಿಕಾಮನು ಇನ್ನೊಂದು ವಿಧವಾಗಿ ತಿಳಿಸಿ ಹೇಳುವನು. ಪದಾರ್ಥ ಗಳು ಮರೆಯಾದ ಮೇಲೆ ಅದರ ನೆನೆವಿಂದಾದುದೆ ಚಿತ್ತಕ್ಕೆ ಬಹಿರರ್ಥ; ಇದೆ ವಿಭಾವದ ನೆಲೆ. ಕಾವ್ಯಸೃಷ್ಟಿಯು ಮಾನಸಸೃಷ್ಟಿಯು. ಅದರೊಳಗಿನ ಪ್ರಪಂಚವೆಲ್ಲ ಮನೋಜನಿತ. ಸ್ಥೂಲವಿಷಯುಗಳಲ್ಲ. ಸ್ಥೂಲವಿಷಯುಗಳ ಮೂಲವನ್ನು ಕಾಣಲು ಹೊರಟ ಪದಾರ್ಥವಿಜ್ಞಾನಿಯೂ ಅದೊಂದು ಪ್ರಾಣಪ್ರಪಂಚವೊ ಮಾನಸಸೃಷ್ಟಿಯೊ ಎಂದು ಅದನ್ನೆ ಭಿನ್ನದೃಷ್ಟಿಯಿಂದ ಕಾಣುತ್ತಿರುವಾಗ ಕವಿದೃಷ್ಟಿಗೆ ಹೊಳೆಯುವ ಸೃಷ್ಟಿಯಂತೂ ವಿಷಯಪರತಂತ್ರ ವೆಂದೆನಿಸಬರದು. ಬ್ರಹ್ಮಸದೃಶವಸ್ತುವೆ ಕವಿಭಾವಕ್ಕೆ ವಿಭಾವ; ಇದೇ ಸೌಂದರ್ಯನಿಧಿ. ಹೂವಿನ ಮಕರಂದವನ್ನು ಹೀರಿ ಜೇನುನೊಣವು ಅದನ್ನು ಜೇನನ್ನಾಗಿ ಮಾಡುವಂತೆ ಕವಿಯು ತನ್ನ ಪ್ರೀತಿ-ದೃಷ್ಟಿಯಿಂದ ನೋಡಿ ತೋರುವದೆಲ್ಲವನ್ನೂ ಮಧುವನ್ನಾಗಿ ಮಾಡುವನು. ಈ ಪ್ರೀತಿ-ದೃಷ್ಟಿಯೆ ಈ ಕವಿದೃಷ್ಟಿಯೆ—ಪ್ರಿಯವೆಂಬ ಶಿರವು. ತನ್ನಿಂದ ತಾನೆ ನಿರ್ಮಿಸಿದ ಜೇನನ್ನು ಕುಡಿದು ಝೇಂಕರಿಸುವ ಭ್ರಮರಸಂಗೀತವೇ ಆನಂದ ಶ್ರುತಿಯು. ಅಂತೂ, ಕಾವ್ಯಾನಂದವು ಅಲೌಕಿಕವಾಗಿರುವದರಿಂದಲೂ ಕವಿಯ ಆತ್ಮ ನಿರ್ಮಿತವಾಗಿರುವದರಿಂದಲೂ ಬ್ರಹ್ಮಾನಂದ ಸದೃಶವಾಗಿರುವದು.

ಆದರೆ ಕಾವ್ಯಾನಂದದಲ್ಲಿ ನೆಲೆನೆಲೆಗಳುಂಟು. ಪುರುಷೋತ್ತಮನ ಬ್ರಹ್ಮ ಕಾವ್ಯದ ರಸವನ್ನು ಪಂಚೇಂದ್ರಿಯಗಳಿಂದೀಂಟಿ, ಆತ್ಮದಿಂದ ಮಧುವ ನ್ನಾಗಿ ಮಾಡಿ, ಮೋದ ಪ್ರಮೋದಗಳ ಸ್ಫುರಣಾನುಭವರೋಮಾಂಚಿತನು ಸ್ತಂಭಿತನು ಗದ್ಗದಿತನು ಆಗಿ, ಕವಿಯು ಅನುಪಮಯ ಪುರುಷನು ಪಡೆವ ಆನಂದವು ಕಾವ್ಯಾನಂದಕಂದವು. ಅದನ್ನೆ ವೈಖರಿಯಲ್ಲಿ ವರ್ಣಿಸುವಲ್ಲಿ ಉಂಟಾಗುವ ಆನಂದವು ಬೇರೊಂದು. ಅದನ್ನು ಹಾಡಿತೋರಿಸುವ ಗಮಕಿಗೆ ಆಡಿತೋರಿಸುವ ನಟನಿಗೆ ಆಗುವ ಆನಂದವು ಇನ್ನೊಂದು ನೆಲೆ. ಅದನ್ನು

ಕೇಳುವ ವಾಚಕರಿಗೆ, ನೋಡುವ ಪ್ರೇಕ್ಷಕರಿಗೆ ಆಗುವ ಕಾವ್ಯಾನಂದವು ಕೊನೆಯ ನೆಲೆ. ಆನಂದವು ವಿಗಲಿತ ವೇದ್ಯಾಂತರವು ಎಂದರೆ ಆನಂದಾನುಭವದಲ್ಲಿ ಬೇರೊಂದರ ನೆನವೇ ಇರುವದಿಲ್ಲ ಎಂಬ ಮಾತಿಗೆ ಕೆಲ ವಿಮರ್ಶಕರು ಚೆನ್ನಾಗಿ ಅರ್ಥಮಾಡಿಕೊಂಡಂತೆ ತೋರುವದಿಲ್ಲ. ಅಂತರ್ಗತವಾದ ಆನಂದವು ಒಂದು ಬಗೆಯಾದರೆ ಆವಿಷ್ಕೃತವು ಇನ್ನೊಂದು ಬಗೆ. ಕವಿಗೆ ಕಾವ್ಯ ಬರೆವುದರಲ್ಲಿ, ನಟ ಗಮಕಿಗಳಿಗೆ ಆಡಿ-ಹಾಡಿ-ತೋರಿಸುವದರಲ್ಲಿ ಆನಂದವಿದೆ ಆನಂದವು ಅವತಾರಿಗೆ ಲೀಲೆಯಲ್ಲಿದ್ದಂತೆ. ಕವಿಯ ಅಂತರ್ಗತ ಆನಂದವು ಸೃಷ್ಟಿಯು; ಕಾವ್ಯರಚನೆ ಪಠನೆ ನಟನೆಗಳಲ್ಲಿ ಅದರ ಬೆಳವಣಿಗೆಯು, ವಾಚಕರ ಪ್ರೇಕ್ಷಕ ಅಂತಃಕರಣದಲ್ಲಿ ಅದರದೇ ಲಯವು. ಹೀಗೆ ಒಂದೇ ಆನಂದವೇ ನಿವೃತ್ತಿ ದ್ರುತಿ ವಿಶ್ರಾಂತಿ ಎಂಬ ಮೂರು ಗತಿಗಳಲ್ಲಿ ಮುಕ್ತಾಯವನ್ನು ಹೊಂದುವದು. ಶುದ್ಧಬ್ರಹ್ಮಾನಂದವೊಂದನ್ನು ಬಿಟ್ಟರೆ ಉಳಿದೆಲ್ಲದುದಕ್ಕೂ ನಿಮಿತ್ತಾಪೇಕ್ಷೆಯಿದೆ. ಆ ನಿಮಿತ್ತವು ಬ್ರಹ್ಮ.

---

## ೫. ಕವಿಯ ಅನುಭವ

ಕವಿತೆ ಎಲ್ಲರ ಮನೆಯಲ್ಲೂ ಬೆಳೆಯುವ ಹೀರೆ ಹೂವಲ್ಲ; ಕೆಲವು ಜನರ ಮನಸ್ಸಿನ ಉದ್ಯಾನದಲ್ಲರಳಿದ ಮಂದಾರ ಕುಸುಮ. ವ್ಯವಹಾರಕ್ಕೆ ಸೇರಿದ ವಿಪರೀತ ವ್ಯಾಪಾರ, ಸರಸ್ವತಿಯ ಸೇವೆ. ಹೀಗಾಗಿ ಬಹುಭಾಗದ ಜನಕ್ಕೆ ಕವನ ಕಟ್ಟುವ ಕಲೆ ಹಸ್ತಗತವಾಗಿಲ್ಲ. ನೂರರಲ್ಲಿ ಒಬ್ಬನಿಗೆ ಮಾತ್ರ ಈ ಕಲೆ ವಶವಾಗಿರುವುದರಿಂದ ಜನ ಆತನ ಬೆಲೆಯನ್ನು ಹೆಚ್ಚಿಸುತ್ತಾರೆ. ಕವಿತೆಯನ್ನೋದಿ ಆನಂದಿಸಿದ ಜನ, ಆತನಡಿಗೆ ಮೆಚ್ಚುಗೆಯ ಮಾಲೆಯ ಸುಮವನ್ನರ್ಪಿಸುತ್ತಾರೆ. ಹೀಗಾಗಿ ವಾಚಕರಿಂದ ಕವಿಯ ಕೀರ್ತಿ ಹೆಚ್ಚಿದೆ; ಬೆಲೆ ಏಂದೆ!

ಇದರಿಂದಾಗಿ ಸಮಾಜದಲ್ಲಿನ ಮಹತ್ವದ ವ್ಯಕ್ತಿಯಾಗಿದ್ದಾನೆ ಕವಿ. ಆತನಿಗಾಗೇ ಒಂದು ವಿಶಿಷ್ಟಸ್ಥಾನವಿದೆ; ಮಾನವಿದೆ. ಹಿಂದಿನ ಕಾಲದಲ್ಲಿ ರಾಜರು ಇದಕ್ಕಾಗಿಯೇ ತಮ್ಮ ಆಸ್ಥಾನದಲ್ಲಿ ಕವಿಗಳನ್ನಿಟ್ಟುಕೊಂಡು

ಕಾಪಾಡುತ್ತಿದ್ದರು. ಕವಿಯ ಮನಸ್ಸಿಗೆ ಕೊರತೆ ಕಾಣದಂತೆ ಸಾಕುತ್ತಿದ್ದರು. ಕವಿಯನ್ನು ಸಂತುಷ್ಟಸ್ಥಿತಿಯಲ್ಲಿಡಲು ಯತ್ನಿಸುತ್ತಿದ್ದರು. ಕಾರಣ, ಕೆರಳಿದ ಕವಿ, ಕಾಳಿಂಗಸರ್ಪ. 'ಷಹನಾಮಾ' ಬರೆದ ಕವಿಗೆ ಸುಲ್ತಾನ ಪದ್ಯ ಒಂದಕ್ಕೆ ಚಿನ್ನದ ಮೊಹರು ಕೊಡುವುದಾಗಿ ಒಪ್ಪಿದನಂತೆ. ಸರಸ್ವತಿಯ ಪುತ್ರರು ಲಕ್ಷ್ಮಿಗೆ ಮಲಮಕ್ಕಳು! ದೊರೆಯ ಮಾತಿನಿಂದ ಉತ್ಸಾಹಿತನಾದ ಕವಿ, ಲಕ್ಷಗಟ್ಟಲೆ ಪದ್ಯಗಳನ್ನು ರಚಿಸಿದ. ದೊರೆಗೆ ಯೋಚನೆಯಾಯಿತ್ತು ಇಷ್ಟು ಹೊನ್ನು ಎಲ್ಲಿಂದ ತರುವುದು? ಯೋಚಿಸಿ ಹೇಳಿದ— 'ಚಿನ್ನದ ನಾಣ್ಯದ ಬದಲು— ಬೆಳ್ಳಿಯದನ್ನು ಕೊಡುತ್ತೇನೆ.' ಅರಸನ ಮಾತು ಕೇಳಿ ಕವಿಗೆ ಕೋಪ ಬಂತು. ಕಾವ್ಯದ ಕೊನೆಗೊಂದು ಪದ್ಯ ಸೇರಿಸಿದ. 'ಇಷ್ಟೆಲ್ಲಾ ಆಯಿತು; ಆದರೆ ದೊರೆಯ ಗೋತ್ರ ತಿಳಿಯದು.' ಆಯಿತು. ಕವಿಯೋ ಕಟ್ಟಿದ ದೊರೆಯ ಕೀರ್ತಿಕಳಸ ಮಣ್ಣು ಮುಕ್ಕಿತು. ಇದೇ ರೀತಿ ತೈಮೂರಲಂಗನ ಕವಿಯದೂ ದೊರೆ ತನಗೇನೋ ಉಪಕಾರ ಮಾಡುವನೆಂದು ಆತ ಬಹಳ ದಿನ 'ಚಾತಕವ್ರತ' ಮಾಡಿದ. ಏನೂ ಉಪಯೋಗವಾಗಲಿಲ್ಲ. ಮನಸ್ಸು ನೊಂದಿತು. ಒಂದು ದಿನ ಸ್ನಾನಗೃಹದಲ್ಲಿ ತೈಮೂರಲಂಗ ಸ್ನಾನ ಮಾಡಿ ಮುತ್ತಿನ ಜಾಲರಿಯ ಬಟ್ಟೆಯಲ್ಲಿ ಮೈ ಒರಸಿಕೊಳ್ಳುತ್ತಿದ್ದ. ಪಕ್ಕದಲ್ಲಿದ್ದ ಕವಿಯನ್ನು ಹೆಮ್ಮೆಯಿಂದ ಕೇಳಿದ. 'ನನ್ನ ಬೆಲೆ ಏನು ಹೇಳಬಲ್ಲೆಯಾ?' ಕವಿ ಹೇಳಿದ 'ಲಕ್ಷಮೊಹರು.' 'ಅಷ್ಟು ಬೆಲೆ ನಾನು ಮೈ ಒರಸುತ್ತಿರುವ ಬಟ್ಟೆಗೊಂದಕ್ಕೆ ಆಗುತ್ತದೆ' ಎಂದ ತೈಮೂರಲಂಗ. 'ನಾನು ಹೇಳಿದ್ದೂ ಅದೆ' ಎಂದು ಉತ್ತರ ಕೊಟ್ಟ ಕವಿ. ತೈಮೂರಲಂಗನ ಗತಿ ಏನಾಯಿತೋ ಈ ಮಾತು ಕೇಳಿ! ಇಂತಹ ಕವಿಯ ಸೇಡಿನ ಕತೆಗಳು ನೂರಾರು ಇವೆ. ಇವುಗಳೆಲ್ಲಾ ಗರಿಕಟ್ಟಿಕೊಂಡು ಕವಿ ಬೆದರಿಸುವ ಗುಮ್ಮನಾಗಿದ್ದಾನೆ. ಇದರಿಂದ ಕವಿಗೆ ಸಲ್ಲುವ ಸೇವೆಯೂ ಹೆಚ್ಚಿದೆ. ಹಣವಿಲ್ಲವಾದರೂ ಹೋಗಲಿ, ಹೆಸರಾದರೂ ಹೆಚ್ಚಿದೆ!

ಕವಿಹೃದಯದ ಚಿಲುಮೆಯಲ್ಲಿ ಕಾವ್ಯಜಲ ಒಸರುವುದು. ಮನಸ್ಸಿನ ಮೋಡದಲ್ಲಿ ಪ್ರತಿಭೆಯ ಮಿಂಚು ಹೊಳೆದಾಗ— ಕವನರಚನೆ; ಇಟ್ಟಿಗೆಯಿಂದ ಕಟ್ಟಿದ ಗೋಡೆಯಂತೆ ಬರಿಯ ಮಾತಿನ ಮಾಲೆಯಲ್ಲ. ಸ್ಫೂರ್ತಿಯಿಂದ ಮೂಡಿದ ಕಲೆಯಲ್ಲಿ ಮಾತನ್ನು ಪ್ರಕಾಶಗೊಳಿಸುವ ಬೆಳಕಿದೆ. ಸ್ಫೂರ್ತಿ

ಯಿಂದ ಮಾಡಿದ್ದೇ ನಿಜವಾದ ಕವಿತೆ. ಕವಿತಾಕಲೆ ಉಪಾಸಕರಿಗೆ ಕಠಿಣ ಸಾಧರಣ ನೋಡುವವರಿಗೆ ಸುಲಭವೆಂದೇ ಕಾಣಿಸುತ್ತದೆ. ಇಂತಹ ಭಾವನೆಯಿಂದ ಜನ, ಕವಿತೆಯನ್ನು ತಮಾಷೆ ಮಾಡುತ್ತಾರೆ; ವಿಡಂಬನೆ ಮಾಡಿದ್ದಾರೆ. ವಿಡಂಬನೆಯ ಉದ್ದೇಶ ಗೇಲಿಮಾಡುವುದಾದರೂ ಫಲ ನಿಂದಾಸ್ತುತಿಯಂತಾಗಿದೆ. ಇದರಿಂದ ಕವಿಗಳ ಕೀರ್ತಿ ಬೆಳೆದಿದೆ. ಅವನ ಕಲೆಯ ವಿಶ್ವರೂಪದ ಪರಿಚಯವಾಗಿದೆ. ಈ ದೃಷ್ಟಿಯಿಂದ ನೋಡಿದಾಗ ವಿಡಂಬನೆಯೂ ಒಂದು ರೀತಿಯ ವಿಮರ್ಶೆಯೆ!

ಕವಿಯ ಜೊತೆಗೆ ಅವನನ್ನರಿಯುವ ವಿಮರ್ಶಕ ಹುಟ್ಟದಿದ್ದರೆ, ಕವಿಯ ಬಾಳು ವ್ಯರ್ಥ. ವಿಮರ್ಶಕನಿಲ್ಲದ ಕವಿ, ಅರ್ಥವಾಗದ ಗ್ರಂಥದಂತೆ. ವಿಮರ್ಶಕನು ಲೇಖಕ ವಾಚಕರ ನಡುವಿನ ಮಾಧ್ಯಮ (Medium). ವಿಮರ್ಶೆ, ಕಾವ್ಯಾಕಾಶದ ತಾರೆಗಳನ್ನು ಸ್ಪಷ್ಟವಾಗಿ ತೋರಿಸುವ ದೂರದರ್ಶಕ. ಇದಿಲ್ಲದೆ ಕವಿಯ ಪರಿಚಯ ವಾಚಕರಿಗಾಗುವಂತಿಲ್ಲ; ವಾಚಕರ ಪರಿಚಯ ಕವಿಗಾಗುವಂತಿಲ್ಲ. ಈ ದೃಷ್ಟಿಯಿಂದ ವಿಮರ್ಶಕನೇ ಕವಿಯನ್ನು ಸೃಷ್ಟಿಸಿದನೆಂದರೂ ಸಲ್ಲುತ್ತದೆ. ಮೆಚ್ಚುಗೆಯಿಂದ ಮೂಲದಲ್ಲಿದ್ದುದು ಬೆಳೆಯುತ್ತದೆ.

ಹಾಡಲು ಬಂದುದೆಲ್ಲಾ 'ಕವಿತೆ' ಎಂಬ ಅಭಿಪ್ರಾಯ ಅನೇಕರಲ್ಲಿ ಮನೆ ಮಾಡಿಕೊಂಡಿವೆ. ಅದು ಹಾಗಲ್ಲ; ಹಾಡಲು ಗದ್ಯವಾದರೇನು ಪದ್ಯವಾದರೇನ? ಹಿಂದೆ ವಚನಗಳನ್ನೂ ಹರಿದಾಸರ ಹಾಡುಗಳಂತೆ ಹಾಡುತ್ತಿರಲಿಲ್ಲವೆ? ಆದುದರಿಂದ ಹಾಡ ಬರುವುದೊಂದೇ ಕವಿತೆಯ ಲಕ್ಷಣವಲ್ಲ. ಕವಿತೆಗೆ ಕವಿತೆಯದೇ ಆದ ಹಲವಾರು ವಿಶಿಷ್ಟ ಲಕ್ಷಣಗಳಿವೆ. ಮೆಚ್ಚುಗೆಗೆ ಪಾತ್ರವಾಗಿದ್ದ ಕವಿತೆ ಮೇಲಿನ ತಪ್ಪು ತಿಳಿವಳಿಕೆಯಿಂದ ತುಚ್ಛತೆಗೂ ಗುರಿಯಾಗಿದೆ. ಹಿರಿತನದ ಮುಕುಟ ಹೊತ್ತ ಕವಿತೆ, ಹುಲ್ಲೂ ಹೊತ್ತಿದೆ. ಅದು 'ಅಣೋರಣಿಯಾನ್ ಮಹತೋ ಮಹೀಯಾನ್'

ಕವಿತೆ ಕವಿಯ ಅನುಭವದ ಪ್ರತಿಬಿಂಬ; ಹೂವನ್ನು ನೋಡಿ ಆನಂದವಾದಾಗ ಆತ ಹೂವಿನ ಮೇಲೊಂದು ಕವಿತೆ ರಚಿಸುತ್ತಾನೆ ಎಂದು ಹಲವರು ಹೇಳುವದುಂಟು. ಅದು ನಿಜವಲ್ಲ. ಹೂವನ್ನು ನೋಡುತ್ತಾ ಕವಿ ಹಕ್ಕಿಯ ಮೇಲೆ ಹಾಡು ಕಟ್ಟಬಹುದು. ಕವಿತೆ ಬರೆಯುವಾಗ ಕಣ್ಣಿಗೆ

ಕಾಣುವ ವಸ್ತು ಒಂದು ನೆಪ ಮಾತ್ರ: ಪ್ರೇರಕವಲ್ಲ. ಕವಿ ಇಂತಹುದೊಂದನ್ನು ಬರೆಯಬೇಕೆಂಬ ನಿಶ್ಚಯದಿಂದ ಬರೆಯಲಾರಂಭಿಸುವುದಿಲ್ಲ. ಬಂಗಾಲದ ಸುಪ್ರಸಿದ್ಧ ಚಿತ್ರಕಾರ ನಂದಲಾಲ್ ಬೋಸ್‌ರು ಒಮ್ಮೆ ಹೇಳಿದರಂತೆ: 'ಅಯ್ಯಾ, ಯಾವ ವಿಷಯವನ್ನೂ ಮನಸ್ಸಿನಲ್ಲಿಟ್ಟುಕೊಂಡು ಚಿತ್ರ ಬರೆಯಲಾರಂಭಿಸಬಾರದು. ಆಗಳಿಗ್ಗೆ ಮನಸ್ಸಿನಲ್ಲಿ ಮೂಡಿದ್ದನ್ನು ತೆರೆಯ ಮೇಲೆ ಮೂಡಿಸಬೇಕು.' ಈ ಮಾತು ಕವಿತೆಗೂ ಅನ್ವಯಿಸುತ್ತದೆ. ಕವಿತೆ ಆಗ ಬಂದ ಸ್ಫೂರ್ತಿಯ ಫಲ. ಅನುಭವದ ಫಲವಲ್ಲ. ಇದಕ್ಕೆ ನನ್ನ ಅನುಭವದೊಳಗಿನ ಹಲವಾರು ಉದಾಹರಣೆಗಳನ್ನು ಕೊಡಬಹುದು:

'ಹಕ್ಕಿ ಹಾರುತಿದೆ' ಎನ್ನುವ ಕವನ ಶಾಲೆಯ ಪಠ್ಯಪುಸ್ತಕಗಳಲ್ಲಿ ಸೇರಿ ಹೆಸರು ಗಳಿಸಿದೆ. ಅದು ಹುಟ್ಟಿದ ಬಗೆ ಹೀಗೆ: ಒಂದು ದಿನ ತುಂಬಾ ತಡವಾಗಿ ಮಲಗಿದೆ. ಮುಂಜಾವಿನಲ್ಲಿ ಎಚ್ಚರವಾದಾಗ, ಹಾಸಿಗೆ ಬಿಟ್ಟೇಳಲು ಮನಸ್ಸಿರಲಿಲ್ಲ. ಪಕ್ಕದಲ್ಲಿದ್ದ ಗಡಿಯಾರ 'ಟಿಕ್‌ಟಿಕ್' ಎನ್ನುತ್ತಾ ಮುಂದೆ ಸಾಗುತ್ತಿತ್ತು. ಇದ್ದಕ್ಕಿದ್ದಂತೆಯೇ ಕಾಲಕ್ಕೂ ಹಕ್ಕಿಗೂ ಸಾಮ್ಯ ಮನಸ್ಸಿಗೆ ಬಂದು ಹುಟ್ಟಿತು. 'ಹಕ್ಕಿ ಹಾರುತಿದೆ ನೋಡಿದಿರಾ' ಎಂಬ ಮಾತು. ಆ ಸಾಲು ಹಿಂದೆಷ್ಟೋ ಬಾರಿ, ಈ ರೀತಿ ಅನುಭವವಾಗಿದ್ದರೂ ಕವನ ಹುಟ್ಟಿರಲಿಲ್ಲ.

ಇದೇ ರೀತಿಯಲ್ಲಿ 'ಕುಣಿಯೋಣ ಬಾರs!' ಜನಿಸಿದ್ದು. ಒಮ್ಮೆ ಡಾ. ಬಾದಾಮಿಯವರು ಮನೆಗೆ ಬಂದಿದ್ದರು. ಮನೆಯಲ್ಲಿ ಮಾವಿನಹಣ್ಣಿದ್ದ ಜ್ಞಾಪಕ. ಮನೆಯವರನ್ನು ಕೇಳಿದೆ: 'ಮಾವಿನ ಹಣ್ಣು ತೆಗೆದುಕೊಂಡು ಬಾ' ಎಂತ. 'ಇಲ್ಲ' ಎಂದರು ಆಕೆ. 'ಏನಾಯಿತು' ಎಂದು ಕೇಳಿದ್ದಕ್ಕೆ, 'ಎಲ್ಲಾ ನಿಮ್ಮ ಮಿತ್ರರೇ ತಿಂದು ತಿಂದುಹಾಕಿದರು' ಎಂದು ಉತ್ತರ ಬಂತು. ಹೀಗೆ ಮಾತನಾಡಿದವರಲ್ಲಾ ಎಂದು ಸಿಟ್ಟುಬಂತು. ಸಿಟ್ಟಿನಲ್ಲಿ ಮಲಗಿರುವಾಗ ಮನೆಯ ಬಳಿಯ ಗಿಡದ ಎಲೆಗಳು ಗಾಳಿಗೆ ಸಿಕ್ಕಿ ಅಲುಗಾಡುತ್ತಿದ್ದುದು ಕಂಡುಬಂತು. ಆಗ ನನಗನ್ನಿಸಿತು ಗಾಳಿ 'ಬಾ' ಎಂದು ಕರೆಯುತ್ತಿದ್ದೆ ಗಿಡದೆಲೆ 'ಬೇಡ'ವೆಂಬಂತೆ ತಲೆಯಲ್ಲಾಡಿಸುತ್ತಿದೆ, ಅಂತ. ಯಾರಿಗೆ ಹೇಳಬೇಕು ಈ ಮಾತು. ಮನೆಯ ಹೆಂಡತಿಯ ಜೊತೆಯಲ್ಲಿ ಜಗಳವಾಡಿದ್ದೆ. ಮನಸ್ಸಿನ ಹೆಂಡತಿಯನ್ನು ಏನೆಂದು ಮಾತನಾಡಿಸುವುದು, 'ಕುಣಿಯೋಣ

ಬೋರ್ಡ' ಎಂದೆ. ಹಂಚಿಯಲ್ಲಿ ನೂಲು ಹೊರಟಂತೆ ಹೊರಟಿತು ಕವನ. ಅದೆಷ್ಟು ದಿನದ ಅನುಭವದ ಫಲವೋ ಏನೋ ಅಂತು ಅಂದು ಬಯಲು ಕಂಡಿತು. •

'ಭೃಂಗದ ಬೆನ್ನೇರಿ ಬಂತು ಕಲ್ಪನಾ ವಿಲಾಸಾ' ಎಂಬ ಕವನ ಹುಟ್ಟಿದ್ದು, ಧಾರವಾಡದ ಬಳಿಯ 'ಮುಗದ'ವೆಂಬ ಗ್ರಾಮದಲ್ಲಿ ಇಂಟರ್ನ್ಮೆಂಟ ಕ್ಯಾಂಪಿನಲ್ಲಿ. ಒಂದು ರಾತ್ರಿ ಮಲಗಿದ್ದಾಗ ಇದ್ದಕ್ಕಿದ್ದ ಹಾಗೆ ಬಂತು. ಭೃಂಗದ ಬೆನ್ನೇರಿ ಬಂತು ಕಲ್ಪನಾ ವಿಲಾಸಾ' ಎಂಬ ಸಾಲು. ಈ ಭಾವ ,ಹೀಗೆ ಒಮ್ಮಿಂದೊಮ್ಮೆಲೆ, ಏಕೆ ಬಂತೆಂದು ಯೋಚಿಸಿ ನೋಡಿದೆ. ಮಲಗಿದ್ದೆಡೆಯಲ್ಲಿ ತಲೆಯ ಮೇಲಿನ ತೊಲೆಯಲ್ಲಿ ಜೇನು ಕಟ್ಟಿತ್ತು. ಜೇನು ಹುಳುಗಳ ಸದ್ದಾಗುತ್ತಿತ್ತು. ಇದು ಕವಿತೆಗೆ ನೆಪವಾಯ್ತು. ಅಲ್ಲದೆ ಮುನ್ನಾದಿನ ಸಂಜೆ ಗುಡಿಗೆ ಹೋದಾಗ, ಗುಂಗೀ ಹುಳವೊಂದು ಬಂದಿತ್ತು. ಅದರ 'ಗುಂಯ್'ನಾದ ಓಂಕಾರವೆನಿಸಿತ್ತು. ಪ್ರಣವನಾದದಲ್ಲಿ ರೂಪುತಾಳಿ ಬರುವ ಪರಮಾತ್ಮನಂತೆ ಕಂಡಿತ್ತು ಆ ಗುಂಗೀ ಹುಳ. ಅದೊಂದು ದೃಷ್ಟಾಂತವೆನಿಸಿತ್ತು ಆಗ. ಇದು ಕನಸಿನಲ್ಲಿ 'ಭೃಂಗದ ಬೆನ್ನೇರಿ ಬಂತು ಕಲ್ಪನಾ ವಿಲಾಸಾ' ಆಗಿ ಹೊರ ಬಂತು. ಇಷ್ಟು ಉದಾಹರಣೆಗಳನ್ನು ಕೊಟ್ಟಿದ್ದು ಅನುಭವಕ್ಕೂ ಕವಿತೆಗೂ ಸಂಬಂಧವಿಲ್ಲೆಂದು ತೋರಿಸಲು. ಅನುಭವ ಒಂದು ನೆಪವಾಗಿ ಹಲವಾರು ದಿನಗಳಿಂದ ಮನೆ ಮಾಡಿಕೊಂಡ ಭಾವನೆಗಳು ಕವಿತೆಯಾಗಿ ಹೊರಗೆ ಹರಿಯುತ್ತವೆ. ಕಣ್ಣಿಗೆ ಕಾಣುವ ವಸ್ತುವಿಗೂ, ಮನಸ್ಸಿಗೂ ಸಂಬಂಧವಿದೆ; ಕವಿತೆಗೂ ವಸ್ತುವಿಗೂ ಅಲ್ಲ. ಕವಿತಾ ರಚನೆಯಲ್ಲಿ ಆ ವಸ್ತು ಒಂದು ನೆಪ ಮಾತ್ರ. ಹೀಗೆ ಅನುಭವ ಕವಿತೆಗಳಲ್ಲಿ ಹೊಂದಿಕೆ ಇಲ್ಲದುದು ಮಾತ್ರವೇ ಅಲ್ಲ, ವಸ್ತು ನಿಶ್ಚಯ; ವೃತ್ತಿ ಅನಿಶ್ಚಯ ಮತ್ತು ಶೈಲಿ ಅನಿಶ್ಚಯ; ರಸ-ಭಾವನಾಗಮ್ಯ ಎಲ್ಲವೂ ಅನಿಶ್ಚಯವೆ ಆಗಿದ್ದರೂ ಸ್ಫೂರ್ತಿ ಬಂದಾಗ ಎಲ್ಲವೂ ಅಯಸ್ಕಾಂತದಲ್ಲಿ ಸೇರಿಕೊಂಡು ಪೂರ್ಣವಾಗುತ್ತದೆ.

ಇನ್ನು ಕವಿತೆಯ ಛಂದಸ್ಸು ಎನ್ನುವ ಶಬ್ದ ಉಸಿರಿಗೆ ಸಂಬಂಧಿಸಿದ್ದು. ಉಸಿರಿನ ಗತಿ ಮನಸ್ಸಿನ ಸ್ಥಿತಿಗನುಸಾರವಾಗಿ ಬದಲಾಯಿಸುತ್ತದೆ. ಶಾಂತವಾಗಿರುವಾಗ ನಿಧಾನವಾಗಿ ಕೂಗುತ್ತಿರುವ ಉಸಿರಿನ ಗತಿ, ತೀವ್ರರಾಗದಿಂದ

ಬಿರುಸಾಗಿ ತಾಕಲಾಡುವುದು. ಆಗ ಬರುವ ಮಾತೂ ಆಗಿನ ಭಾವಕ್ಕೆ ಸಂಬಂಧಿಸಿರುತ್ತದೆ. ಆಗ ಬಂಧ-ಗತಿ-ಛಂದಸ್ಸು, ಮಾತಿಗೆ ಬಂಧ ಕಲ್ಪಿಸಿದ್ದು. ಸ್ವಾಭಾವಿಕ ಛಂದಸ್ಸು ರೂಢಿಗೆ ಬಂದದ್ದು ಶಾಸ್ತ್ರೀಯ ಛಂದಸ್ಸು. ಕವಿತೆ ಬರೆಯುವಾಗ ಪೂರ್ವಭಾವಿಯಾಗಿ ಛಂದೋ ನಿರ್ಣಯವಾಗಬಾರದು ಮೊದಲು ಬಂದ ಮಾತಿನಿಂದ ಮುಂದಿನ ಛಂದಸ್ಸು ನಿರ್ಣಯವಾಗಬೇಕು 'ಸಚ್ಚಿದಾನಂದ' ಎಂಬ ಕವನದ ಛಂದಸ್ಸು ಆ ಮಾತನ್ನು ಹಲವು ಬಾರಿ ಹೇಳಿಕೊಂಡಾಗ ತಾನೆ ನಿರ್ಣಯವಾಗುವದು ಉತ್ತಮ. ಇಂಥ ಛಂದಸ್ಸಿನಲ್ಲೇ ಬರೆದೆ. ಸಂಕಲ್ಪಮಾಡಿ ನೀರುಬಿಟ್ಟವನ ಮಾತೇ ಬೇರೆ, ನದಿಯನ್ನು ಬಣ್ಣಿಸುವಾಗ ಅಲ್ಲಿ ತರಂಗದ ಗತಿ ಇರಬೇಕು. ಆಜೀಕು Swing) ಇರಬೇಕು. ಇದಕ್ಕೆ ಉತ್ತಮ ಉದಾಹರಣೆ ಲಕ್ಷ್ಮೀಶ ಕವಿಯ 'ಸುರ ನದಿಯ' ಚಿತ್ರ. ಷಟ್ಪದಿ ಛಂದಸ್ಸು ಅಲ್ಲ; ಅದು ದೇಹ: ಆ ಕವಿತೆಯ ಗತಿ, ಅದರ ಮಿಡಿತವೆ ಆದರ ಛಂದಸ್ಸು. ಕವಿತೆಯ ಹೊರ ವ್ಯಕಟ್ಟೇ ಆದರ ಛಂದಸ್ಸಲ್ಲ. ಅದು ಬಹಿರಾವರಣ ಮಾತ್ರ. ಆದರೊಳಗಿನ ಶಕ್ತಿ ಕುಣಿತ ರೂಪಕ ಶಕ್ತಿಯೇ ಛಂದಸ್ಸು. ಛಂದಸ್ಸಿಗೂ ಸ್ವಭಾವಕ್ಕೂ ಸಂಬಂಧವಿದೆ. ಉದ್ದೀಪನ ಕಾರಣಗಳು ನೈಮಿತ್ತಿಕ. ಛಂದಸ್ಸಿಗೆ ಮಾತ್ರ ಕವಿಗೂ ಪ್ರಕೃತಿಗೂ ಸಂಬಂಧವಿದೆ. ಪ್ರಕೃತಿ ಪ್ರೇರಕಶಕ್ತಿ; ಆ ಪ್ರೇರಣೆಯಿಂದ ವ್ಯಿದಾಳುತ್ತದೆ ಛಂದಸ್ಸು.

ಇದೇ ರೀತಿಯೇ ಅಲಂಕಾರ. ಯಾವುದಾದರೊಂದು ಮಾತು ಹೇಳುವಾಗ ಅಲ್ಲಿರದ ಸಮಾನ ವಸ್ತುವೊಂದು ಬಗೆಯ ಕಣ್ಣಿಗೆ ಕಾಣಿಸುತ್ತದೆ. ಅಸಾದೃಶ್ಯದಿಂದ ಚಿತ್ರ ವ್ಯಿದಾಳುತ್ತದೆ. ಆ ಚಿತ್ರದಿಂದ ಮೂಡಿದ ಅಲಂಕಾರವೇ ಉಪಮೆ. ಹಸುಳೆಯ ಮೃದುವಾದ, ನಸುಕೆಂಬಣ್ಣದ ಕದಪನ್ನು ನೋಡಿದಾಗ, ಆಗ ತಾನೆ ಅರಳಿದ ಹೂವಿನ ಜ್ಞಾಪಕ ಬರುತ್ತದೆ. ಹೂವಿನ ಜ್ಞಾಪಕ ಬಂದೊಡನೆಯೇ ನಳನಳಿಸುವ ಕೋಮಲ ಕುಸುಮದ ಚಿತ್ರ, ಕಣ್ಣಿ ಕಟ್ಟುತ್ತದೆ. ಆಗ ಮಾತು ಹೊರಬರುತ್ತವೆ. ಹಸುಳೆಯ ಕೆನ್ನೆ ಹೂವಿನ ಹಾಗಿದೆ. ಈ ಚಮತ್ಕಾರ ಅಲಂಕಾರದ ಮೂಲ. ಅನೇಕ ವೇಳೆ ಚಿತ್ರದಿಂದ ವಸ್ತು ಕಂಡುಬರುತ್ತದೆ. ಹಸುಳೆಯನ್ನು ನೋಡಿದಾಗ ಹೂವಿನ ಜ್ಞಾಪಕ ಬರುವಂತೆ ಹೂವನ್ನು ನೋಡಿದಾಗ ಹಸುಳೆಯ ಜ್ಞಾಪಕವೂ ಬರಬಹುದು.

ಹೀಗೆಯೇ ಭೃಂಗದ ಗುಂಜಾರವದಿಂದ ಮೂಡಿತು ಕಲ್ಪನೆಯ ಚಿತ್ರ, 'ಭೃಂಗದ ಬೆನ್ನೇರಿ ಬಂತು ಕಲ್ಪನಾ ವಿಲಾಸ!' ಈ ಚಿತ್ರ ಆಗ ಹೊಳೆಯಲು ಗುಂಗೀ ಹುಳದ ಧ್ವನಿ ಕಾರಣ. ಆಂಗ್ಲರಲ್ಲಿ ಹೇಳುತ್ತಾರೆ: 'Bee in the bonnet' ಎಂದು. ಅಂದರೆ, ಆ ಮಾತಿಗೆ ಗುರಿಯಾದ ಮನುಷ್ಯ ಆಲೋಚನಾಪರವಾಗಿದ್ದಾನೆಂದು. ಭೃಂಗ ಯೋಚನೆಯ ಸಂಕೇತವಾಯ್ತು; ಧ್ವನಿಯಿಂದ ಅರ್ಥ ಬಂತು. 'ತುಂಬಿ ಬಂತು' ಎಂದೊಂದು ಮಾತಿದೆ. ಅದನ್ನು ಒಂದು ವಿಧವಾಗಿ ಹೇಳಿದಾಗ ಭಾವತುಂಬಿ ಬಂತು ಎಂದು ಅರ್ಥವಾಗುವುದಾದರೆ ಇನ್ನೊಂದು ರೀತಿ ಹೇಳಿದಾಗ ಅವನ ಜೀವನ ಪಾತ್ರ ತುಂಬಿತೆಂದು ಅರ್ಥವಾಗುತ್ತದೆ. ಈ ಅರ್ಥವೈವಿಧ್ಯ ಧ್ವನಿಯ ಕಾರ್ಯ.

ಅರ್ಥದಿಂದ ಮೂಡಿದ್ದು ಶಬ್ದ. ಕವಿಯ ಅರ್ಥ, ಭಾವಕ್ಕೂ ಶಬ್ದಕ್ಕೂ ನಿಜವಾದ ಸಂಬಂಧವಿದೆ. ಕವಿಯಿಂದ ಶಬ್ದ, ಶಬ್ದದಿಂದ ಕವಿ ಎಂದೂ ಹೇಳಬಹುದು. ಕವಿಗೆ ಮಾತೇ ಜೀವಾಳ. ಅದಕ್ಕಾಗಿಯೇ ಆತನಿಗೆ 'ಪದೋಪಜೀವಿ' ಎಂಬ ಬಿರುದು ಬಂದಿರುವುದು. ಸಾಹಿತ್ಯದಲ್ಲಿ ಶಬ್ದಕ್ಕಿರುವ ಸ್ಥಾನ ಕಡಮೆಯದಲ್ಲ. ರಸಾತ್ಮಕವಾದ ಶಬ್ದವೂ ಕಾವ್ಯವೇ! 'ಕರುಣೆ' ಎಂಬೊಂದು ಮಾತು, ಕರುಣ ರಸದ ಕಾವ್ಯವನ್ನೇ ಸೃಷ್ಟಿಸಬಲ್ಲುದು. 'ಕಠಿಣ' ಎನ್ನುವ ಮಾತೇ ವಜ್ರದಂತೆ ಬಿರುಸಾಗಿದೆ. ಇದು ಶಬ್ದಶಕ್ತಿ. ಕವಿತೆ ಶಬ್ದಶಕ್ತಿಯ ಕೈಹಿಡಿದ ಅರ್ಧನಾರೀಶ್ವರ!

ಶಬ್ದ ಅಥವಾ ಭಾಷೆ ಎರಡು ಬಗೆಯದು. ಸಂಸ್ಕೃತಿಯಿಂದ ಬಂದದ್ದೊಂದು; ಪ್ರಕೃತಿ ಕಟ್ಟಿಕೊಂಡದ್ದೊಂದು. ಸಂಸ್ಕೃತಿಯಿಂದ ಬಂದ ಭಾಷೆ ಒಂದು ವಿಶೇಷ ಪಂಗಡದವರಿಗೆ ಮಾತ್ರ ಅರ್ಥವಾಗುತ್ತದೆ. ಅದನ್ನೇ 'ದೈವೀ-ಪ್ರಾಕೃತ' ಎಂದು ಕರೆಯುವುದು. ಟಾಗೂರರು ಒಂದೆಡೆಗೆ ಹೇಳಿದ್ದಾರೆ: ಮಗುವಿಗೆ ಎಲ್ಲಾ ಭಾಷೆಯೂ ತಿಳಿಯುತ್ತದೆ. ಆದರೆ ತಾಯಿಯ ಮೇಲಿನ ಪ್ರೇಮದಿಂದ ತಾಯಿ ಕಲಿಸಿದ ಮಾತನ್ನು ಮಾತ್ರ ಕಲಿಯುತ್ತದೆ.' ಕನ್ನಡದ ಕೂಸನ್ನು ಎತ್ತಿಕೊಂಡು ತಾಯಿ 'ನನ್ನ ಚಿನ್ನ' ಎಂದು ಮುತ್ತಿಟ್ಟಾಗ, ಆ ಮಗುವಿನ ಮುಖದಮೇಲೆ ನಗೆಯರಳುವಂತೆ, ಅದೇ ಕೂಸನ್ನು ತೆಲುಗಿನಾಕೆ ಎತ್ತಿಕೊಂಡು 'ನಾ ಬಂಗಾರು' ಎಂದಾಗಲೂ ಅರಳುತ್ತದೆ. ಕಾರಣ ಮಗುವಿಗೆ ಗೊತ್ತಿರುವ ಭಾಷೆ ದೈವೀ-ಪ್ರಾಕೃತ ಭಾಷ ಅರ್ಥವಾದರೆ

ಸಾಕು ಮಾತೇ ತಿಳಿಯಬೇಕೆ? ಈ ದೈವೀ-ಪ್ರಾಕೃತ ಎಲ್ಲಾ ಭಾಷೆಗಳ ತಳಹದಿ. ಕವಿ ತನ್ನ ಕಾವ್ಯವನ್ನು ರಚಿಸುವುದು ಈ ಭಾಷೆಯಲ್ಲಿ. ಅದಕ್ಕಾಗಿಯೇ ಕಬೀರರ ಗೀತೆಗಳು ಕನ್ನಡಿಗರಿಗೂ ತಿಳಿಯುತ್ತವೆ. ಭಾಗವತ ಓದಿದಾಗ ಅರ್ಥವಾಗದ ಹಳ್ಳಿಗರೂ ತಲೆದೂಗುತ್ತಾರೆ.

ಅಷ್ಟೇಕೆ? ಭಾಷೆ ಬೇರಾದರೂ ಭಾವಸಾಮ್ಯವಿದ್ದಲ್ಲಿ ನಾದಸಾಮ್ಯ ವಿರುತ್ತದೆ. ಸ್ವರ ಮತ್ತು ವರ್ಣದ ಯೋಜನೆಯೇ ಹೀಗಿದೆ ಕನ್ನಡದಲ್ಲಿ 'ಮೂಗು' ಎಂದಾಗ ಮುಂದಕ್ಕೆ ಚಾಚಿಕೊಂಡಿರುವ ವಸ್ತುವೆಂದು ಅರ್ಥವಾಗುವಂತೆ, ಇಂಗ್ಲಿಷಿನಲ್ಲಿ 'ನೋಸ' ಎಂದಾಗಲೂ ಆಗುತ್ತದೆ ಅಲ್ಲಿ ಭಾಷೆ ಬೇರೆ. ಭಾವ ಒಂದೇ; ಆದುದರಿಂದ ನಾದ ಒಂದೇ. ನಾದದ ಮೂಲ ಭಾವ. ಕೋಮಲ ಭಾವವಿದ್ದಲ್ಲಿ ಮೃದುವಾದ ಮಾತು ಬರುತ್ತದೆ. ತಮ್ಮ ಪತ್ನಿಯನ್ನು ಸಿಟ್ಟಿಗೊಂಡು ಬೈಯುವಾಗ ಯಾರೂ 'ಪ್ರಿಯೇ' ಎಂದು ಸಂಬೋಧಿಸುವುದಿಲ್ಲ. ಆಗಿನ ಮಾತೇ ಬೇರೆ. ನಾವ ಸುಜನಿತಕ್ರಿಯೆ ನಮ್ಮ ಮಾತು ಮನದ ಗತಿಯನ್ನು ಸೂಚಿಸುತ್ತದೆ. ಎಂದೇ 'ತನು ವೀಣಾ ದಂಡು' ಎಂದ ಕನ್ನಡದ ವೈಯಾಕರಣಿ ಕೇಶಿರಾಜ. ಮಾತಿನ ವೀಣೆಯನ್ನು ಮೀಟುವುದು ಭಾವದ ಬೆರಳು. ಆಗ ಹುಟ್ಟುವುದು ಧ್ವನಿ. ಅದೇ ದೈವೀ-ಪ್ರಾಕೃತ. ಅದು ಎಲ್ಲೆಡೆಯಲ್ಲೂ ಒಂದೇ.

ಮೇಲೆ ಹೇಳಿದ ಗುಣಗಳೆಲ್ಲಾ ಸೇರಿದ್ದು ಕವಿತೆ. ಕವಿತಾ ಸೀತೆಯ ಜನಕ ಕವಿ. ಕವಿತಾರಚನೆಯು ಕಲೆ ಕವಿಯ ಹುಟ್ಟುಗುಣ. ಇದು ಅಭ್ಯಾಸ ದಿಂದ ಬಂದದ್ದಲ್ಲ. ಷೇಕ್ಸ್‌ಪಿಯರಿನ ಪ್ರತಿಭೆ ಕಾಲೇಜು ವಿದ್ಯಾಭ್ಯಾಸದ ಫಲವಲ್ಲ. ಅದು ದೈವದತ್ತ. ಸಹಜಸ್ಫೂರ್ತಿಯ ಜೊತೆಗೆ ಅಭ್ಯಾಸವೂ ಸೇರಿದರೆ ಕವಿತೆ ಹೆಚ್ಚು ಸುಸಂಸ್ಕೃತವಾಗುತ್ತದೆ. ಆ ಕವಿ ಹಿರಿಯ ಕವಿಯಾಗುತ್ತಾನೆ. ನಮ್ಮ ಪಂಪ ಆ ಹಾದಿಯವನು. ಇಂತಹ ಕವಿ, ವಸ್ತು ವಾಚಕರ ನಡುವಿನ ಸೇತು; ಪ್ರಕೃತಿಯ ಪ್ರತಿನಿಧಿ.

ಹಿರಿಯ ಕವಿ ತನ್ನ ದುಃಖವನ್ನು ಎಲ್ಲರಿಗೂ ಹಂಚಿಕೊಡಬಲ್ಲ; ಅದನ್ನು ಅವರದನ್ನಾಗಿ ಮಾಡಬಲ್ಲ. ವಾಲ್ಮೀಕಿ, ಕ್ರೌಂಚ ಮಿಥುನದ ಕರುಣ ಕಥೆಯಿಂದ ,ಜಗತ್ತಿನ ಕಣ್ಣೀರಿನ ಕಪ್ಪವನ್ನು ಸೆಳೆದಿಲ್ಲವೇ? ಅಷ್ಟೇ ಅಲ್ಲ, ಕವಿ ಜಗತ್ತಿನ ದುಃಖವನ್ನು ತನ್ನದನ್ನಾಗಿ ಮಾಡಿಕೊಳ್ಳುತ್ತಾನೆ. ಇದಕ್ಕೆ ಕವಿ

ಯಲ್ಲಿರುವ ಸಹಾನುಭೂತಿ ಕಾರಣ. ಇಂದು ಭಾರತದ ಸ್ವಾತಂತ್ರ್ಯದಾಹ ಆ ನೋವು ಗಾಂಧೀಜಿಯ ಒಂದೊಂದು ಮಾತಿನಲ್ಲೂ ಕಾಣಬರುವುದಿಲ್ಲವೇ? ಈ ದೃಷ್ಟಿಯಿಂದ ಗಾಂಧೀಜಿಯೂ ಕವಿಯೇ. ಬರೆದುದು ಗದ್ಯ, ನಿಜ, ಅದು ಹೊರ ರೂಪು ಮಾತ್ರ. ಗದ್ಯವಾಗಿ ಕಾಣುವ ವಚನಗಳೆಲ್ಲವೂ ಕವನಗಳೇ. ಈ ಸಹಾನುಭೂತಿ ಇಲ್ಲದಿದ್ದಲ್ಲಿ ಕವಿತೆಯ ಬಾಳು ವ್ಯರ್ಥ; ಕವಿಯ ಜನ್ಮ ನಿಷ್ಫಲ. ಸಹಾನುಭೂತಿಯಿಂದ ಕವಿಶ್ರೋತಾರರು ಒಂದಾಗುತ್ತಾರೆ. ಕವಿತೆ ಸಫಲವಾಗುತ್ತದೆ.

ಕವಿ ತನ್ನ ಭಾವವನ್ನು ಜನರದನ್ನಾಗಿ ಮಾಡಲೂ, ಜನರದನ್ನು ತನ್ನದಾಗಿ ಮಾಡಿಕೊಳ್ಳಲೂ ಉಪಮೆಯ ಉಪಯೋಗ ಮಾಡಿಕೊಳ್ಳುತ್ತಾನೆ. ಉಪಮೆ, ಕವಿವಾಚಕರ ನಡುವಿನ ನಂಟು. ಕವಿ ಯಾರೋ ಒಬ್ಬ ಗಂಡು ಕೈಹಿಡಿದ ಹೆಂಡತಿಯನ್ನು ಕೈಬಿಟ್ಟ ಕಥೆ ಹೇಳಬೇಕಾದರೆ ರಾಮ ಸೀತೆಯನ್ನು ಬಿಟ್ಟಂತೆ ಎಂದು ಹೇಳುತ್ತಾನೆ. ಸ್ವಾತಂತ್ರ್ಯರಹಿತ ಭಾರತ, ಜೀವವಿಲ್ಲದ ದೇಹ ಎಂದು ಹೇಳುತ್ತಾನೆ. ಜನಕ್ಕೆ ಆಗ ಕವಿಯ ಭಾವ ಅರ್ಥವಾಗುತ್ತದೆ. ಉಪಮೆ ಈ ದೃಷ್ಟಿಯಿಂದ ಕತ್ತಲಿದ್ದಲ್ಲಿ ಬೆಳಕು ಚೆಲ್ಲುವ ಬ್ಯಾಟರಿ!

ಕವಿಕೃತ ಕಾವ್ಯ ಜನರಿಗೆ ಅರ್ಥವಾಗಬೇಕು. ಇಲ್ಲವಾದರೆ ಅದು ಸಫಲವಾಗುವುದಿಲ್ಲ. ಪಂಡಿತರಿಗೆ ಮಾತ್ರವಲ್ಲ ಸಾಹಿತ್ಯ, ಪಾಮರರಿಗೂ ಅರ್ಥವಾಗಬೇಕು. ಅಷ್ಟೇ ಅಲ್ಲ, ಜನತೆಯೂ ಕವಿಯನ್ನು, ಕವಿತೆಯನ್ನು ಅರ್ಥ ಮಾಡಿಕೊಳ್ಳಲು ಯತ್ನಿಸಬೇಕು. ಆಂಗ್ಲರಲ್ಲಿ "Every people get the poet they deserve" ಎಂಬೊಂದು ಮಾತಿದೆ. ಅಂದರೆ ಷೇಕ್ಸ್‌ಪಿಯರ್ ಜನಿಸಿದಾಗ ಇಂಗ್ಲೆಂಡು ತುಂಬಾ ಸುಸಂಸ್ಕೃತವಾಗಿತ್ತೆಂದಲ್ಲ. ಈ ಮಾತು ಆಡಿದುದು ಕವಿಯ ಹಿರಿಮೆ ಕವಿತೆಯ ಬೆಲೆ ಅರ್ಥವಾದ ಮೇಲೆ. ಅರ್ಥ ಮಾಡಲು ಅಭ್ಯಾಸಬೇಕು. ಅಭ್ಯಾಸ ಮಾಡಲು ಅಭಿಮಾನ ಪ್ರೇರಕವಾಗುತ್ತದೆ. ಈ ಅಭಿಮಾನದಿಂದ ಜ್ಞಾನ ಬೆಳೆಯುತ್ತದೆ. ಅರಿವಿನಿಂದ ಅಭಿಮಾನ ಹೆಚ್ಚುತ್ತದೆ. ಆಗ ಹೇಳಬಹುದು: 'ಈ ಕವಿ ನಮ್ಮವನು; ನಮ್ಮ ದೇಶಕ್ಕೆ ತಕ್ಕವನು.'

'ಆಡಿದ್ದೆಲ್ಲಾ ಕಾವ್ಯ' ಎಂದು ಜನ ಆಡಿಕೊಳ್ಳುವುದುಂಟು. ಹೀಗಾಗಬೇಕಾದರೆ ಆಡುವವರೆಲ್ಲರೂ ಕವಿಗಳಾಗಬೇಕು. ಹಾಗಾಗಲು ಸಾಧ್ಯವಿಲ್ಲ.

ಕಾರಣ, ಕವಿಗೆ ಮೇಲೆ ಹೇಳಿದಂತೆ, ಪರರ ಸುಖದುಃಖಗಳನ್ನು ತನ್ನದ್ದಾಗಿ ಮಾಡಿಕೊಳ್ಳುವ ಶಕ್ತಿ ಬೇಕು. ಕವಿ 'ಪರಗತಸುಖದುಃಖೇಷು ಅನುಕೂಲಾಂತಃಕರಣತ್ವಂ' ಅದು ಕವಿಯ ಜೀವಗುಣ; ಈ ಗುಣ ಬರಲು ಕವಿ ಜ್ಞಾನಿಯಾಗಿರಬೇಕು. 'ತಿಳಿದಿದೆ' ಎನ್ನುವವನಿಗೆ ತಿಳಿದಿಲ್ಲ. 'ತಿಳಿದಿಲ್ಲ' ಎನ್ನುವವನಿಗೆ ಎಲ್ಲ ತಿಳಿದಿದೆ. ಇದು ತಿಳಿವಳಿಕೆಯ ಹಾದಿ. ತನಗೆ ತಿಳಿದಿದೆ ಎನ್ನುವವನು ಅಹಂಭಾವಿ. ಅದಿದ್ದವನಿಗೆ ಕಾವ್ಯಬ್ರಹ್ಮದ ಸಾಕ್ಷಾತ್ಕಾರ ಸಾಧ್ಯವಿಲ್ಲ. ಆ ಮುಕ್ತಿ ದೊರೆಯಲು ಕನಕದಾಸರು ಅಂದಂತೆ 'ನಾನು' ಹೋದರೆ ಆಗಬಹುದು, ಎನ್ನುವ ತಿಳಿವಳಿಕೆ ಬರಬೇಕು. ನಾನು ಅಜ್ಞ ಎಂದುಕೊಂಡಾಗ, ಪ್ರಾಜ್ಞನಾಗುವ ಬಯಕೆ ಹೆಚ್ಚಿದಾಗ ಕವಿ ತನ್ನ ಸುತ್ತುಮುತ್ತಲಿನದನ್ನು ಅರಿಯಲು ಯತ್ನಿಸುತ್ತಾನೆ. ಇದರಿಂದ ಪರರ ನೋವನ್ನು ಅನುಭವಿಸುವ ಶಕ್ತಿ, ಕವಿಗೆ ಹೆಚ್ಚಾಗುತ್ತದೆ. ಇದರಿಂದ ಬಂದ ಕವಿತೆ ಜನರಿಗೆ ಹೆಚ್ಚು ಅರ್ಥವಾಗುತ್ತದೆ. ಕಾರಣ ಅದು ಅವರ ಹೃದಯಕ್ಕೆ ಸಮೀಪದಲ್ಲಿರುತ್ತದೆ.

ಜನ ಒಂದು ಕವಿತೆಯನ್ನೋದಿ 'ಇದು ಅರ್ಥವಾಯಿತು; ಇದು ತಿಳಿಯೋ ಪದ್ಯ' ಎಂದರೆ ಅದು ಪದ್ಯದ ಗುಣವಲ್ಲ. ಜನರಿಗೆ ತಿಳಿದದ್ದನ್ನೇ ಕವಿ ಹೇಳಿದ. ಅದು ಕವಿಯ ಹಿರಿಮೆ. ಅಲ್ಲದೆ ಜನ ತಮಗೆ ತಿಳಿಯದಿದ್ದುದನ್ನು ತಿಳಿದಿದ್ದೇವೆ ಎನ್ನುವ ಭ್ರಾಂತಿಯನ್ನುಂಟುಮಾಡುವ ಕವಿತೆಯ ಮಾಯೆ ಬೆಳದಿಂಗಳಿನಂತಹ ಮೋಡಿ. ಕಂಡೂ ಕಾಣದ ಜಾದು. ನಾಯಿಗೆ ಮಲಗಿದ್ದಾಗ ಪೂರ್ವಜನ್ಮದ ನೆನಪಿರುತ್ತದೆಯಂತೆ. ಹಾಗೆ ಕವಿಯ ಮಾಯೆಗೆ ಒಳಗಾದ ಜನ ಅದು ತಮಗೆ ಅರ್ಥವಾಗಿದೆ ಎಂದುಕೊಳ್ಳುವರು. ಆದರೆ ಆ ಮಬ್ಬು ಹರಿದ ಮೇಲೆ ಮೊದಲಿನ ಅಜ್ಞಾನವೇ. ಶಬ್ದಕ್ಕೆ ಈ ಮಂತ್ರಶಕ್ತಿ ಇದೆ; ಚಿತ್ರಶಕ್ತಿ ಇದೆ. 'ಮಾತು ಜ್ಯೋತಿರ್ಲಿಂಗ' ಅಂದಿದ್ದಾನೆ ಅಲ್ಲಮಪ್ರಭು. ಕವಿತ್ವದಲ್ಲಿ ಮಾತು ಬೆಳಕಾಗುವುದೊಂದು ಶಕ್ತಿ. ಈ ಶಕ್ತಿ ಹೆಚ್ಚಿದಷ್ಟೂ ಒಳ್ಳೆಯದು. ಆಗ ಕವಿತ್ವಬಾಳನ್ನು ಬೆಳಗುವ ಜ್ಯೋತಿಯಾಗುತ್ತದೆ. ಅದನ್ನರಿತ ಜನ ಆಗ ಹೇಳುತ್ತಾರೆ: 'ಕರುಣಾಳು ಬಾ ಬೆಳಕೆ.'

---

# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೨ | ೨ | ಗಾದಿಯನ್ನು | ಗಾದೆಯನ್ನು |
| ೩ | ೨೭ | ಮಾತಿನಲ್ಲೂ | ಮಾತಿನಲ್ಲಿದೆ. |
| ೭ | ೨ | ಅರೆವು | ಅರಿವು |
| ೯ | ೧೨ | ನೆನಗಿಗೆ | ನೆನಪಿಗೆ |
| ೧೦ | ೨೦ | ಶ್ರೀನಿಜಗುಣರಂ | ಶ್ರೀನಿಜಗುಣರು |
| ೧೧ | ೭-೮ | ಕುಮಾರ,ವ್ಯಾಸ | ಕುಮಾರವ್ಯಾಸ |
| ೧೨ | ೧೪ | ವಾಜಸ್ರ.... | ವಾಜಸೇ |
| ೧೩ | ೧೪ | ಪ್ರತಿಷ್ಟಿತಾ | ಪ್ರತಿಷ್ಠಿತಾ |
| ೧೩ | ೧೨ | ಹಣ್ಣಿ | ಹಣ್ಣೆ |
| ೧೩ | ೧೪ | ಆಳಿದ | ಅಳಿದ |
| ೧೩ | ೧೫ | ಕನ್ನಡ | ಕನ್ನಡದ |
| ೧೩ | ೧೬ | ತಿಳಿದ | ತಿಳಿದು |
| ೧೪ | ೭-೮ | ತನ್ನ.... ವ್ಯೆಗಳ್ಳ ರನ್ನು | ೨ ಸಲ ಅಚ್ಚಾಗಿದೆ. ಒಂದೇ ಸಲ ಓದಬೇಕು |
| ೧೫ | ೨೪ | ರಾಜ. | ರಾಜ, |
| ೧೬ | ೧೫ | ಕುಲವನಂಸಿದಡೆ | ಕುಲವನರಸಿದಡೆ |
| ೧೬ | ೨೬ | ಏಳಿಗೆಗೆ | ಏಳಿಗೆ |
| ೧೯ | ೯ | ಆಭ್ಯಾಸ | ಆಭಾಸ |
| ೨೧ | ೩ | ....ತುನ್ನತಾಕಾರ, | ....ತುನ್ನತಾಕಾರ |
| ೨೮ | ೨೨ | ಬಿಳಿಯ | ಬಿಳಿಯರು |
| ೩೦ | ೨೧ | ;ಬ್ರಹ್ಮ | ;ಬ್ರಹ್ಮ |
| ೩೨ | ೫ | ....ಗಳನ್ನುಂಟ | ....ಗಳನ್ನುಂಟು |
| ೩೨ | ೧೪-೧೫ | ಸಂಸ್ಕೃತಿಯು | ಸಂಸ್ಕೃತಿಗಳು |
| ೩೪ | ೧೮ | ಅ ಧರ್ಮವ | ಆ ಧರ್ಮವೂ |

| | | | |
|---|---|---|---|
| ೩೬ | ೮ | ಅನ್ನಕೋಶಗ್ರಹ | ಅನ್ನಕೋಶಗೃಹ |
| ೩೭ | ೯ | ಲವಷ್ಟೆ | ಇವಷ್ಟೆ |
| ೩೮ | ೪ | ....ಲಕ್ಷಣವಲ್ಲ. | ....ಲಕ್ಷಣವಲ್ಲ, |
| ೩೮ | ೨೧ | ವಿರೋಧಿಗಳಲ್ಲಿ | ವಿರೋಧಗಳಲ್ಲಿ |
| ೪೨ | ೨೭ | ಸತ್ಯ ಹಿಂಸೆಗಳ | ಸತ್ಯ ಅಹಿಂಸೆಗಳ |
| ೪೪ | ೫ | ಸಮಾಜ ದೃದಯ | ಸಮಾಜ ಹೃದಯ |
| ೪೫ | ೮ | ಈ ಸರ್ಗವಿಧಿ | ಈ ನಿಸರ್ಗವಿಧಿ |
| ೪೬ | ೩ | ತೆಗೆಯುವ ಕೀಲಿಯು | ತೆಗೆಯುವ ಕೀಲಿಕೈಯು |
| ೪೬ | ೨೦ | ಮಾಡುವದಕ್ಕ್ಯಾಗಿ | ಮಾಡುವದಕ್ಕಾಗಿ. |
| ೪೭ | ೨೨ | ಪತಿತೋದ್ಧಾರ | ಪತಿತೋದ್ಧಾರ |
| ೪೮ | ೨೩ | ತಿಂದಿಲ್ಲ | ತಿಂದಲ್ಲ |
| ೪೭ | ೨೪ | ಈ ನಿರೂಪವು | ಈ ವಿರೂಪವು |
| ೪೮ | ೨೩ | ....ಯುಂಡಿಲ್ಲ | ....ಯುಂಡಲ್ಲ, |
| ೪೮ | ೨೫ | ಸಾಧಿಸುವ | ಸಾಧಿಸುವವ |
| ೪೯ | ೨೬ | ಕೂಗಿತೋ | ಕೂಗೀತೋ |
| ೫೩ | ೧೦ | ಐಕ್ಯತೆದಲ್ಲಿ | ಐಕ್ಯದಲ್ಲಿ |
| ೫೩ | ೧೨ | ಮಹೂರ್ತ | ಮುಹೂರ್ತ |
| ೫೪ | ೧೪ | ಶಕ್ತಿ ಪಾಟವನ್ನೇ | ಶಕ್ತಿ ಪಾಟವವನ್ನೇ |
| ೫೬ | ೨೫ | ಅಂಧತಮಸ್ಸಿನಿಂದ | ಅಂಧಂತಮಸ್ಸಿನಿಂದ |
| ೫೭ | ೧೧ | ಆಪತ್ಯ | ಅಪತ್ಯ |
| ೫೯ | ೧೭ | ಕೇಂದ್ರಿಯಕ್ಕೂ | ಇಂದ್ರಿಯಕ್ಕೂ |
| ೬೦ | ೧ | ಬಗೆ ಬೇರೆ. | ಬಗೆ ಬೇರೆ ಬೇರೆ. |
| ೬೪ | ೩ | ಪಚ್ಚಾಗುವನು | ಪಚ್ಚಾಗುವದು |
| ೬೫ | ೯ | ಮಕ್ಕಳ | ಮಕ್ಕಳು |
| ೬೬ | ೩ | ಗಸುವಿನ | ಕಸುವಿನ |
| ೬೭ | ೧೩ | ನಗೆಗಳು | ನಗೆಗಳ |
| ೭೨ | ೬ | ಇವರ | ಇದರ |

| | | | |
|---|---|---|---|
| ೭೩ | ೩೪ | ವೇದಾಂಗಗಳಿದ್ದಲ್ಲಿ | ವೇದಾಂತಿಗಳಿದ್ದಲ್ಲಿ |
| ೭೪ | ೧೪ | ಹರುಳು | ಹುರುಳು |
| ೭೪ | ೩೬ | ಜಾಗ್ರತ ವಿರಹಿತ, | ಜಾಗ್ರತಿ ವಿರಹಿತ |
| ೭೭ | ೧೨ | ಈ ಹಾದಿ ಶಾಸ್ತ್ರ | ಈ ಹಾದಿ. ಶಾಸ್ತ್ರ |
| ೭೭ | ೧೪ | ವಿಷ ಅನುಭವ | ವಿಷಯಾನುಭವ |
| ೭೭ | ೧೫ | ಅನುಭವ | ಅನುಭವದ |
| ೭೮ | ೨೬ | ಕೀಲಕಾರ್ಯಗಳ | ಕೀಲಕಾರ್ಯಗಗಳ |
| ೮೧ | ೧೯ | ಧಾರಿಣೀಯೋ | ಧಾರಿಣಿಯೋ |
| ೮೩ | ೨ | ಒಕ್ಕೊರಿಸಿಂದ | ಒಕ್ಕೊರಲಿನಿಂದ |
| ೮೭ | ೨ | ಜೀದನದೊಳಗಿನ | ಜೀವನದೊಳಗಿನ |
| ೮೭ | ೯ | ಆತ್ಮರತಿಗೂ | ಆತ್ಮರತಿಯೂ |
| ೮೭ | ೯ | ದಿವ್ಯವತೆಯನ್ನೆ | ದಿವ್ಯತೆಯನ್ನೆ |
| ೮೭ | ೨೭ | ಆಧ್ಯಾತ್ಮಿಕೆಯ | ಆಧ್ಯಾತ್ಮಿಕತೆಯ |
| ೮೮ | ೨ | ದೇವ ಜೀವನನ್ನು | ದೇವಜೀವನವನ್ನು |
| ೮೮ | ೯ | ಸಾಧಕದಲ್ಲಿ | ಸಾಧನದಲ್ಲಿ |
| ೮೯ | ೨೧ | ನಿಃಸಾಮುವ್ರೋ | ನಿಃಸೀಮವೋ |
| ೮೯ | ೨೩ | ಜೀಮ | ಜೀವ. |
| ೯೦ | ೧೭ | ತಲೆಯುಲ್ಲಾಡುಸು | ತಲೆಯುಲ್ಲಾಡಿಸು |
| ೯೦ | ೧೮ | ಸಾರಿದಂತೆ, ಪತನಹೇತು | ಸಾರಿದಂತೆ ಪತನಹೇತು. |
| ೯೧ | ೨೫ | ವಿದ್ಯಾಭ್ಯಾಸ | ವಿದ್ಯಾಭ್ಯಾಸ |
| ೯೨ | ೩ | ....ಪತಿಯಾಗದ್ದ | ಪತಿಯಾಗಿದ್ದ |
| ೯೩ | ೧೨ | ರಾನಡೆಗೆ | ಶ್ರೀ ರಾನಡೆಯವರಿಗೆ |
| ೯೩ | ೨೬ | ಅವವಿಂದರು | ಅರವಿಂದರು |
| ೯೪ | ೧ | ....ದಿಂದ | ದಿಂದ ’ |
| ೯೪ | ೨೦ | ಆತನೂ | ಆತನೂ |
| ೯೬ | ೪ | ಅಜ್ಞೆ | ಆಜ್ಞೆ |

| | | | |
|---|---|---|---|
| ೯೫ | ೧೭ | ತೆಂಬಾ | ತುಂಬಾ |
| ೯೮ | ೨೩ | ಇವರಿಬ್ಬರು | ಇವರಿಬ್ಬರ |
| ೯೬ | ೧ | ಅರಿಸಿ | ಅರಸಿ |
| ೯೬ | ೨೭ | ಬ್ರಹದ್ಗ್ರಂಥ | ಬೃಹದ್ಗ್ರಂಥ |
| ೯೭ | ೪ | ಅರವಿಂದರಗೆ | ಅರವಿಂದರಿಗೆ |
| ೯೭ | ೧೫ | Evoiution | Evolution |
| ೯೮ | ೨ | ತಾಳಿದ್ದಾರೆ. | ತಾಳಿದ್ದಾರೆ |
| ೯೯ | ೫ | ಕಗ್ಗಿಸಿಲ್ಲ, ಜೀವವನ್ನು | ಕುಗ್ಗಿಸಿಲ್ಲ, ಜೀವನವನ್ನು |
| ೯೯ | ೧೩ | ವಿಸದೃಶ್ಯ | ವಿಸದೃಶ |
| ೧೦೧ | ೭ | ವಿಹಾರಗಳು. | ವಿಹಾರಿಗಳು . |
| ೧೦೧ | ೨೦ | ಅಶ್ಲೀಲ | ಅಶ್ಲೀಲ |
| ೧೦೧ | ೨೩ | ಸೂ ತ್ರತೆಯೂ | ಸೂಕ್ಷ್ಮತೆಯೂ |
| ೧೦೩ | ೩ | ಮಾತರಿರುವರು | ಮಾತರಿವರು |
| ೧೦೪ | ೧೩ | ಮಂಜಿ | ಮಂಜೆ |
| ೧೦೪ | ೨೫ | ಅವರ | ಅವರು |
| ೧೦೫ | ೪ | ಅಗಲಿ | ಆಗಲಿ |
| ೧೦೫ | ೧೬ | ಆವರ | ಅವರ |
| ೧೦೮ | ೩ | ಕುರ್ಯ | ಕಾರ್ಯ |
| ೧೦೮ | ೧೮ | ಆಸ್ಪೃಶ್ಯವಾಗಿ | ಅಸ್ಪೃಶ್ಯವಾಗಿ |
| ೧೧೦ | ೧೪ | ಶುದ್ಧೆಯ | ಶ್ರದ್ಧೆಯ |
| ೧೧೧ | ೨೪ | ಅನುಕೂಲ್ಯ | ಆನುಕೂಲ್ಯ |
| ೧೧೨ | ೨೭ | ಆದ್ಯತನರನ್ನು | ಅದ್ಯತನರನ್ನು |
| ೧೧೩ | ೧೯ | ವ್ರೋಷಕತೆ | ಪೋಷಕತೆ |
| ೧೧೪ | ೨೭ | ಜಿವನ | ಜೀವನ |
| ೧೧೫ | ೩ | ಎನಿಸಮುಂತಿದೆ | ಎನಿಸುವಂತಿದೆ |
| ೧೧೫ | ೧೧ | ರಿಂತಿ | ರೀತಿ |

| | | | |
|---|---|---|---|
| ೧೧೫ | ೧೬ | ಜಿವನದಲ್ಲಿಯ | ಜೀವನದಲ್ಲಿಯ |
| ೧೧೬ | ೨ | ಸಾಹಿತ್ಯದಲ್ಲಿಯ ಬೆಂಡ | ಸಾಹಿತ್ಯದಲ್ಲಿಯೂ ಬೆ |
| ೧೧೬ | ೬ | ಕವಾಟ | ಕವಾಟ |
| ೧೧೬ | ೨೫ | ವಂಸತೋತ್ಸ ವವು | ವಸಂತೋತ್ಸವವು |
| ೧೧೬ | ೨೬ | ಅದರು | ಆದರ |
| ೧೧೭ | ೬ | ರದ್ರ ರೂಪಕ ವಾಗಿ | ರುದ್ರ ರೂಪಕವಾಗಿ |
| ೧೧೭ | ೧೧ | ರದ್ರನಾಟಕ | ರುದ್ರನಾಟಕ |
| ೧೨೦ | ೨ | ದೇಶವ್ರೇಮ | ದೇಶಪ್ರೇಮ |
| ೧೨೦ | ೯ | ಜೀವವಿಣೆ | ಜೀವವೀಣೆ |
| ೧೨೦ | ೨೦ | ಕಾವ್ಯಗುಣ ದಂದಲೂ | ಕಾವ್ಯಗುಣದಿಂದಲೂ |
| ೧೨೦ | ೨೧ | ಸಮ್ಮತ್ವ | ಸಮತ್ವ |
| ೧೨೧ | ೨೫ | ಅದರದರ್ಥ | ಅದರದರ್ಥ |
| ೧೨೨ | ೪ | ಬೇರೊಂಮ | ಬೇರೊಂದು |
| ೧೨೨ | ೧೯ | ಪ್ರಸಾರ | ಪ್ರಸಾದ |
| ೧೨೩ | ೩ | ಉಳಿದಲ್ಲಿ | ಉಳಿದೆಡೆಯಲ್ಲಿ |
| ೧೨೩ | ೭ | 'ಅರೆಯುವುದಿಲ್ಲ | 'ಆಶೆಯೂವುದಿಲ್ಲ |
| ೧೨೩ | ೨೧ | ಬೆಳಪನಲ್ಲಿ | ಬೆಳಕಿನಲ್ಲಿ |
| ೧೨೩ | ೨೨ | ಜಿೂವನ | ಜೀವನ |
| ೧೨೩ | ೨೬ | ಕಂಠಕ್ರೀಯ | ಕಂಠಶ್ರೀಯ |
| ೧೨೪ | ೧೧ | ....ಯನ್ನುವಾಗ, | ಯೆನ್ನುವಾಗ, |
| ೧೨೪ | ೪ | ಸ್ವಂತ | ಸ್ವಂತ |
| ೧೨೪ | ೨೬ | ಬರೆದೊಡು | ಬರೆದಾಡು |
| ೧೨೪ | ೨೭ | ರುಚಿಯಯಗಿ | ರುಚಿಯಾಗಿ |

| | | | |
|---|---|---|---|
| ೧೨೬ | ೩ | ಅಚ್ಯಗನ್ನಡ | ಅಚ್ಚಗನ್ನಡ |
| ೧೨೬ | ೯ | ವೈಲಕ್ಷಣ್ಮ | ವೈಲಕ್ಷಣ್ಯವಾಗಿದೆ. |
| ೧೨೭ | ೧೪ | ಮದ್ದಿನ ಮರಿ | ಮುದ್ದಿನ ಮರಿ |
| ೧೨೭ | ೧ | ಎರಡೂ | ಎರಡು |
| ೧೨೮ | ೧೪ | 'ಶೀ' | 'ಶ್ರೀ' |
| ೧೨೮ | ೨೨ | ಅವರ | ಅವರ |
| ೧೩೧ | ೨ | ಕಂಡಿದೆ | ಕಂಡಿವೆ |
| ೧೩೩ | ೧೧ | ಮನಸ್ಸು | ಮನಸ್ಸೂ |
| ೧೩೩ | ೨೫ | ಸೂಚಿತವಾಗಿರುವ. | ಸೂಚಿತವಾಗಿರುವವು. |
| ೧೩೫ | ೧೧ | ....ವಾದರು ಏನು. ? | ....ವಾದರೂ ಏನು. ? |
| ೧೩೫ | ೧೬ | ಹ್ಯಾಗೆ | ಹಾಗೆ |
| ೧೪೦ | ೫ | ಲಕ್ಷ್ಮಿಗೆ | ಲಕ್ಷ್ಮಿಗೆ |
| ೧೪೨ | ೨೪ | ಕರೆಯುತ್ತಿದ್ದೆ | ಕರೆಯುತ್ತಿದೆ. |
| ೧೪೬ | ೨ | ಗಾಧೀಜಿಯ | ಗಾಂಧೀಜಿಯ |
| ೧೪೭ | ೫ | ಜನ | ಜನ್ಮ |
| ೧೪೮ | ೧ | ಮಾಯ | ಮಾಯೆ |